ಅವಸರದಲ್ಲಿ ಕಲಸಿದ ಅವಲಕ್ಕಿಗೆ, ಕಿಸೆಯಲ್ಲಿ ಹಠಾತ್ತನೆ ಮತ್ತೆ ಕೈಗೆ ಸಿಕ್ಕ ಹಳೇ ಮುರುಕು ಪೆಪ್ಪರಮೆಂಟಿಗೆ, ಹತ್ತಾರು ಕಲ್ಲು ರಿವ್ವ ರಿವ್ವ ಬೀಸಿ ಮೈ-ಕೈ ತರಿದುಕೊಂಡು ಸ್ವಂತಕ್ಕೆ ಗಳಿಸಿಕೊಂಡ ಹೀಚು ಒಗರು ಹುಣಿಸೆ, ನೆಲ್ಲಿ, ಬೋರೆಕಾಯಿಗೆ-ಎಂದಿಲ್ಲದ, ಎಲ್ಲಿಲ್ಲದ, ಯಾರಿಗೂ ಎಟುಕದ ರುಚಿ! ಹೊರತು ಎಲ್ಲಿ ಹೇಗೆ ಯಾವಾಗ ಏನನ್ನು ತಿನ್ನಬೇಕು ಎಂಬುದನ್ನು ಮೊದಲೇ ನಿಗದಿ ಪಡಿಸಿಕೊಂಡು, ಗಂಭೀರವಾಗಿ, ಹೋಟೆಲಿನಲ್ಲಿ, ಮರಣದಂಡನೆಗೊಳಗಾದಂತೆ ಮುಖಕ್ಕೆ ಇಸ್ತ್ರಿ ಹಾಕಿಕೊಂಡು ಕೂತವರಿಗೆಲ್ಲಿಂದ ಸಿಗಬೇಕು ಈ 'ಅಚ್ಚರಿಯ ಭಾಗ್ಯ'!

ನಮಗೆ ಬೇಕಾದವರು, ಏನೇನೂ ಪೂರ್ವ ಸೂಚನೆಯಿಲ್ಲದೆ ಸಿಕ್ಕರೆ, ಮನೆಗೆ ಬಂದರೆ ಅದೊಂದು ಅಯಾಚಿತ ಹಬ್ಬ! ಆಗ, ಏನು ಕೊಟ್ಟರಿ, ಏನು ಅಂದಿರಿ, ಏನು ತಿಂದಿರಿ-ವನ್ನುವುದು ಗೌಣವಾಗಿ, ಹಸಿಬಿಸಿ ಭೆಟ್ಟಿಯ ಖುಷಿಯೇ ಬೆಚ್ಚಗಿನ ಸತ್ಯ. 'ಹಸಿ' ಮತ್ತು 'ಬಿಸಿ'ಯೇ ಈ ಸಖ್ಯದ ಜೀವಾಳ.

ಸಾಹಿತ್ಯವೂ ಇದಕ್ಕೆ ಹೊರತಲ್ಲ. ಬರವಣಿಗೆಯ ಪ್ರಥಮ ಹಂತ ದಾಟಿದ ಬರಹಗಾರರು, 'ಕೃತಿಯಿಂದ ಕೃತಿಗೆ ಬೆಳವಣಿಗೆ' ಎಂಬ ಬಾಲಿಶ ತರ್ಕ ಇಟ್ಟುಕೊಂಡು, ಬೇಕೆಂತಲೇ ಆಟಗೀಟ ಬಿಟ್ಟು ಮಳ್ಳು ಗಂಭೀರತೆ ತೊಟ್ಟ ಪ್ರಾಯದ ಹುಡುಗ ಹುಡುಗಿಯರಂತೆ ಆಗಬೇಕಿಲ್ಲ. 'ಹಸಿಬಿಸಿ'ಯನ್ನು ಬುದ್ಧಿಪೂರ್ವಕ ತ್ಯಜಿಸಿದ ಬರವಣಿಗೆ, ವೇಷವನ್ನೇ ಕಳಚಿಡದ ಪಾತ್ರಧಾರಿಯಂತೆ ಬಲುಬೇಗ ದಣಿಯುತ್ತದೆ, ದಣಿಸುತ್ತದೆ. ಬದುಕಿನ ಹಸಿ ಮತ್ತು ಜೀವಿಯ ಬಿಸಿಯಿಂದ ಬರವಣಿಗೆಗೆ ಜೀವ ಬರುತ್ತದೆ. ಎಂತಹ ಸಂಶೋಧಕರಿಗೂ ಎಟುಕದ ಪರಮ ಸತ್ಯವೊಂದು 'ಹಸಿಬಿಸಿ' ಎಳೆಗಣ್ಣಿಗೆ ಫಕ್ಕನೆ ಹೊಳೆದುಬಿಡಬಹುದು. ಜೀವಂತಿಕೆಯ ಲಕ್ಷಣವಾದ 'ಹಸಿಬಿಸಿ'ಯನ್ನು ಹೊಸ ಬರಹಗಾರರು ಖಂಡಿತ ಕೊಡವಿಕೊಳ್ಳಬೇಕಾಗಿಲ್ಲ.

ನಮ್ಮ ನವೆಂಬರ್ ಸಂಚಿಕೆಯ ರೂಪ, ಹೂರಣ, ವೈವಿಧ್ಯ ಮೆಚ್ಚಿ ನಿಮ್ಮಿಂದ ಬಂದ ಪ್ರತಿಕ್ರಿಯೆ ಅದ್ಭುತ. ಈ ಬಾರಿ, ಗಂಭೀರತೆಯನ್ನು ಸರಳವಾಗಿಯೇ ಎದುರಿಸಲು ಯತ್ನಿಸುವ ಕೆಲವು ಕಥೆಗಳನ್ನು ಕೊಟ್ಟಿದ್ದೇವೆ. ಮಣ್ಣಿನ ಕಲೆಗಾರ್ತಿ ಹಸೆ ಗೌರಮ್ಮ, 'ಸಂವಾದ ಚಿಕಿತ್ಸಾ' ತಜ್ಞ ಮೀನಗುಂಡಿ ಸುಬ್ರಹ್ಮಣ್ಯಂ ನಮ್ಮ ಅಭಿಮಾನದ ಅತಿಥಿಗಳು.

ನಮ್ಮ 'ಬಿಡಾರ' ಬದಲಾಗಿದೆ. ಹೊಸ ವಿಳಾಸ ದಯವಿಟ್ಟು ಗಮನಿಸಿ.

ಸಂಪಾದಕ



ಪ್ರೀತಿ ಸಂಯುಕ್ತಾ

# ಭಾವ ಲೋಕ

## ಕತೆಗಳು



## ಶತಮಾನದ ಮೆಲುಕು



## ವಿಶ್ವ ಭಾರತಿ

ದಿಡ್ಡಿ ಬಾಗಿಲು



## ರಾಗ ಚಂದ್ರಮಧು



## ಕವಿ ಸಮಯ





# ಭಾವನಾ

ಸಂಪುಟ -1 ಸಂಚಿಕೆ - 9

ಡಿಸೆಂಬರ್ 2000

ಪ್ರಕಾಶಕರು, ಮುದ್ರಕರು, ಮಾಲಿಕರು
**ವಿಜಯ ಸಂಕೇಶ್ವರ**
ಆನಂದ್ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್

ಸಂಪಾದಕ
**ಜಯಂತ ಕಾಯ್ಕಿಣಿ**

**ಮುಖಪುಟ ಕಲಾಕೃತಿ :** ಹಸೆ ಗೌರಮ್ಮ

**ಸಂಚಿಕೆಯ ಕಲಾವಿದರು:** ಸೃಜನ್, ಇಕ್ಬಾಲ್ ಅಹ್ಮದ್, ಚಂದ್ರಕಾಂತ ಕುಸನೂರ್, ದೇವದಾಸ್, ಗೀತಾ ಸಾಳುಂಕೆ, ರಾಠೋಡ್, ಉಮೇಶ್, ರಾಧಾಕೃಷ್ಣ ಬಂದಗದ್ದೆ ಪ್ರೀತಿ ಸಂಯುಕ್ತಾ, ಸುಮಂಗಲಾ ಬಾದರದಿನ್ನಿ, ವಿ.ಎ. ಚೆಟ್ಟಿ, ಪ್ರವೀಣ್ ರಬಕವಿ, ಚೌಗಲೆ, ಋತ ಸುಮಂತ್, ಬಸವರಾಜ್, ಅಪಾರ, ಶಶಿಧರ್, ಶ್ರೀಪಾದ್

**ಸಂಪಾದಕೀಯ ಕಾರ್ಯಾಲಯ**
ನಂ. 38, ಎ.ಎಂ. ರಸ್ತೆ, ಕಲಾಸಿಪಾಳ್ಯಂ ನ್ಯೂ ಎಕ್ಸ್‌ಟೆನ್‌ಷನ್
ಬೆಂಗಳೂರು - 560 002
ಫೋನ್: 2246350, 2226044, 2229102
ಫ್ಯಾಕ್ಸ್: 080-2246349
E-mail: vksbc@ bgl.vsnl.net.in

**ಪ್ರಧಾನ ಕಛೇರಿ**
ಗಿರಿರಾಜ ಅನೆಕ್ಸ್
ಸರ್ಕ್ಯೂಟ್ ಹೌಸ್ ರಸ್ತೆ, ಹುಬ್ಬಳ್ಳಿ
ದೂರವಾಣಿ: 0836-253656, 253657
ಫ್ಯಾಕ್ಸ್: 0836-253630

## ಮಧುವನ



## ಸಹವಾಸ



## ಕ್ಯಾನ್‌ವಾಸ್



## ಅಂಕಣಗಳು









# ಮೊಗ್ಗಿನ ಜಡೆ



ಪೂರ್ಣಪ್ರಜ್ಞ
4ನೇ ತರಗತಿ, ಕಾರ್ಕಳ

## ಕೋಗಿಲೆ ಮತ್ತು ಕಾಗೆ

ಕೋಗಿಲೆಯ ಗಾನ
ಎಷ್ಟು ಚೆಂದ ಅಂತ
ಹೇಳುತ್ತಾರೆ. ಆದರೆ
ಕಾಗೆಯ ಗಾನ
ಚೆನ್ನಾಗಿಲ್ಲ ಎಂಬುದು
ತಪ್ಪು
ಕಾಗೆ ಪಾಪ
ಕೋಗಿಲೆ ಕೇಡಿ.



ಋತ್ವಿಕ್

## ಮನೆಯ ಬಗ್ಗೆ

ಮನೆ ಎಂದರೆ
ಅಪ್ಪ, ಅಮ್ಮ, ಅಣ್ಣ, ತಮ್ಮ
ಇರುತ್ತಾರೆ
ಅಥವಾ
ಅವರೊಡನೆ
ಅಜ್ಜ-ಅಜ್ಜಿ, ಚಿಕ್ಕಪ್ಪ-ದೊಡ್ಡಪ್ಪ
ಎಲ್ಲಾ ಇರುತ್ತಾರೆ
ಮೊದಲು ಹೇಳಿದ್ದು ಚಿಕ್ಕ ಕುಟುಂಬ
ಇನ್ನೊಂದು- ದೊಡ್ಡ ಕುಟುಂಬ
ಅಲ್ಲವೇ?

## ಶಿವರಾಮ ಕಾರಂತರ ಬಗ್ಗೆ

ಶಿವರಾಮ ಕಾರಂತರು
1997ನೇ ಇಸವಿಯಲ್ಲಿ
ಸತ್ತು ಹೋದರು
ಅವರು 1998ನೆಯ
ಇಸವಿಯನ್ನು ನೋಡಿ
ಸತ್ತು ಹೋಗಬೇಕಾಗಿತ್ತು

## ಕೇರೆ ಹಾವು

ಕೇರೆ ಹಾವನ್ನು
ನೋಡಿದ ಕೂಡಲೇ
ಓಡುತ್ತೇವೆ. ಅದು ತಪ್ಪು.
ಪಾಪ ಅದು
ಏನೂ ಮಾಡಲ್ಲ

## ಕನ್ನಡ ಮತ್ತು ಇಂಗ್ಲಿಷ್

ಕನ್ನಡ
ಕಲಿಯುವುದು
ಸುಲಭ.
ಇಂಗ್ಲಿಷ್ ಕಷ್ಟ
ಬಹಳ ಕಷ್ಟ.
ಬೇಕಾದರೆ ನೋಡಿ.

## ಲೈಟ್ ಬಗ್ಗೆ

ಲೈಟ್ ಪಿಳಿ ಪಿಳಿ
ಅಂದ ಮೇಲೆ
ಬರುತ್ತದೆ. ಅಲ್ಲವೇ?

## ಮೇಣದ ಬತ್ತಿ ಬಗ್ಗೆ

ಮೇಣದ ಬತ್ತಿ
ಬೆಳಕು ಕೊಡುತ್ತದೆ ನಿಜ.
ಅದಕ್ಕೆ ತಕ್ಕ ಹಾಗೆ
ನಾವು ಬರೆಯದಿದ್ದರೆ
ಅದು ಚಿಕ್ಕದಾಗುತ್ತಾ
ಬಂದು ಆರಿಹೋಗುತ್ತದೆ.

# ಗೊಂಬಿ ಮದುವೆ




ಇವತ್ತು ಭಾನುವಾರ. ಈ ದಿನವೆಂದರೆ ನಮ್ಮ ಪಾಲಿಗೆ ಸ್ವರ್ಗದ ದಿನ. ಖುಷಿ ಕೊಡುವ ದಿನ. ಅದರಲ್ಲೂ ಮೊದಲೇ ನಿಶ್ಚಯಿಸಿದಂತೆ ಗೊಂಬಿ ಮದುವೆ ಆಟ ನಡೆಯಬೇಕಿದೆ. ನಾವೆಲ್ಲ ಗೆಳೆಯ-ಗೆಳತಿಯರು ಹೊಸ ಹೊಸ ಉಡುಪುಗಳನ್ನು ತೊಟ್ಟುಕೊಂಡು, ಗೌಡರ ಮನೆಯಲ್ಲಿ ಕೈಗೆ ಸಿಕ್ಕಿದ ಬೆಲ್ಲ, ಸಕ್ಕರೆ, ಪುಟಾಣಿ ಹಿಟ್ಟು, ಶೇಂಗಾ ಮುಂತಾದ ತಿಂಡಿಗಳೊಂದಿಗೆ ಬಂದು ಸೇರಿದ್ದೆವು.

ಎರಡು ಸುಂದರ ಗೊಂಬೆಗಳಿಗೆ ಸ್ನಾನ ಮಾಡಿಸಿ ಚೆಂದದ ಬಟ್ಟೆ ತೊಡಿಸಿದೆವು. ನಮ್ಮಲ್ಲಿಯೇ ಕೆಲವರು ಬೀಗರಾಗಿ ಬಂದರು. ಅವರಿಗೆ ತಿಂಡಿ ತಿನ್ನಿಸುವದು ಎಲ್ಲವೂ ಮುಗಿಯಿತು. ಇನ್ನೇನು ಅಕ್ಕಿಕಾಳು ಬೀಳುವ ಹೊತ್ತು, ಗದ್ದಲ ಆರಂಭವಾಯಿತು. ನಮ್ಮ ಗದ್ದಲಕ್ಕೆ ಗೌಡರ ಒಳಮನೆಯಿಂದ ಅಜ್ಜ-ಅಜ್ಜಿ ಬಂದರು, ನಮ್ಮೊಡನೆ ಕೂಡಿದರು. ಅವರು ನಮ್ಮೂರಿನ ಗೌಡ ಗೌಡತಿಯರು. ನಮ್ಮ ಹುಡುಗರಲ್ಲಿ ರಾಮು ಬಹಳ ಕೀಟಲೆಯವನು. ಸ್ವಲ್ಪ ದೊಡ್ಡವನು. ತನ್ನ ದೊಡ್ಡ ಧ್ವನಿಯಲ್ಲಿ, ''ತಡಿರೋ ಊದುವದು, ಬಾರಿಸೋದು ನಿಲ್ಲಿಸರೊ'' ಎನ್ನುತ್ತಾ ಶಾಂತಿ ಶಾಂತಿ ಎಂದು ಮಾತನಾಡಲಾರಂಭಿಸಿದ. ''ಇವತ್ತ ನಮ್ಮ ಗೊಂಬಿ ಲಗ್ನದ ಜೊತೆಗೆ ಮನುಷ್ಯರ ಮದುವೆ. ಮನುಷ್ಯರಂದ್ರ ಮುದುಕರ ಮದವಿ, ಇಲ್ಲೆ ಅದರಲ್ಲಾ ನಮ್ಮ ಗೌಡರು-ಗೌಡತಿಯರು, ಅವರ ಮದುವೆ'' ಎಂದನವ. ನಾವೆಲ್ಲ ಚಪ್ಪಾಳೆ ತಟ್ಟಿದೆವು, ಕುಣಿದೆವು. ಗೌಡರು ಸಣ್ಣಗೆ ನಗುತ್ತಿದ್ದರು. ಕೆಂಚ, ಅನಿಲ, ರಾಮು ಕೂಡಿಕಂಡು ಅವರನ್ನು ಮದುವೆ ಮಂಟಪದಲ್ಲಿ ಕೂಡಿಸಿದರು. ನಾನು ಶಾಂತಿ ಮಂತ್ರ ಹೇಳಿದೆ. ಹೀಗೆ ಗೊಂಬಿಯ ಮದುವೆಯಲ್ಲಿ ಗೌಡರು ಎರಡನೇ ಬಾರಿಗೆ ಅಕ್ಕಿಕಾಳು ಹಾಕಿಸಿಕೊಂಡರು ಅಂತ ನಮ್ಮೆಲ್ಲರಿಗೂ ಹಿಗ್ಗೊ ಹಿಗ್ಗು.

ಗೊಂಬಿ ಮದುವಿ ಮಾಡಿದೆವು
ಮದುವಿ ಆಟ ಮುಗೀತು
ಆಟಪಳಿ ಡಂಗೂಳೊ

ಎನ್ನುತ್ತಾ ಎಲ್ಲರೂ ನಮ್ಮ ನಮ್ಮ ಮನೆಯ ಕಡೆ ನಡೆದೆವು.



**ಶ್ವೇತಾ ಮ. ಗೊದ್ದಪ್ಪಿ**
7ನೇ ತರಗತಿ, ಶಹಾಪೂರ

ಇದು ಮುದ್ದು ಮಕ್ಕಳ ಮುಕ್ತ ಪುಟ. ಮಕ್ಕಳೇ ಬರೆದ ಚಿತ್ರ, ಕಥೆ, ಚುಟುಕ, ಕವಿತೆಗಳಿಗೆ ಸ್ವಾಗತ.

# ಕ್ಷಮಿಸುವೆಯಾ ಗಿಡಬಾಲೆ...

ಭಾವ ಬಿಂದು

ಅವನು ಎಸೆದ ಕಬ್ಬಿಣದ ಸಲಿಕೆ ನೇರವಾಗಿ ಗುಲಾಬಿ ಗಿಡಕ್ಕೆ ಬಿದ್ದು, ಒಂದು ಟೊಂಗೆ ಕಚಕ್ಕನೆ ಕತ್ತರಿಸಿ ಬಿದ್ದಿತ್ತು. ಹೊಗೆಗೂಡು ತಿವಿಯಲೆಂದು ಮನೆಯ ಟೆರೇಸಿಗೆ ಹತ್ತಿದ್ದ. ಮೆಟ್ಟಿಲಿಲ್ಲದ ಟೆರೇಸನ್ನು ಕಷ್ಟಪಟ್ಟು ಏರಿದ್ದ. ರಣ ಬಿಸಿಲು. ಅವನಿಗೆ ಎತ್ತರದ ಭಯ ಬೇರೆ. ನೆಲದ ಮೇಲಿಂದ ನೋಡುವಾಗ ಅದು ಅಂಥ ಎತ್ತರವೆನಿಸುತ್ತಿರಲಿಲ್ಲ. ಆದರೆ ಅದೇ ಎತ್ತರ ಮೇಲಿಂದ ಕೆಳಗೆ ನೋಡುವಾಗ ಬೇರೆಯೇ ಆಗಿಬಿಡುತ್ತಿತ್ತು. ಪ್ರಾಣ ಗಂಟಲಿಗೆ ಬಂದಂತಾಗುತ್ತಿತ್ತು. ಇಳಿಯುವುದು ಹೇಗೆಂದು ತೋಚದೆ ಬೆವರಿದ. ಭಯ ಮತ್ತು ಅವಮಾನ. ಅಂಥ ಸ್ಥಿತಿ ಮನುಷ್ಯನಲ್ಲಿ ಕ್ರೌರ್ಯವನ್ನು ಕೆರಳಿಸುವುದು ಸಹಜ. ಕುರುಡಾಗಿ ಅವನು ಎಸೆದ ಆ ಕಬ್ಬಿಣದ ಸರಳು ಗುಲಾಬಿ ಗಿಡದ ಮೇಲೆರಗಿ ಟೊಂಗೆ ಕಡಿದು ಬಿದ್ದಿತ್ತು.

ಆ ರೀತಿ ತನ್ನಿಂದ ಏನಾದರೂ ತಪ್ಪು ಘಟಿಸಿದರೆ ಒಬ್ಬನಿಗೆ ಥಟ್ಟನೆ ಅನಿಸುವುದು: ನಾನೇನು ಮಾಡೋಕಾಗುತ್ತೆ, ನನ್ನದೇನೂ ತಪ್ಪಿಲ್ಲ. ಹಾಗನ್ನಿಸುವುದೇ ಮೊದಲಿಗೆ ಅಪರಾಧದ ಖಚಿತ ಚಿಹ್ನೆ. ಕಸಿವಿಸಿಗೊಂಡರೂ ಅದನ್ನು ಮರೆತ. ಮುಖ್ಯವಾಗಿ ಅವನು ಮೇಲಿಂದ ಇಳಿದು ಪಾರಾಗಬೇಕಿತ್ತಲ್ಲ. ಹಾಗಿರುವಾಗ ಅವನು ಬೇರೆ ಇನ್ನೇನೂ ಯೋಚನೆ ಮಾಡಲಾರ.

ಕುತೂಹಲವೆಂದರೆ, ಆರ್‌ಸಿಸಿ ಮಾಡಲು ಬಳಸುವ ಆ ಕಬ್ಬಿಣದ ಸರಳೂ ಗುಲಾಬಿ ಕಡ್ಡಿಯಷ್ಟೇ ದಪ್ಪ ಮತ್ತು ನೋಡಲೂ ಹಾಗೇ ಇತ್ತು. ಸಂಜೆ ಅವನು ಆ ಗಿಡದ ಹತ್ತಿರ ನಿಂತಾಗ, ತನ್ನಿಂದಾಗಿ ಟೊಂಗೆ ಕತ್ತರಿಸಿ ಹೋಗಿದ್ದರ ಬಗ್ಗೆ ಅವನೊಳಗೆ ಸಂಕಟ ಹೊತ್ತಿತ್ತು. ಗಿಡಕ್ಕೂ ಜೀವವಿದೆ ಎನ್ನುತ್ತಾರಲ್ಲ, ಮೇಲಿಂದ ಆ ಕಬ್ಬಿಣದ ಸರಳು ರವರವ ಎಂದು ಎರಗಿ ಬರುವಾಗ ಗಿಡ 'ಅಯ್ಯೋ ನಾ ಸತ್ತೆ' ಎಂದು ಹೇಗೆ ತತ್ತರಿಸಿರಬೇಡ? ಆ ಸರಳು ಮುಟ್ಟುವ ಮೊದಲೇ ಒಂದು ಕ್ಷಣ ಅದರ ಜೀವ ಹಾರಿ, ಆ ಬಿಸಿಲಲ್ಲಿ ಕತ್ತಲು ಕವಿದಂತಾಗಿರಬೇಕು. ನಂತರ ಮತ್ತೆ ಸೂರ್ಯ, ಮನೆ, ಅಂಗಳ ಎಲ್ಲ ನಿಧಾನ ಹುಟ್ಟಿದಂತಾಗಿರಬೇಕು. ಆಗ ನೋಡಿದರೆ ಅದರ ನಳನಳಿಸುವ ಒಂದು ಟೊಂಗೆ ಕಡಿದು ಮಣ್ಣಲ್ಲಿ ಬಿದ್ದಿತ್ತು. ಸಂಜೆಯಾದರೂ ಇನ್ನೂ ಅದರ ನೋವು ಹಸಿಯಾಗಿರಬೇಕು. ತಾನು ಹತ್ತಿರ ನಿಂತಿರುವ ಈಗ ಗಿಡ ಬೆದರುತ್ತಿರಬಹುದೆ?

ಅವನಿಗಾಗುತ್ತಿದ್ದ ವೇದನೆಗೆ ಮಾತಿರಲಿಲ್ಲ. ಅವನ ಹೃದಯದ ಒಂದು ಅಂಶ ಸತ್ತುಹೋದಂತಾಗಿತ್ತು. ಒಂದು ಟೊಂಗೆ ಮುರಿದುಹೋಗಿಯೂ ಗಿಡ ಜೀವಂತ ಉಳಿಯಬಹುದು. ಆದರೆ ಅವನ ಹೃದಯದಲ್ಲಿದ್ದ ಅದರ ಅಸ್ತಿತ್ವ ಅಳಿಸಿಹೋಗಿತ್ತು. ಒಬ್ಬನ ಪಾಲಿಗೆ ಇಡೀ ಪ್ರಪಂಚಕ್ಕಿರುವ ಅಸ್ತಿತ್ವ ಅವನ ಹೃದಯದಲ್ಲೇ ಅಲ್ಲವೇ? ಅವನ ಪಾಲಿಗೆ ಆ ಒಂದು ಗಿಡ ಸತ್ತುಹೋಗಿತ್ತು.

ಎಂಥ ಆಶ್ಚರ್ಯ: ಪ್ರಪಂಚದಲ್ಲಿ ಏನೇ ಸತ್ತರೂ ತನ್ನ ಒಂದು ಕಣವೇ ಸತ್ತಿರುತ್ತದೆ. ಆ ಸಾವು ತನ್ನಿಂದ ಉಂಟಾಗಿದ್ದರಂತೂ, ತನ್ನೊಳಗಿನ ಅಂಶ ಮತ್ತೆ ಚಿಗುರದ ಹಾಗೆ ಮಡಿದಿರುತ್ತದೆ. ಅಥವಾ ಅದನ್ನು ಮತ್ತೆ ಚಿಗುರಿಸಲು ಸಾಧ್ಯವೆ?



ಅವನು ಒಂದು ಕತೆ ಕೇಳಿದ್ದ. ಅದರ ವಿಷಯ ಅವನಿಗೆ ಈಗ ಅರ್ಥವಾದಂತಾಯಿತು. ಅವನ ಗೆಳೆಯನಿಗೆ ಅವರ ಅಮ್ಮ ತಿಳಿಸಿದ್ದು ಅದು. ಏನೆಂದರೆ, ಗೆಳೆಯನ ಸೋದರಮಾವ ಬಾಲ್ಯದಲ್ಲಿ ಆಟಕ್ಕಾಗಿ ಎಸೆದ ಕಲ್ಲು, ಹುಟ್ಟಿ ಎರಡೇ ದಿನವಾಗಿದ್ದ ಎಳೆಗರುವಿಗೆ ಬಿದ್ದು, ಆ ಕರು ಸತ್ತೇಹೋಗಿತ್ತಂತೆ. ದುಃಖದಿಂದ ಗರಬಡಿದಂತಾದ ಆ ಹುಡುಗ, ಅನ್ನ, ನೀರು ಬಿಟ್ಟು ಕೂತನಂತೆ. ಎರಡು ದಿನ ಆಯಿತು, ಮನೆಯವರೆಲ್ಲ ಗಾಬರಿ

ಬಿದ್ದು ಒತ್ತಾಯ ಮಾಡಿದರೂ ಅವನು ಅನ್ನ ಮುಟ್ಟಲಾರ. ಸುಮ್ಮನೆ ಮ್ಲಾನವಾಗಿ ಕೂತಿರುತ್ತಿದ್ದ. ಕೊನೆಗೆ ಹಳ್ಳಿಯ ಪಂಚಾಯ್ತಿ ಮುಖ್ಯಸ್ಥರು ಎಲ್ಲರ ಮುಂದೆ ಅವನಿಗೆ ಸಮಾಧಾನ ಮಾಡಿ ತಿಳಿಹೇಳಿದಾಗ ಊಟ ಮಾಡುವುದಾಗಿ ಒಪ್ಪಿಕೊಂಡವನು, ಯಾರಿಗೂ ಕಾಣದಂತೆ ಮನೆಯನ್ನೇ ತೊರೆದು ಹೋಗಿದ್ದ. ಎಲ್ಲೆಲ್ಲಿ ಹುಡುಕಿಸಿದರೂ ಸಿಗಲಿಲ್ಲ. 'ಅವನು ಅನ್ನ ನೀರು ಬಿಟ್ಟು ಎಲ್ಲೋ ಸತ್ತೇ ಹೋಗಿರಬೇಕು', ಗೆಳೆಯನಿಗೆ ತಾಯಿ ಹೇಳಿದ್ದರು.

ಮನಸ್ಸಾಕ್ಷಿ ಬಾಧಿಸಿ ಆ ಬಾಲಕನನ್ನು ಆತ್ಮತ್ಯಾಗದವರೆಗೆ ಕೊಂಡೊಯ್ದಿರಬೇಕು ಎಂದು ಇವನು ಅಂದುಕೊಂಡಿದ್ದ. ಅಂದರೆ ಅಷ್ಟು ಅಸಾಧಾರಣ ಸೂಕ್ಷ್ಮ ನೈತಿಕತೆಯ ಬಾಲಕನೆ ಆತ? ಅಥವಾ ಒಂದು ಜೀವವನ್ನು ತೆಗೆದ ಆ ಗಳಿಗೆ ಅವನ ಮನಸ್ಸು ಅತ್ಯಂತ ಅರಕ್ಷಿತವಾಗಿದ್ದು ಆ ಕ್ರಿಯೆಯೇ ಒಂದು ಕಲ್ಲಿನ ಹಾಗೆ ಅವನ ಜೀವಾಳಕ್ಕೆ ತಾಗಿಬಿಟ್ಟಿತ್ತೇ? ಆ ಕ್ಷಣ ಅವನೂ ಸತ್ತೇ ಬಿಟ್ಟು, ಎಷ್ಟು ಪ್ರಯತ್ನಿಸಿದರೂ ಚೇತರಿಸಿಕೊಳ್ಳದಾದನೆ? ಒಂದು ಕಡೆ ಅವನು ಜೀವಹತ್ಯೆ ಮಾಡಿದ್ದಕ್ಕೆ, ಇಡೀ ಜಗತ್ತಿನಿಂದಲೇ ಜೀವ ಅವನ ಪಾಲಿಗೆ ತನ್ನನ್ನು ಹಿಂತೆಗೆದುಕೊಂಡು ಬಿಟ್ಟಿತೆ? ಮೃತ್ಯು ಹಾಗೆ ಅವನನ್ನು ಆವರಿಸಿಬಿಟ್ಟಿತೆ? ಇದೆಂಥ ವಿಚಿತ್ರವಾದ ಮಾಂತ್ರಿಕ ಜಗತ್ತು?

ಕಾಲ್‌ರಿಜ್ ಕವಿಯ ಪುರಾತನ ನಾವಿಕ (The Ancient Mariner) ಮನಸ್ಸಿನಲ್ಲಿ ಸುಳಿದ. ತೊಡೆಯಲಾಗದ ಪಾಪ ಮತ್ತು ನಿರಂತರ ಪಶ್ಚಾತ್ತಾಪದ ಪ್ರತೀಕ ಆ ನಾವಿಕ. ಮನುಷ್ಯನ ಆತ್ಮದ ಸ್ಥಿತಿಯೇ ಅದು ಎನ್ನುವಂತೆ ಇದ್ದ ಅವನು. ಇನ್ನೂರು ಜೊತೆಗಾರರೊಂದಿಗೆ ಸಮುದ್ರಯಾನ ಮಾಡುತ್ತ, ಜೀವದ ಸುಳಿವೇ ಇಲ್ಲದ ಧ್ರುವ ಪ್ರದೇಶದಲ್ಲಿ ಕಾಣಿಸಿಕೊಂಡ ಸ್ನೇಹಮಯಿಯಾದ ಮುಗ್ಧ ಆಲ್‌ಬೆಟ್ರಾಸ್ ಹಕ್ಕಿಯನ್ನು ಏನೂ ಕಾರಣವಿಲ್ಲದೆ, ಕೆಡುಕು ಬಿಟ್ಟ ಬಾಣವಷ್ಟೇ ತಾನು ಎನ್ನುವಂತೆ, ಸುಮ್ಮನೆ ಕೊಂದಿದ್ದ. ಅವನ ಜೊತೆಗಾರರೂ ಅದನ್ನು ಒಂದು ಕ್ಷಣ ಮೆಚ್ಚಿದ್ದರಿಂದ ಆ ಕೃತ್ಯದಲ್ಲಿ ಅವರೂ ಪಾಲುದಾರರಾದರು. ನಂತರ ಪಾಪ ಅವರೆಲ್ಲರನ್ನು ಕಾಡಿತ್ತು. ಹಡಗು ಮಾರುತವಿಲ್ಲದೆ ವಿಪತ್ತಿಗೆ ಸಿಕ್ಕಿ, ಅನ್ನ ನೀರು ಇಲ್ಲದೆ ಇನ್ನೂರು ಮಂದಿಯೂ ಸತ್ತುಬಿದ್ದಿದ್ದರು. ಭಯಂಕರ ಒಂಟಿತನದಲ್ಲಿ ದುಃಸ್ವಪ್ನಗಳಂಥ ಅನುಭವಗಳು ನಾವಿಕನಿಗೆ ಎದುರಾಗಿದ್ದವು. ಒಮ್ಮೆ, ಪಾಪವೆಸಗಿದ ಕ್ಷಣದ ಅನಿವಾರ್ಯತೆ ಮತ್ತು ಅಚಾನಕತೆಯ ಹಾಗೇ ಮತ್ತೊಂದು ಕ್ಷಣ, ಮೃತ್ಯುವಿನ ಕೈಯಿಂದ ಸಾವಿನೊಳಗಣ ಬದುಕು ಅವನನ್ನು ಗೆದ್ದುಕೊಂಡಿತ್ತು. ಹಡಗಿನ ಕೆಳಗೆ ಈಜುತ್ತಿದ್ದ ನೀರುಹಾವುಗಳ ಗೊಂಪೆಯನ್ನು ಕಂಡು ಮೈಮರೆತು ಜೀವನವನ್ನು ಹರಸಿದಾಗಲೇ ಮತ್ತೆ ಅವನ ಆತ್ಮ ಚಿಗುರತೊಡಗಿದ್ದು... ಅದೇ ಅವನನ್ನು ದಡ ಸೇರಿಸಿತ್ತು. ಆದರೂ ಆಗಾಗ್ಗೆ ಉಮ್ಮಳಿಸುವ ವಿಚಿತ್ರ ಸಂಕಟದ ವೇಳೆಯಲ್ಲಿ ತನ್ನ ಪಾಪದ ಕಥಾನಕವನ್ನು ಸೂಕ್ತವಾದ ಒಬ್ಬ ಸಹಜೀವಿಗೆ ನಿರೂಪಿಸುವ ಭಾರ ಕೊನೆವರೆಗೂ ಅವನ ವಿಧಿಯಾಗಿತ್ತು...

ಆ ಪುರಾತನ ನಾವಿಕನನ್ನು ಪ್ರತಿಫಲಿಸುತ್ತ ನಿಂತ ಇವನ ಮರುಕ ಗುಲಾಬಿಗಿಡಕ್ಕೆ ಮುಟ್ಟಿರಬಹುದೆ? ಗುಲಾಬಿ ಅವನನ್ನು ಕ್ಷಮಿಸಿರಬಹುದೆ?

**ಎಸ್. ಮಂಜುನಾಥ್**





## ವೆಂಕಟ್ರಮಣ ಗೌಡ

# ಮೀನುಪೇಟೆಯಲ್ಲಿ ಒಂದು ದಿನ...

ಏನಾಗಿತ್ತೆಂದರೆ-

ಬೆಳಗ್ಗಿನಿಂದಲೇ, ಮೀನುಬುಟ್ಟಿಗಳು ಬರುಬರುತ್ತಿರುವಾಗಲೇ ಹಾಹಾಗೇ ವ್ಯಾಪಾರವಾಗತೊಡಗಿದ ಪವಾಡವೊಂದು ನಡೆದಿತ್ತು. ಯಾವ ಮೀನಿನ ಎಷ್ಟೇ ಬುಟ್ಟಿಗಳು ಬಂದರೂ, ಮೀನುಪೇಟೆಯೊಳಗೆ ಕಾಲಿಟ್ಟ ತಕ್ಷಣವೇ ವ್ಯಾಪಾರವಾಗುತ್ತಿರುವ ಈ ಪರಿಗೆ ಮೀನುಗಾರ ಹೆಂಗಸರೂ ಬಾಯಲ್ಲಿ ಬೆರಳಿಟ್ಟುಕೊಳ್ಳುವಂತಾಗಿತ್ತು. ರೋಕು ವ್ಯವಹಾರ. ಅದೂ ಚೌಕಾಸಿಯ ಮಾತೇ ಇಲ್ಲದೆ, ಹೇಳಿದಷ್ಟು ದುಡ್ಡು ಕೊಟ್ಟು ಬುಟ್ಟಿಗಟ್ಟಲೆ ಮೀನುಗಳನ್ನು ತಮ್ಮದಾಗಿಸಿಕೊಳ್ಳುತ್ತಿದ್ದವರ ಧಾವಂತ. ಇಂತಹ ಭಾರೀ ವ್ಯಾಪಾರವು ಮೀನುಪೇಟೆಯಲ್ಲಿ ಹಿಂದೆಂದೂ ಕುದುರಿದ್ದೇ ಇಲ್ಲ. ಹೆಚ್ಚೆಂದರೆ, ಅದೂ ಸ್ವಲ್ಪ ದುಡ್ಡು ಕಾಸು ಆಡುತ್ತಿದ್ದ ಕೈಯವರಾದರೆ, ಐವತ್ತು ರೂಪಾಯಿ ಕಿಮ್ಮತ್ತಿನ ಮೀನು ಹಾಕಿಸಿಕೊಳ್ಳುವಷ್ಟಕ್ಕೇ ಚೀಲದ ಬಾಯಿ ಮುಚ್ಚಿ, ಬೆನ್ನು ತಿರುಗಿಸುತ್ತಿದ್ದ ಗಿರಾಕಿಗಳನ್ನು ಮಾತ್ರ ಕಂಡವರಾಗಿದ್ದರು, ಮೀನುಗಾರ ಹೆಂಗಸರು. ಅಕಸ್ಮಾತ್ ಕಿಮ್ಮತ್ತಿನ ಮೀನು ಕೇಳಿ ಗಿರಾಕಿಯೊಬ್ಬ ಬಂದರೆ, ಕೆಲವು ಕ್ಷಣ ಎವೆಯಿಕ್ಕದೆ ನೋಡಿ ಅವನನ್ನೇ ಗಲಿಬಿಲಿಗೊಳಿಸಿಬಿಡುತ್ತಿದ್ದರು. ಈಗ, ಏಕ್‌ದಂ ಎಲ್ಲಿಂದಲೋ ಬಂದವರಂತೆ ಕಾಣುತ್ತಿದ್ದ ಮಂದಿ, ಹೀಗೆ ಮಾಂಸಕ್ಕೆ ಹದ್ದುಗಳು ಮುಗಿಬಿದ್ದಂತೆ ಮೀನು ವ್ಯಾಪಾರ ಮಾಡುತ್ತಿದ್ದುದು ಅವರನ್ನು ತಟ್ಟದೇ ಇರಲಿಲ್ಲ. ಅಷ್ಟಲ್ಲದೆ, ಚೌಕಾಸಿ ಮಾಡುವ ಗಿರಾಕಿಗಳೊಂದಿಗಿನ ನಿತ್ಯದ ಕೊಸರಾಟ ಇಲ್ಲದಂತಾಗಿ ಒಂದು ರೀತಿಯ ಚಡಪಡಿಕೆಯೂ ಆಗತೊಡಗಿತ್ತು ಅವರಿಗೆ. ಆದರೆ ದುಡ್ಡು - ಮಧ್ಯಾಹ್ನದ ತನಕಾ ಕೂತು ಮಾರಬೇಕಾಗಿದ್ದ ಬುಟ್ಟಿ ಮೀನು ಕ್ಷಣದಲ್ಲೇ ವ್ಯಾಪಾರವಾಗಿ, ನಿರೀಕ್ಷೆಗಿಂತ ಹೆಚ್ಚಾಗೇ ಕೈಗೆ ಬಂದ ದುಡ್ಡು-ಅವರೆಲ್ಲರ ಕಣ್ಣುಗಳಲ್ಲಿ ಹೊಸ ಮಿಂಚನ್ನು ಅಲೆಯಲೆಯಾಗಿ ಹೊಳೆಯಿಸಿತ್ತು.

ಈ ಬೆಳವಣಿಗೆಯಿಂದಾಗಿ ತೀರಾ ಮನಸ್ಸು ಕೆಡಿಸಿಕೊಂಡವರು ಒಕ್ಕಲು ಮತ್ತು ಹಳೇಪೈಕರ ಕೇರಿಗಳ ಹೆಂಗಸರಾಗಿದ್ದರು. ಚಾ ಕುಡಿದು ಮುಗಿಸುತ್ತಲೇ, ಅವರಲ್ಲೆಷ್ಟೋ ಮಂದಿ, ನಿತ್ಯವೂ ಎರಡನೆಯದಾಗಿ ತಕ್ಕೊಳ್ಳುವುದೇ ಮೀನಿನ ವಾಸನೆ. ಮೀನಿನ ಸಾರು ಒಂದಾಗಿಬಿಟ್ಟರೆ ಅವತ್ತು ಹೊಟ್ಟೆ ಅರ್ಧ ತುಂಬಿದ ಹಾಗೇ ಸಂಭ್ರಮಿಸುವವರಿಗೂ ಕಮ್ಮಿಯಿಲ್ಲ. ಬಹಳ ಸಲ, ಯಾವುದರ ಬಗ್ಗೂ ತಲೆಕೆಡಿಸಿಕೊಳ್ಳದೆಯೂ ಊಟಕ್ಕೆ ಮಾತ್ರ ಕರೆಕ್ಟು ಟೈಮಿಗೆ ಹಾಜರಾಗಿ, 'ಮೀನು ಬೇಯ್ಸಿಯೆ?' ಎಂದು ತಾವೇತಂದು ರಾಶಿ




ಹಾಕಿದವರಂಗೆ ಕೇಳುವ ಗಂಡಸರ ಬಗ್ಗೆ, ಮೀನು ಬೇಯಿಸುವ ಸಿಳ್ಳಿಯಿಂದಲೇ ತಲೆಮೇಲೆ ಕುಕ್ಕುವಷ್ಟು ಸಿಟ್ಟು ಬಂದರೂ, ಬಿಸಿ ಹಬೆಯಾಡುವ ಮೀನುಸಾರಿನ ಖಮ್ಮಗಿನ ಪರಿಮಳದ ಮುಂದೆ ಮಿದುಗೊಳ್ಳುವವರಾಗಿದ್ದ ಆ ಹೆಂಗಸರು, ಮೀನುಸಾರನ್ನು ಗಂಡನಿಗೆ, ಮಕ್ಕಳಿಗೆ ಬಡಿಸುವಲ್ಲೇ ಪ್ರೀತಿಯ ವಿಸ್ತಾರವನ್ನು, ಅನುಭವಿಸುತ್ತಿದ್ದರು. ಕೆಲವರಿಗಂತೂ, ಬಿಳಿ ಮಿಂಚಿನ ಧಾರೆಯ ಕತ್ತಿಯನ್ನು ಮೇಲು ಮುಖವಾಗಿ ಇಟ್ಟುಕೊಂಡು, ಮೀನಿನ ಹೆಣಜು ಹೆರೆದು, ಪಕ್ಕೆಗಳನ್ನು ಕುಯ್ದು, ಕಳ್ಳು ತೆಗೆದು, ನೀರಲ್ಲದ್ದಿ, ಹೂವಾಡಿಸಿದಷ್ಟು ಮೆಲುವಾಗಿ ತೊಳೆದು ತೊಳೆದು ಸಮಗೊಳಿಸುವಲ್ಲೇ ಖುಷಿಯಿರುತ್ತಿತ್ತು. ಇಂತಾ ಹೆಂಗಸರು ಈಗ, ಬಂದ ಮೀನು ಬುಟ್ಟಿಗಳೆಲ್ಲಾ ಏಕ್‌ದಂ ವ್ಯಾಪಾರವಾಗತೊಡಗಿದ ಹೊಡೆತಕ್ಕೆ, ತಮ್ಮ ಕೈಯಲ್ಲಿನ ದುಡ್ಡಿಗೆ ಎಟಕುವ ಮೀನೇ ಸಿಗದೆ, ಒಂದು ರೀತಿ ಪೇಚಿಗೆ ಸಿಲುಕಿದವರಂತೆ ತಳಮಳಿಸತೊಡಗಿದ್ದರು. ಬೆಂಗಳೂರು,

ಬೊಂಬಾಯಿಯಂತಾ ಕೂತಲ್ಲೇ ಗಳಿಸಿ ತಿನ್ನುವವರ ಪಟ್ಟಣಗಳಲ್ಲಿ, ಯಾರದೋ ಪುಣ್ಯದಿಂದ ಮಳೆ ಬಿದ್ದುಬಿಟ್ಟರೆ, 'ಜನಜೀವನ ಅಸ್ತವ್ಯಸ್ತ' ಎಂದು ಪೇಪರಿನಲ್ಲಿ ಸುದ್ದಿ ಬರುತ್ತದಲ್ಲಾ, ಹಾಗೆ ಇಲ್ಲೂ, ಈಗ, ಮೀನುಪೇಟೆಯಲ್ಲಿ, ನೆಲದಿಂದಲೇ ಎಂಥದೋ ಮೂಡಿಬಂದ ಹಾಗೆ, ಯಾರ ಗುಣಾಕಾರ ಭಾಗಾಕಾರಕ್ಕೂ ಸಿಕ್ಕದಂತಾ ಸನ್ನಿವೇಶದಿಂದಾಗಿ, ಒಕ್ಕಲು ಮತ್ತು ಹಳೇಪೈಕರ ಕೇರಿಗಳ ಹೆಂಗಸರ ಚಟುವಟಿಕೆಗಳೇ ಅಸ್ತವ್ಯಸ್ತತೆಗೆ ಒಳಗಾಗಿ ಬಿದ್ದೊ.

ಪಾಪ, ಎಂತೆಂತಾ ಹೆಂಗಸರು ಇದ್ದರೆಂತೀರಿ ಇವರ ಸಾಲಲ್ಲಿ! 'ಮೀನು ಬೇಕೇಬೇಕು, ಇಲ್ಲದಿರೆ ಉಣ್ಣೆ' ಎಂದು ರಚ್ಚೆಹಿಡಿದು ಕೂರುವ ನಾಲ್ಕೊರ್ಷದ ಮಗನನ್ನು ಸಂಭಾಳಿಸಲೆಂದೇ ಬಂದವಳು; ಬಯಲುಸೀಮೆಯ ಕಡೆ ಹೊಟೇಲೊಂದರಲ್ಲಿ ಕಪ್ಪು ತೊಳೆಯಲು ಇದ್ದ ಮಗ ಊರಿಗೆ ಬಂದಿದ್ದಾನ, ನಾಳೆಯೇ ವಾಪಸು ಹೋಗೂದಂತೆ, ಮೀನಿನ ಸಾರು ಮಾಡಿ ಬಡಿಸಲೇಬೇಕು ಅವನಿಗೆ ಎಂಬ ಆಸೆಯನ್ನು ಎದೆಯಲ್ಲಿ ಮಡಗಿಕೊಂಡು ಓಡೋಡಿ ಬಂದವಳು; ಮನೆಯ ಹಿರಿತಲೆ, ಇಂದೂ ನಾಳೆಯೊ ಅನ್ನುವಂತೆ ಆಗಿರುವ ಹಣ್ಣು ಮನುಷ್ಯ ಅಪರೂಪಕ್ಕೆ ಮೀನಿನ ಬಗ್ಗೆ ಆಸೆಪಟ್ಟು ಕೇಳಿದ್ದಾನೆ, ಮುಳ್ಳು ಜಾಸ್ತಿಯಿಲ್ಲದೆ, ಎಸಳಿನಂತೆ ಇರುವ ಚಲೋ ಮೀನನ್ನೇ ನೋಡಿದರಾಯಿತು ಎಂದು ಮುತುವರ್ಜಿಯಿಂದ ಬಂದವಳು; ಹಸಿ ಬಾಣಂತಿ ಮನೆಯಲ್ಲಿ ಮಲಗಿದ್ದಾಳೆ, ಸ್ವಲ್ಪವೇ ಖಾರ ಹಾಕಿ ಮೀನು ಮಾಡಿ ಬಡಿಸುವಾ ಅವಳಿಗೆ ಹೇಳಿ ಬಂದವಳು; ಚೊಚ್ಚಲ ಹೆರಿಗೆಗೆ ತಾಯಿ ಮನೆಗೆ ಹೊರಟಿದ್ದಾಳೆ ಸೊಸೆ, ನಿನ್ನ ಕೈಯಿಂದ ಮೀನು ಬೇಯ್ಸಿಕೊಡೇ ಅತ್ತೆ ಎಂದು ಕೂತಿದ್ದಾಳೆ, ಅವಳ ಆಸೆಗೆ ಇಲ್ಲ ಅನ್ನಬಾರದು ಎಂದು ಮನಸ್ಸಲ್ಲೇ ಸೊಸೆ ಬಗ್ಗೆ ಕಕ್ಕುಲಾತಿ ಮೆರೆಯುತ್ತ ಬಂದವಳು; ಮನೆಗೆ ಬಂದಿರುವ ನೆಂಟರಿಗೆ ಎರಡು ಮೂರು ರೂಪಾಯಿಯ ಮೀನು ಎಲ್ಲಿ ತಾಗೂದು, ಸ್ವೊಲ್ಪ ಜಾಸ್ತೀನೇ ತಕ್ಕೊಳ್ಳುವಾ ಎಂದು ಲೆಕ್ಕ ಹಾಕುತ್ತ ಬಂದವಳು.. ಎಲ್ಲರೂ ಮೀನುಪೇಟೆಯಲ್ಲಿನ ಈ ಪರಿಗೆ ಹೆಚ್ಚೂಕಡಿಮೆ ಕಂಗಾಲೇ ಆಗಿಬಿಟ್ಟಿದ್ದರು. ಮೀನು ಸಿಗಲಿಲ್ಲ, ಸಿಗಲಾರದು ಎಂಬುದು ಅವರ ತೀವ್ರ ಚಡಪಡಿಕೆಗೆ ಕಾರಣವಾಗಿತ್ತು.



## ಎರಡು

'ಮೀನುಪೇಟೆಯಲ್ಲಿ ದುಡ್ಡು ಕಣ್ಣುಚ್ಚಿಕೊಂಡು ಉದುರುತ್ತಿದೆ' ಎಂಬ ಸುದ್ದಿ, ಮಳೆಗಾಲದಲ್ಲಿ ಬೆಟ್ಟದ ಹಳ್ಳ ಒಮ್ಮೆಲೆ ಸೊಕ್ಕಿ ಹರಿವಂತೆ ಹರಿದು, ಎಲ್ಲಾ ಕಿವಿಗಳನ್ನೂ ತುಂಬಿ ಅಲೆಯುವುದಕ್ಕೆ ಹೆಚ್ಚು ಹೊತ್ತು ಬೇಕಾಗಲಿಲ್ಲ. ಬೇರೆ ಬೇರೆ ಕೇರಿಗಳ, ಬೇರೆ ಬೇರೆ ಓಣಗಳಲ್ಲಿ, ಈ ಸುದ್ದಿಯದೇ ಭಾರ ಹೊತ್ತುಕೊಂಡು ಅದೆಷ್ಟೋ ಹೆಜ್ಜೆಗಳು ಸಾಗತೊಡಗಿದ್ದವು. ಮೀನು ಪೇಟೆಯಿಂದ ಸ್ವಲ್ಪವೇ ದೂರದಲ್ಲಿ, ಎದುರು ಬದುರಾಗಿ ಇರುವ ಬೀಡಿ ಬೊಮ್ಮನ ಅಂಗಡಿ ಮತ್ತು ಎಣ್ಣೆ ಸೀಮನ ಗಡಂಗುಗಳಲ್ಲಂತೂ ಇದರ ಚರ್ಚೆಯ ಒತ್ತಡ ಹೆಚ್ಚಾಗಿಬಿಟ್ಟತ್ತು. ಅಲ್ಲದೆ ಅವು ಈ ಸುದ್ದಿಯನ್ನು ಹಿಗ್ಗಾಮುಗ್ಗಾ ಎಳೆದಾಡುವ ಮತ್ತು ಸಾಧ್ಯವಾದಷ್ಟೂ ರಂಜನೀಯಗೊಳಿಸುವ ತಾತ್ಕಾಲಿಕ ಕೇಂದ್ರಗಳೂ ಆಗಿ ಮಾರ್ಪಟ್ಟು, ಊದ್ರಿ ವ್ಯಾಪಾರದ ಸೂಚ್ಯಂಕದಲ್ಲಿ ತೀವ್ರ ಏರಿಕೆ ಕಂಡುಬಂತು.

ಹೆಚ್ಚುಕಡಿಮೆ ಇದೇ ಹೊತ್ತಿನಲ್ಲೇ, ಆಗಲೇ ಮೀನುಪೇಟೆಯಿಂದ ಹೊರಟಿದ್ದ ಸುದ್ದಿಯ ಒಂದು ಬ್ರ್ಯಾಂಚು, ಬಂದೂ ಬಂದೂ ಬಂದೂ

ಸೆಟಗೋಳ ವಾಡೆಯ ಆಚೆ ತುಂಡಿನಲ್ಲಿರುವ ಉಗ್ರಾಣಿ ಸ್ವಾಮನ ಮನೆಯ ಗೋಡೆಗೇ ಬಡಿದಿತ್ತು. ಸಂಬಳ ಎಷ್ಟೆಂದು ಯಾರಾದರೂ ಕೇಳಿದರೆ, ಶಾನುಭೋಗನಿಗೆ ಬರುವ ಸಂಬಳವನ್ನೂ ಸೇರಿಸಿ ಹೇಳಿಬಿಟ್ಟು, ಕೇಳಿದವರ ಬಾಯಿ ಅಚ್ಚರಿಯಿಂದ ತೆರೆದುಕೊಳ್ಳುವ ಹಾಗೆ ಮಾಡುವವನೂ, ಈ ದೇಶದ ಪ್ರಥಮ ರಾಷ್ಟ್ರಪತಿ, ಪ್ರಥಮ ಪ್ರಧಾನಿ... ಎಂದೆಲ್ಲಾ ಉರುಹಚ್ಚುತ್ತ ಕೂತಿರುವ ಮಕ್ಕಳ ಬಳಿಯಲ್ಲಿ, ಈ ದೇಶದ ಪ್ರಥಮ ಉಗ್ರಾಣಿ ತಾನೇ ಎಂದು ಹೇಳಿ, ಒಂದಿಷ್ಟು ದಿನಗಳವರೆಗೆ ಆ ಮಕ್ಕಳನ್ನು ನಂಬಿಸಿ ಮಜಾತಕೊಳ್ಳುತ್ತಿದ್ದವನೂ ಆದ ಉಗ್ರಾಣಿ ಸ್ವಾಮ, ಸಾರಾಯಿಯೇ ಸರ್ವಸ್ವವೆಂದು ನಂಬಿದವನಾಗಿದ್ದ. ಇದಕ್ಕೆ ವಿರುದ್ಧವಾಗಿ ಮಾತಾಡುವವರನ್ನು, "ಗಾಂಧಿ ಕೂಡಾ ಹೆಂಡದ ಹೆಸ್ರು ಹೇಳ್ಕಂಡೇ ದೊಡ್ಡಾದೋನು ಗೊತ್ತಾ?" ಎಂಬ ಒಂದೇ ಒಂದು ಮಾತು ಬಿಸಾಕಿ, ಅವರು ಮತ್ತೆ ಉಸಿರೆತ್ತಬಾರದು ಹಾಗೆ ಮಾಡುತ್ತಿದ್ದ. ನಿನ್ನೆ ರಾತ್ರಿ ಕುಡಿದದ್ದರ ಅಮಲಿನಲ್ಲೇ ಇನ್ನೂ ತೂಗುತ್ತಾ, ಏಳುವುದೊ ಬೇಡವೊ ಎಂಬ ಗೊಂದಲದಲ್ಲೇ ಬಹಳ ಹೊತ್ತು ಒದ್ದಾಡಿದವನು, ಕಡೆಗೂ ಆಗ ತಾನೇ ಎದ್ದು ಕೂತಿದ್ದಾಗಲೇ ಆ ಸುದ್ದಿ ಅವನ ಮನೆಯ ಗೋಡೆಗೆ ಬಡಿದದ್ದು.

ಮೀನುಪೇಟೆಯಿಂದ ಬಂದವಳೊಬ್ಬಳು, ಇವನ ಮನೆಯೆದುರಲ್ಲೇ ಹಾದುಹೋಗಬೇಕಾದರೆ, ಎದುರಿಗೆ ಸಿಕ್ಕವಳ ಬಳಿ, ಮೈಕಿನಲ್ಲಿ ಹೇಳಿದ ಹಾಗೆನ್ನಿಸುವಷ್ಟು ದೊಡ್ಡ ಧ್ವನಿಯಲ್ಲಿ ವರದಿ ಒಪ್ಪಿಸಿದ್ದಳು. ಇನ್ನೂ ಮಂಪರಿನಿಂದ ಮುಕ್ತನಾಗುವ ಮುಂಚೆಯೇ, ಇವತ್ತು ಸಂಜೆಯ ಹೆಂಡಕ್ಕೆ ಎಲ್ಲಿಂದ ದುಡ್ಡು ಹೊಂದಿಸುವುದು ಎಂಬ ಯೋಚನೆಗೇ ತಲೆಕೊಟ್ಟಿದ್ದವನಿಗೆ, ಈ ಸುದ್ದಿಯಿಂದ ಸಂಪೂರ್ಣ ಎಚ್ಚರವಾಯಿತು. ಅವನ ಮಹಾ ಬೆರಕೆ ಮಿದುಳು ಈಗ ಬಹಳ ವೇಗವಾಗಿ ಕೆಲಸಕ್ಕಾರಂಭಿಸಿತು. ಕಡೆಗೂ ಒಂದುಪಾಯ ಹೊಳೆದು, ತನ್ನ ಬುದ್ಧಿವಂತಿಕೆಗೆ ತಾನೇ ಮೆಚ್ಚಿಕೊಳ್ಳುತ್ತ, ಮೊದಲು ಚುರುಗುಟ್ಟುತ್ತಿರುವ



ಹೊಟ್ಟೆಗೆ ಏನಾದರೂ ಒಂದಿಷ್ಟು ಕಾಣಸಬೇಕು
ಎಂದು ಎಲ್ಲಾ ಪಾತ್ರೆಗಳನ್ನು ಶೋಧಿಸ
ತೊಡಗಿದ. ಆಗಲೇ ಕೆಲಸಕ್ಕೆ ಹೊರಟುಬಿಟ್ಟಿದ್ದ
ಹೆಂಡತಿಯನ್ನು 'ಯಾವ ಮಿಂಡನ್ನ ಕಾಣಸಿ
ಕೊಂಡಿದ್ದಾಳೊ ಹೊರಗಡೆ' ಎಂದು ನಿತ್ಯದ
ರೂಢಿಯಂತೆ ಮನಸ್ಸಲ್ಲೇ ಶಪಿಸಿದ. ಒಂದು
ಪಾತ್ರೆಯಲ್ಲಿ ಸ್ವಲ್ಪ ಅನ್ನವಿತ್ತು. ಅದಕ್ಕೆ ನೀರು
ಹುಯ್ದುಕೊಂಡು ಕುಡಿದು ಮುಗಿಸಿದವನೇ,
ಮೇಲೆ ತೂಗಿದ್ದ ಒಣಮೀನು ತುಂಬಿಡುವ
ಕುಕ್ಕೆಯತ್ತ ನೋಡಿ ಕೈಮುಗಿಯುತ್ತಾ, ಇಂದು
ನೀನೇ ನನ್ನ ಭಾಗ್ಯ ಎಂದು ನಿವೇದಿಸಿದ.
ಕೆಳಗಿಳಿಸಿ ಕುಕ್ಕೆಯೊಳಕ್ಕೆ ನೋಡಿದ್ದೇ, ತಾನೆಣಿಸಿ
ದಷ್ಟು ಮೀನಿನ ರಾಶಿ ಹೋಗಲಿ, ಬುಟ್ಟಿ ಪೂರ್ತಿ
ಖಾಲಿಯೇ ಆಗಿರುವುದು ಕಂಡು ಕಂಗಾಲಾಗಿ
ಹೋದ. ಹೆಂಡತಿಯ ಮೇಲೆ ಇಂತಾ ಸಿಟ್ಟು
ಬಂತಲ್ಲ, ಅವಳನ್ನೇ ಕಲ್ಪಿಸಿಕೊಂಡು ಕುಕ್ಕೆಗ
ಜಾಡಿಸಿ ಒದ್ದ. ಅದು ಜರಕ್ಕಂತಾ ಹೋಗಿ ಆ
ಮೂಲೆಗೆ ಬಡಿಯಿತು. ಬ್ಯಾಲನ್ಸು ತಪ್ಪಿ ಇವನೂ
ಇತ್ಲಾ ಕಡೆ ಬಿದ್ದ. ಆ ಏಕಾಂತದಲ್ಲೂ
ಅವಮಾನಕ್ಕೊಳಗಾದವನಂತೆ ಕನಲಿದ. ಏನಿಲ್ಲ
ವೆಂದರೂ, ಅಷ್ಟು ದೊಡ್ಡ ಕುಕ್ಕೆಯಲ್ಲಿ ಅರ್ಧ
ದಷ್ಟಾದರೂ ಮೀನು ಇದ್ದೇ ಇರೂದು ಎಂಬ
ಬಲವಾದ ನಿರೀಕ್ಷೆಯಿತ್ತು ಅವನಿಗೆ. ಮನೆಯಲ್ಲಿ
ಯಾವುದಕ್ಕೆ ಕಡಿಮೆಯಾದರೂ ಒಣಮೀನಿನ
ಶೇಖರಣೆಗೆ ಹೊಡೆತವಾಗದ ಹಾಗೆ ಹೆಂಡತಿ
ನೋಡಿಕೊಳ್ಳುತ್ತಿದ್ದುದು ಗೊತ್ತಿತ್ತಲ್ಲ. ಆದರೀಗ
ತನ್ನ ಲೆಕ್ಕ ತಲೆಕೆಳಗಾದದ್ದು ಅವನನ್ನು ತೀವ್ರ
ಹತಾಶನನ್ನಾಗಿಸಿತು. ಹಾಗೆ ಹತಾಶೆಯಿಂದ
ಕೂತು, ಕಣ್ಣು ಸಣ್ಣಗೆ ಮಾಡಿಕೊಂಡು,
ಮನೆಯೊಳಗಿನದ್ದನ್ನೆಲ್ಲಾ ದೈನ್ಯವೆಂದರೆ ದೈನ್ಯವೂ
ಅಲ್ಲದ, ಗುಮಾನಿಯೆಂದರೆ ಗುಮಾನಿಯೂ
ಅಲ್ಲದ ರೀತಿಯಲ್ಲಿ ನಿರುಕಿಸುತ್ತಿರುವಾಗಲೇ,
ಒಂದು ಮೂಲೆಯಲ್ಲಿ, ತನ್ನ ಪಾಡಿಗೆ ತಾನಿದ್ದ
ಟ್ರಂಕಿನ ಮೇಲೆ ದೃಷ್ಟಿ ಹೋಯಿತು. ಅರೆ,
ತನಗಿಷ್ಟು ದಿನ ಈ ಟ್ರಂಕಿನ ಮೇಲೆ ಲಕ್ಷ್ಯವೇ
ಹೋಗಿರಲಿಲ್ಲವಲ್ಲಾ ಎಂದು ಅಚ್ಚರಿಪಟ್ಟ.
ಅಲ್ಲೇನಿದ್ದೀತು, ಅಪರೂಪಕ್ಕೊಮ್ಮೆ ಉಡುವು
ದಕ್ಕೆಂದು ಅವಳು ಇಟ್ಟಿರುವ ಒಂದು ಸೀರೆಯೇ
ಅದರಲ್ಲಿರಬಹುದಾದ ದೊಡ್ಡ ಆಸ್ತಿ.
ಯಾವತ್ತೋ ಒಮ್ಮೆ, ಕುಟುಂಬಯೋಜನೆ ಮಣ್ಣು
ಮಸಿ ಅಂತಾ ಬಂದ ಒಂದಿಬ್ಬರು ನರ್ಸುಗಳು,
ತನ್ನೆಡೆಗೆ ನೋಡಿ ಹಲ್ಲು ಗಿಂಜುತ್ತ, ಹೆಂಡತಿಯ
ಕೈಯಲ್ಲಿ ಕೊಟ್ಟುಹೋಗಿದ್ದ ನಿರೋಧದ ಪ್ಯಾಕೂ
ಕೂಡಾ ಇದೇ ಟ್ರಂಕಿನಲ್ಲಿ ಇದ್ದುದನ್ನು ಒಮ್ಮೆ
ಕಂಡಿದ್ದೆನಲ್ಲ ಎಂದುಕೊಂಡ. ಏನೇ ಇದ್ದು
ಸಾಯಲಿ, ಅಥವಾ ಈ ಮೀನು ಕುಕ್ಕೆಯ ಹಾಗೇ
ಖಾಲಿ ಟ್ರಂಕೇ ಬೇಕಾದರೆ ಇರಲಿ, ಒಂದು ಸಲ
ಅದರ ಬಾಯಿ ತೆಗೆದು ನೋಡಿದರೆ ಅಪ್ಪನ
ಗಂಟೇನು ಹೋದೀತು ಎಂದೆನ್ನಿಸಿದ್ದೇ ಎದ್ದ.
ಟ್ರಂಕು ಮುಟ್ಟಬೇಕು ಎನ್ನುವಾಗ ಬೀಗ ಕಂಡು
ಈಗಂತೂ ಅಸಾಧ್ಯ ಸಿಟ್ಟು ಉಕ್ಕಿತು. ಬೋಳ್ರಂಡೆ
ಬೀಗ ಹಾಕೂದು ಕಲ್ತಿದಾಳೆ, ಏನು ಹುಂಡಿ
ಇಟ್ಟಿದ್ದಾಳೊ ಎಂದುಕೊಳ್ಳುತ್ತಲೇ, ಇರುವೆಲ್ಲಾ
ತಾಕತ್ತನ್ನು ಸಿಟ್ಟಿನೊಂದಿಗೇ ಜೋಡಿಸಿ ಬೀಗಕ್ಕೆ
ಒದ್ದ. ಅಡಿಕೆ ಗಾತ್ರದ ಆ ಬಡಪಾಯಿ ಬೀಗದ
ತಟ್ಟಿ ಪಳಕ್ಕಂತ ಬಾಯಿ ತೆರೆದುಕೊಂಡು
ಬೀಳುತ್ತಲೇ ವಿಜಯೋತ್ಸಾಹದ ನಗೆ ನಕ್ಕ,
ಉಗ್ರಾಣಿ ಸ್ವಾಮಿ. ಟ್ರಂಕಿನ ಮುಚ್ಚಳ ತೆಗೆದ.
ನೋಡುತ್ತಾನೆ, ಟ್ರಂಕಿನ ಬಾಯಿಯತನಕಾ
ತುಂಬಿಕೊಂಡಿರುವ ಸೀರೆ. ತಲೆ ಹಾಳಾಗಿ
ಹೋಯಿತು. ಇಷ್ಟೊಂದು ಸೀರೆಗಳನ್ನು ಯಾವಾಗ,
ಎಲ್ಲಿಂದ ತಂದಳು ಎಂಬ ಪ್ರಶ್ನೆ ಅವನನ್ನು
ನೆಲದಿಂದ ಒಂದು ಫೂಟಿನಷ್ಟು ಮೇಲಕ್ಕೆ ಎತ್ತಿ,
ಅಲ್ಲಿಂದಲೇ ಧಡಕ್ಕನೆ ಮತ್ತೆ ನೆಲದ ಮೇಲೆ
ಹೊತಾಕಿತು. ಎಲ್ಲಾ ಎಳೆದು ಹೊರಗೆ
ಬಿಸಾಕುವಾ, ಬರಲಿ ಅವಳು ಎಂದುಕೊಂಡು
ಕೃಪಾಕಿದವನು ಹೌಹಾರಿಹೋದ. ನಾಟಕದ
ಪರದೆ ಎಳೆದಂಗೆ ಆಯಿತು. ಒಂದೇ ಸೀರೆ.

ಟ್ರಂಕಿನ ತುಂಬಾ ಮೀನು, ಒಣಮೀನು! ಉಗ್ರಾಣಿ ಸ್ವಾಮನ ಖುಷಿ ಪೂಜಗೇರಿ ಘಟ್ಟದಿಂದ ಕೆಳಕ್ಕೆ ಸೈಕಲ್ಲು ಬಿಟ್ಟರೆ ತೇಲಿಕೊಂಡು ಹೋಗುವ ಹಾಗೆ ಓಡುತ್ತದಲ್ಲ, ಹಾಗೆ ವೇಗ ಗೊಂಡಿತು; ಮಳೆಗಾಲದಲ್ಲಿ ಕಳ್ರಗದ್ದೆ ಹಳ್ಳ ಯಾಣದ ಕಡೆಯ ದೊಡ್ಡ ದೊಡ್ಡ ಗಾತ್ರದ ತೆಂಗಿನಕಾಯಿಗಳನ್ನು ನಾಸನ ಬಯಲಿಗೆ ತಂದು ವಾಡಿಸುವಷ್ಟು ಸೊಕ್ಕಿನಿಂದ ಏರುತ್ತವಲ್ಲ, ಹಾಗೆ ಇಮ್ಮಡಿಸಿತು. ಅಬ್ಬಾ ಹೆಂಡತಿಯೆ, ನೀನು ಆದರೂ ಆಗಬಹುದು ಎಂದು ಮನದಲ್ಲೇ ಮೆಚ್ಚಿದ. ಇನ್ನೂ ತಡಮಾಡುವಷ್ಟು ವ್ಯವಧಾನ ಇರಲಿಲ್ಲ ಅವನಲ್ಲಿ. ತೀರಾ ಗಡಿಬಿಡಿ ಗೊಂಡವನಂತೆ ಬುಟ್ಟಿಯೊಂದನ್ನು ಹುಡುಕಿ ತಂದು, ಅಷ್ಟೂ ಮೀನನ್ನು ಅದರಲ್ಲಿ ಸುರಿದ. ಎತ್ತಿ ತಲೆಯ ಮೇಲಿಟ್ಟುಕೊಂಡು ಹೊರ ಬಂದವನೇ, ಬಾಗಿಲು ಮುಂದಕ್ಕೆಳೆದು ಧಾವಂತದಿಂದ ನಡೆಯತೊಡಗಿದ, ಮೀನುಪೇಟೆಯ ಕಡೆಗೆ.

ಉಗ್ರಾಣಿ ಸ್ವಾಮ ಮೀನುಪೇಟೆಯನ್ನು ತಲುಪಿದಾಗ ಮಧ್ಯಾಹ್ನ ಮೀಯತೊಡಗಿತ್ತು. ಮನೆಯಲ್ಲಿದ್ದ ಒಣಮೀನನ್ನೇ ಹೊತ್ತುಕೊಂಡು ಇಲ್ಲಿಗೋಡಿ ಬರಲು ಕಾರಣವಾದ ಆ ಹೆಂಗಸು ಬಿತ್ತರಿಸಿದ ಸುದ್ದಿಯಲ್ಲಿದ್ದ-ತನ್ನನ್ನು ಆಕರ್ಷಿಸಿ ದಂತಹ ವಿಶೇಷವೇನೂ ಮೀನುಪೇಟೆಯಲ್ಲಿ ಕಾಣದೆ, ತನ್ನ ಈ ಸಾಹಸವು ದಂಡಕ್ಕಾಗಿಬಿಟ್ಟರೆ ಏನು ಮಾಡುವುದು ಎಂದು ನಿಂತಲ್ಲೇ ಬೆವರಿದ.


ಪ್ರೀತಿಸಂಯುಕ್ತಾ

ಮರುಕ್ಷಣವೇ, ಎಷ್ಟೆಲ್ಲಾ ರಿಕಾರ್ಡು ಉತಾರು ಗಳ, ಎಷ್ಟೆಲ್ಲಾ ಸರ್ವೆ ನಂಬರುಗಳ, ಅವುಗಳ ವ್ಯಾಪ್ತಿಯಲ್ಲಿನ ಜಮೀನುಗಳ ಬಗ್ಗೆ ಶಾನುಭೋಗ ನಿಗಿಂತಾ ನಿಖರವಾಗಿ ತಿಳಿದಿರುವ ತಾನು ಇಷ್ಟು ಸಣ್ಣ ವಿಷಯಕ್ಕೆ ಬೆವರಬೇಕೆ, ಅದೂ ಈ ಹೆಂಗಸರ ಮುಂದೆ ಎಂದುಕೊಂಡವನೇ, ಕೈಯಿಂದ ಮುಖದ ಬೆವರೊರೆಸಿಕೊಂಡ. ಅಲ್ಲಿ ಎದುರಲ್ಲಿ ಮೀನುಬುಟ್ಟಿ ಇಟ್ಟುಕೊಂಡು ಕೂತ ದಪ್ಪ ಸೈಜಿನ ಹೆಂಗಸರತ್ತ ಒಮ್ಮೆ ನಿರುಕಿಸಿದ. ಎಲ್ಲ ಮೀನುಬುಟ್ಟಿಗಳೂ ಖಾಲಿಯಾದದ್ದೇ ಹೌದಾದರೆ, ಇವರು ಇಲ್ಲಿ ಉಳಿದದ್ದು ಹೇಗೆ ಎಂದು ಚಿಂತಿಸಿದ. ತಡವಾಗಿ ಬಂದವರಾಗಿರಬಹುದು, ಹಾಗಾದರೆ ತನ್ನ ಕ್ಲಾಸೇ ಎಂದುಕೊಂಡು ನಿರಾಳವಾದ. ಹೆಂಗಸರು ಆರೇಳು ಮಂದಿಯಿದ್ದರು. ಅವರೆದುರಿನ ಬುಟ್ಟಿಗಳಲ್ಲಿ ಎಂತದೋ ಜಬ್ಬಿನಂತಹ ಮೀನುಗಳಿದ್ದವು. ಕೆಲವರು ಗಿರಾಕಿಗಳು ಅದನ್ನು ತಕ್ಕೊಳ್ಳುವುದೂ ಬೇಡವೋ ಎಂದು ಹಿಂದೆ ಮುಂದೆ ನೋಡುತ್ತ ಸುಳಿದಾಡುತ್ತಿದ್ದರೇ ಹೊರತು, ಯಾರೂ ವ್ಯಾಪಾರ ಮಾಡುವಂತೆ ತೋರಲಿಲ್ಲ. ಈ ಬೋಳಿಮಕ್ಕಳು ಮೀನು ಕೊಳ್ಳಲು ಬಂದವರೊ ಅಥವಾ ಮೀನಿನ ಹೆಂಗಸರನ್ನು ನೋಡುವುದಕ್ಕೆ ಬಂದವರೊ ಎಂದು ಒಳಗೊಳಗೇ ಅವಡುಗಚ್ಚಿ ದನಾದರೂ, ಮರುಕ್ಷಣವೇ ಅದನ್ನು ಮರೆತು, ದುಡುದುಡು ನಡೆದುಹೋಗಿ, ಹೆಂಗಸರ ನಡು ವೆಯೇ ಖಾಲಿಯಿದ್ದ ಜಾಗೆಯಲ್ಲಿ ಬುಟ್ಟಿಯನ್ನಿಕ್ಕಿ ಕೂತೇಬಿಟ್ಟ.

ಈಗ, ಹಸಿಮೀನಿನ ಜಬ್ಬುಗಳಿರುವ ಬುಟ್ಟಿ ಗಳ ಮಧ್ಯೆ ಒಂದು ಒಣಮೀನು ತುಂಬಿದ ಬುಟ್ಟಿ. ಮೀನುಮಾರುವ ಹೆಂಗಸರ ನಡುವೆ ಉಗ್ರಾಣಿ ಸ್ವಾಮ. ಹೊಸದೇ ರಂಗು ಬಂದು ಮಂಡಿಯಲ್ಲೇ ಕುಣಿಯಿತು, ಮೀನುಪೇಟೆಯಲ್ಲಿ. ಗುಮಟೆ ಪಾಂಗಿಗೆ ರಾಪು ಕೊಡುತ್ತಾ ಕೊಣೆಯೂ ಕೂಚ ಕುಣಿಯುವುದಿದೆಯಲ್ಲ, ಹಂಗೆ.

ಮೀನಿನ ಹೆಂಗಸರು ಇವನತ್ತ ಒಮ್ಮೆ ನೋಡುವುದು, ಮತ್ತೆ ತಮ್ಮ ತಮ್ಮಲ್ಲೇ ನೋಡಿಕೊಂಡು ಕಿಸಕ್ ಮಾಡುವುದು, ಅದೂ ಸಾಲದೆಂಬಂತೆ ಬಾಯಿಗೆ ಸೆರಗು ಮುಚ್ಚಿಕೊಂಡು ನಗೆ ದುಮಗುಟ್ಟಿಸುವುದು ಸ್ವಲ್ಪ ಹೊತ್ತು ನಡೆಯಿತು. ಉಗ್ರಾಣಿ ಸ್ವಾಮಗೆ ತಲೆಬಿಸಿಯಾಗತೊಡಗಿತು. ತಾನು ಬಂದ ಉದ್ದೇಶ ಸಾಧಿಸಲು, ಇಲ್ಲಿ, ಈ ನಮೂನೆ ಅವಮಾನವಾಗುವ ಹಾಗೆ ಸಗಣಿ ಹೊಡೆಸಿಕೊಳ್ಳುತ್ತ ಕೂರಬೇಕಾಗಬಹುದು ಎಂದು ಎಣಿಸಿರಲೇ ಇಲ್ಲ ಆತ. ಮೀನಿನ ಬುಟ್ಟಿಗಳು ಬರುತ್ತಿದ್ದ ಹಾಗೆ, ದುಡ್ಡು ಬಿಸಾಕಿ ಬುಟ್ಟಿ ಎಳೆದುಕೊಳ್ಳುವವರನ್ನು ಕಣ್ಣಲ್ಲಿ ತುಂಬಿಕೊಂಡು ಬಂದವನೆದುರು, ಈ ಖಾಲಿಹೊಡೆಯುತ್ತಾ ಬಾಯಿ ತೆರಕೊಂಡಂತೆ ಬಿದ್ದಿರುವ ಮೀನುಪೇಟೆ, ಕ್ಷಣಕ್ಷಣಕ್ಕೂ ಅಣಕಿಸುವ ರೀತಿಯಲ್ಲಿ ಬೆಳೆಯುತ್ತಾ, ಮೀನಿನ ಹೆಂಗಸರ ಸಪೋರ್ಟೂ ತನಗಿದೆ ಗೊತ್ತೇನೊ ಉಗ್ರಾಣಿ ಸ್ವಾಮನೆ ಎಂದು ಕುಚೇಷ್ಟೆ ಮಾಡತೊಡಗಿದಂತೆ ಅನ್ನಿಸುತ್ತಲೇ, ಈ ಹಾಳು ಒಣಮೀನಿನ ಬುಟ್ಟಿ ಇಲ್ಲೇ ಬಿಸಾಕಿ ಹೋಗುವಾ ಎಂದೂ ತಲೆಯಲ್ಲಿ ಬಂತು. ಆದರೆ ಅಷ್ಟು ಲಘುವಾಗಿ ಕಾಣುವಂತದ್ದಾಗಿರಲಿಲ್ಲ ಅದು. ಚಿನ್ನವನ್ನೇ ಬಿಸಾಕಿ ಹೋದಷ್ಟು ಮೂರ್ಖತನವಾದೀತು. ಅಂತಾ ಮಂಗನ ಕೆಲಸ ಮಾಡೂದಕ್ಕಾದರೆ ತಾನಿಷ್ಟು ಹೊತ್ತು ಇಷ್ಟೆಲ್ಲಾ ಶ್ರಮ ಯಾಕೆ ಪಡಬೇಕಿತ್ತು ಎಂದು, ಗುರುಮನೆ ಗೌಡ, ಸೀಮೆ ಬುದವಂತ, ಕೋಲ್ಕಾರ ಎಲ್ಲಾ ಸೇರಿದ ಕೂಟವೇ ತನ್ನೊಳಗೆ ಸಮಾಲೋಚನೆ ನಡೆಸುತ್ತಿದೆಯೆಂಬಂತೆ ತನ್ಮಯನಾಗಿ ಯೋಚಿಸಿ, ಕಡೆಗೂ, ಏನಾದರೆ ಆಗಲಿ, ಬಂದ ಕೆಲ್ಸ ಸಾಧಿಸ್ದೆ ಹೋಗುವಾಂಗಿಲ್ಲಾ ಎಂದು ಗಟ್ಟಿಯಾದ.

ಹೀಗೆ ಮೀನುಪೇಟೆಯಲ್ಲಿ ತನ್ನ ಒಣಮೀನು ಬುಟ್ಟಿ ಸಹಿತ ಚಕ್ರಾಧಿಪತ್ಯದ ಎರಡನೇ ಹಂತಕ್ಕೆ ಸಜ್ಜಾಗುತ್ತಿದ್ದಾಗಲೇ, ತನ್ನೆದುರು ಗಿರಾಕಿಯೊಂದು ಬಂದು ನಿಂದದ್ದು ಕಂಡು ಉಗ್ರಾಣಿ ಸ್ವಾಮನಲ್ಲಿ ಇನ್ನಷ್ಟು ಶಕ್ತಿ ಸಂಚಯವಾಯಿತು. 'ಹೆಂಗ್ ಕೊಡ್ತಿಯೊ?' ಎಂದು ಗಿರಾಕಿ ಕೇಳಿದ್ದಕ್ಕೆ, 'ಚಿಲ್ರೆ ಪಲ್ರೆ ಎಲ್ಲ ಇಲ್ಲ, ಏನಿದ್ರೂ ಬುಟ್ಟೀನೇ' ಎಂದ. ತನ್ನ ಮಾತು ಸಾಕಷ್ಟು ಧಾಡಸೀತನದಲ್ಲೇ ಬಂತಲ್ಲಾ ಎಂದೆನ್ನಿಸಿ ಸಮಾಧಾನವಾಯಿತು. ವಾರೆಗಣ್ಣಲ್ಲೇ ಮೀನಿನ ಹೆಂಗಸರ ಕಡೆಗೊಮ್ಮೆ ನೋಡಿದ-ನಿಮ್ಮ ಕೊಳೆಯೂ ಜಬ್ಬಿಗೆ ಇಷ್ಟು ಉಪ್ಪು ಹಾಕಿ ಮಡ್ಗಿ ಎಂದು ಹೇಳುವವನ ಹಾಗೆ. ಎದುರಿಗೆ ನಿಂತಿದ್ದ ಗಿರಾಕಿಯೇನೂ ಕಮ್ಮಿಯುವನಾಗಿರಲಿಲ್ಲ. ಚಾವಡಿಯಲ್ಲಿ ರಿಕಾರ್ಡು, ಉತಾರುಗಳ ತೆಗೆದುಕೊಡುತ್ತಾ, ಹಕ್ಕಿನಿಂದೆಂಬಂತೆ ಅದಕ್ಕೆ ಮುಕಾ ಮುಲಾಜಿಲ್ಲದೆ ದುಡ್ಡು ಕೇಳುವ ಉಗ್ರಾಣಿ ಸ್ವಾಮನ ಈ ಹೊಸಾ ವೇಷ ಕಂಡೇ, ಸ್ವಲ್ಪ ಕೆಣಕಿ ಮಜಾ ತಕ್ಕೊಳ್ಳುವಾ ಹೇಳೇ ಬಂದವನಾಗಿದ್ದ. 'ಬುಟ್ಟಿಯಾದ್ರೆ, ಬುಟ್ಟಿಯಪ್ಪಾ, ಕೊಡೂದು ಹೇಳು' ಎಂದು, ಹಂಗಿಸುವ ಧಾಟಿಯಲ್ಲೇ ಮಾತು ಹೊತಾಕಿದ. ಇಂತಾ ಟೈಮಿನಲ್ಲೆಲ್ಲಾ ಏಕ್‌ದಂ ಜಾಗೃತವಾಗುವ ಉಗ್ರಾಣಿ ಸ್ವಾಮನ ಮಿದುಳು ಗಿರ್ರ್ ಅಂತು. ಕೂತಲ್ಲಿಂದ ಸ್ಪ್ರಿಂಗು ಎದ್ದಂಗೆ ಎದ್ದ. ಎಡಗೈಯನ್ನು ಹಿಂಬದಿಗೆ ಇಟ್ಟುಕೊಂಡು, ಬಲಗೈಯ ತೋರುಬೆರಳೊಂದರ ಹೊರತು ಉಳಿದವನ್ನೆಲ್ಲ ಮಡಿಸಿ, ಕತ್ತನ್ನು ಸ್ವಲ್ಪ ವಾರೆ ಮಾಡಿಕೊಂಡು, ತನಗೀಗ ತಲೆಬಿಸಿಯಾಗಿದೆ ಎಂಬುದನ್ನು ಕಣ್ಣಲ್ಲಿ ತೋರಿಸುತ್ತಾ, ತೋರು ಬೆರಳನ್ನು ಆ ಗಿರಾಕಿಯ ಮುಖದ ಮುಂದೆ ಆಡಿಸುತ್ತಾ, ''ನೀ ಖರೆ



ಗಂಡ್ಸೂವೇ ಹೌದಾದ್ರೆ ತಕ್ಕೊ, ಬುಟ್ಟಿಬುಟ್ಟೀನೇ ತಕ್ಕೊ, ನಯಾಪೈಸೆ ಕೊಡ್ಬೇಡ, ನಾನೂ ನೋಡ್ತೆ'' ಎಂದು ಸವಾಲೆಸೆದು, ಅವನನ್ನೇ ದುರುಗುಟ್ಟಿ ನೋಡುತ್ತ, ಹಾಗೇ ಕತ್ತು ಒರೆ ಮಾಡಿದ ಭಂಗಿಯಲ್ಲೇ ನಿಂತ. ಎದುರಿಗಿದ್ದವನು ಈ ವಿಪರೀತ ಬೆಳವಣಿಗೆಗೆ ಕಂಗಾಲಾಗುವುದು ಬಾಕಿ ಇರಲಿಲ್ಲ. ಏನೋ ತಮಾಷೆ ನೋಡುವಾ ಎಂದುಕೊಂಡದ್ದು ಇಂತಾ ಸ್ಥಿತಿಗೆ ತರುತ್ತದೆಂದೂ ಅವನಿಗೆ ಊಹೆ ಇರಲಿಲ್ಲ. ಇನ್ನು ಬಾಯ್ಬಿಟ್ಟರೆ, ಮೀನಿನ ಬುಟ್ಟಿಯಲ್ಲೇ ತೆಗೆದು ಮುಖಕ್ಕೆ ಹೊಡೆಯುವುದಕ್ಕೂ ಇವನು ಹಿಂದೆ ಮುಂದೆ ನೋಡ ಎಂದು ಮನವರಿಕೆಯಾದದ್ದೇ, ಹೃಹ್ಹ ಎಂದು ಸಣ್ಣಗೆ ನಕ್ಕ. ಹಾಗೆ ನಗುತ್ತ, ತನಗೇನೂ ಆಗಲಿಲ್ಲ, ಎಲ್ಲಾ ತಮಾಷೆ ಎಂದು ತೋರಿಸಿಕೊಳ್ಳುವುದಕ್ಕೆ ಯತ್ನಿಸುತ್ತ, ಇಷ್ಟಿಷ್ಟೇ ಇಷ್ಟಿಷ್ಟೇ ಆ ಜಾಗದಿಂದ ಸರಿದು, ತನ್ನ ಅಡ್ರೆಸ್ಸನ್ನೇ ಅಲ್ಲಿಂದ ಇಲ್ಲಾ ಮಾಡಿದ. ಉಗ್ರಾಣಸ್ವಾಮ ''ಶಾಭಾಸ್, ಅವ್ನ ಸರ್ವೇ ನಂಬರಿಗೇ ಸಮಾ ಕೈಹಾಕ್ದೆ, ಉಗ್ರಾಣಿ ಆದ್ರೂ, ಆಗಬಹುದು ನೀನು, ಬೋಳಿಮಗ್ನೆ' ಎಂದು ತನ್ನ ಬೆನ್ನು ತಾನೇ ತಟ್ಟಿಕೊಂಡು, ಮತ್ತೆ ಯಥಾಸ್ಥಾನದಲ್ಲಿ ಕೂತು, ಮೀನು ಬುಟ್ಟಿಯನ್ನೊಮ್ಮೆ ಕಣ್ತುಂಬ ನೋಡಿ, ಹಾಗೇ ಸ್ವಲ್ಪ ಹೊತ್ತು ಭಾವಪರವಶನಾದ. ಮೀನಿನ ಹೆಂಗಸರು ಬೆರಗಾಗಿಬಿಟ್ಟಿದ್ದರು.



## ಮೂರು

ಇತ್ತ ನಮ್ಮ ಬೀಡಿ ಬೊಮ್ಮನ ಅಂಗಡಿ ಮತ್ತು ಎಣ್ಣೆ ಸೀಪ್ಪನ ಗಡಂಗುಗಳು, ಈಗ ಹೊಸದೇ ಮತ್ತೊಂದು ಸುದ್ದಿಯ ಪುಳಕದಲ್ಲಿ ಒದ್ದೆಯಾಗಿ ಬಿಟ್ಟಿದ್ದವು. ಉಗ್ರಾಣಿ ಸ್ವಾಮ, ಹೋಗಿ ಹೋಗಿ ಮೀನುಪೇಟೆಯಲ್ಲಿ ಒಣಮೀನಿನ ಬುಟ್ಟಿ ಇಟ್ಟುಕೊಂಡು ಕೂತಿರುವುದು, ಇತಿಹಾಸದಲ್ಲೇ ಮೊದಲ ಬಾರಿಗೆ ಘಟಿಸಿದ್ದೆಂಬಂತಾ ಮಹತ್ವ ಪಡೆದು ಬಹು ರೋಚಕ ವಿಚಾರವಾಗಿ ಅಲೆ ಗೊಂಡಿತ್ತು. 'ಕಡ್ಮೆ ಮನಸ್ಯಾ ಅಲ್ಲವೊ, ಚಾವ್ಡೀಲಿ ಕೂತಲ್ಲೇ ಕೂತರೂ ದುಡ್ಡು ಮಾಡ್ತಿದ್ದೋನು ಈಗ ಮೀನುಪೇಟೆಗೂ ಹೋಗಿ ಕೂತ. ತಲೆ ಅಂದ್ರೆ ಅಂವಂದು ನೋಡ್ರೋ' ಎಂಬಂತಹ ಮೆಚ್ಚುಗೆಯ ಮಾತುಗಳು ಒಂದೆಡೆಯಿಂದ ಬರುತ್ತಿದ್ದರೆ, 'ಲೋಫರ್ ಆಗೂದ್ಕು ಒಂದು ಮಿತಿ ಇರ್ಬೇಕು. ಮೀನು ಮಾರೂಕೆ ಹೋಗಿ ಕೂತಿದಾನಂತೆ ಸೂಳೆಮಗ, ಮಾನ-ಮರ‍್ಯಾದೆ ಏನೂ ಇಲ್ದೆ ಹೆಂಗೆ ಬಾಳ್ವೆ ಮಾಡ್ತಾರೊ. ನಾಯಿಯಾದ್ರೂ ಬೇಕು, ಇಂತೋರು ಬ್ಯಾಡಾ' ಎಂಬಂತಹ ಟೀಕೆಗಳೂ ಪುಂಖಾನುಪುಂಖವಾಗಿ ಉದುರತೊಡಗಿದ್ದವು. 'ಇಂತಾ ಬೇವರ್ಸಿ ಗೋಳಿಗೆ ಬುದ್ಧಿ ಬರಬೇಕಂದ್ರೆ, ಜಾತ್ಯಿಂದ್ಲೇ ಬಹಿಸ್ಕಾರ ಹಾಕಿಬಿಡ್ಬೇಕೂ' ಎಂಬ ಜಜ್‌ಮೆಂಟು ಗಳೂ ಅಲ್ಲೊಂದು ಇಲ್ಲೊಂದು ಎಂಬಂತೆ ಮೊಕ ಆಡಿಸಿದವು.

ಹೀಗಿರಲು, ಕೊಗ್ರೆಯ ಹೆಂಚಿನ ಫ್ಯಾಕ್ಟರಿಗೆ ನಿತ್ಯ ಕೂಲೀ ಕೆಲಸಕ್ಕೆ ಹೋಗುವ ಉಗ್ರಾಣಿ ಸ್ವಾಮನ ಹೆಂಡತಿ ರಾಮಿಗೆ, ಅವಳ ಗಂಡ ಈಗ ಮೀನುಪೇಟೆಯಲ್ಲಿ ಕೂತಿರುವ ಸಂಗತಿಯನ್ನು ತೀರಾ ಪ್ರಮಾದದ್ದು ಮತ್ತು ದುಃಖಕರ ಎಂಬ ಉಪ್ಪು ಖಾರ ಹಚ್ಚಿ ಬಿಂಬಿಸಿ, ಅವನ ವಿರುದ್ಧ ಅವಳನ್ನು ಎತ್ತಿಕಟ್ಟುವ ಹುನ್ನಾರಗಳೂ ಪೊತ ಪೊತನೆ ಎದ್ದವು. ಹಲವಾರು ಗಂಡಸರು ಮತ್ತು ಹೆಂಗಸರು ಈ ಹುನ್ನಾರದ ಹುರುಪಿನಲ್ಲಿ, ಲಿಂಗಭೇದ ಮಾತ್ರವಲ್ಲ ದ್ವೇಷ ಅಸೂಯೆಯೇ ಮೊದಲಾದ ಎಲ್ಲಾ ಸ್ಥಾಯೀ, ಸಂಚಾರಿ ಭಾವ ಗಳನ್ನು ಬಿಟ್ಟುಕೊಟ್ಟು ನಿಂತರು.

ಹಸಿಮಗುವಿನಂತಾ ಹೆಂಚಿನಾಕಾರ, ಅಚ್ಚಿ ನಿಂದ ಬಿದ್ದು, ನುಣುಪಾದ ಬೆಲ್ಪಿನ ಮೇಲೆ



ಜಾರುವುದನ್ನೇ ತದೇಕ ಚಿತ್ತದಿಂದ ನೋಡುತ್ತಾ ಖುಷಿಪಡುವ, ತನ್ನೆಲ್ಲಾ ಕನಸುಗಳನ್ನು ಹಾಗೆ ಹಾಯಾಗಿ ಜಾರುವ ಹಸಿ ಹೆಂಚಿನ ಮೇಲೇ ಇಟ್ಟಿದ್ದೇನೆಂಬಂತೆ ಮಿಡಿಯುವ ರಾಮಿ, ಅವತ್ತು ಮಧ್ಯಾಹ್ನದ ಮೇಲೆ ಆ ಸುದ್ದಿ ಕಿವಿಗೆ ಬಂದು ಬಡಿಯುವವರೆಗೂ ಆ ಹಸಿಹೆಂಚಿನಷ್ಟೇ ನಯವಾಗಿ, ನವಿರಾಗಿ, ನಿರಾಳವಾಗಿ ಇದ್ದಳು ಪಾಪ. ಸುದ್ದಿ ತಿಳಿದದ್ದೇ ನಿಂತಲ್ಲೇ ಕೆಂಡವಾಗ ತೊಡಗಿದಳು. ಬೆಲ್ಟಿನ ಬಳಿ ಮತ್ತೊಬ್ಬಾಕೆಯನ್ನು ಎಳೆದು ನಿಲ್ಲಿಸಿ, ನೋಡ್ಕೊ ಮಾರಾಯ್ತಿ ಎಂದು ದುಡುಗುಟ್ಟಿಕೊಂಡು ಆಕೆ ಹೆಂಚಿನ ಫ್ಯಾಕ್ಟರಿಯಿಂದ ಹೊರಬಿದ್ದಾಗ ಚಂಡಿಯಂತೇ ಆಗಿದ್ದಳು.

ಇವನನ್ನು ಗಂಡಾ ಎಂದು ಗಂಟುಹಾಕಿಕೊಂಡದ್ದರ ಬದಲು ಕಲ್ಲುಗುಂಡನ್ನೇ ಗಂಟು ಹಾಕಿಕೊಂಡಿದ್ದರೂ ಏನೂ ಲುಕ್ಸಾನು ಆಗುತ್ತಿರಲಿಲ್ಲ ಎಂದೇ ಗಂಡನಾದ ಉಗ್ರಾಣ ಸ್ವಾಮನ ಬಗ್ಗೆ ಎಷ್ಟೋ ಸಲ ಯೋಚಿಸಿದ್ದಾಕೆ ರಾಮಿ. ಒಂದು ದಿನದ ಮಟ್ಟಿಗಾದರೂ, ದಂಡಕ್ಕೆ ಬಿದ್ದವನು ಎಂಬುದರಿಂದ ಅವನನ್ನು ಬೇರೆ ಮಾಡಿನೋಡಬೇಕೆಂಬ ಮಹದಾಸೆ ಕಾದು ಕೈಗೂಡಿಸಲಾಗದೆ ಹತಾಶಳಾದಾಕೆ. ಅವನ ಮೇಲೆ ಹೆಜ್ಜೆಹೆಜ್ಜೆಗೂ ಕಿಡಿಕಾರುತ್ತಲೂ, ತನ್ನೆಲ್ಲಾ ಪ್ರೀತಿಯನ್ನು ಮೊಗೆದಿಕ್ಕಿ ಅವನನ್ನೊಬ್ಬ ಮನುಷ್ಯನನ್ನಾಗಿ ಮಾಡಬೇಕೆಂಬ ತೀವ್ರ ಹಂಬಲದಲ್ಲಿ ತನ್ನನ್ನೇ ತಾನು ಹೆಪ್ಪು ಹಾಕಿಕೊಂಡವಳಂತೆ ದಣಿದಾಕೆ. ದಿನವೆಲ್ಲಾ ಮೈಬಗ್ಗಿಸಿ ದುಡಿದು ಮನೆಗೆ ಬಂದಾಗ, ದಣಿವೆಲ್ಲಾ ನೀಗುವಂತೆ ಕಿಲಗುಟ್ಟಿ, ಕೈಯಾಡಿಸಿ ಕರೆವ ಮಿದುವಾದ ಮಗುವಾದರೂ ಒಂದಿದ್ದರೆ ಎಂದು ನೆನೆಯುತ್ತ, ಒಳಗೊಳಗೇ ಅತ್ತು ಬಿಸಿ ಕಣ್ಣೀರಿಗೆ ಕೆನ್ನೆ ಮೇಲೇ ಹಾದಿ ಮಾಡಿಕೊಟ್ಟಾಕೆ. ಮನಸ್ಸು ಮಾಡಿದ್ದರೆ ಇಂತಾ ಗಂಡನೆಂಬ ಗಂಡನಿಗೆ ಸೆಡ್ಡು ಹೊಡೆದು ಕಸುವಿರುವವರೆಗೂ ಒಂದರ ಬೆನ್ನಿಗೊಂದು ಹೆತ್ತು ಬಿಸಾಕಬಹುದಿತ್ತು, ಆದರೆ ಹೆರುವ ಪವಿತ್ರ ಕೆಲಸವನ್ನು ಹಠ ಮತ್ತು ಈರ್ಷೆಯ ಕೈಗೆ ಕೊಡುವುದು ಬೇಡ ಎಂದು ತಾಳಿಕೊಂಡಾಕೆ ರಾಮಿ.

ಈ ಕ್ಷಣಕ್ಕೆ ರಾಮಿಯನ್ನು ಮುಖ್ಯವಾಗಿ ಕಾಡಿದ್ದು ಅವನು ಮೀನುಪೇಟೆಯಲ್ಲಿ ದುಡ್ಡಿನ ಮುಖ ನೋಡುವುದಕ್ಕೆ ಕೂತಿದ್ದಾನೆಂಬ ವಿಚಾರಕ್ಕಿಂತ, ತಾನು ಮಳೆಗಾಲಕ್ಕೆಂದು ತೆಗೆದುಕೊಂಡು ಇಟ್ಟಿದ್ದ ಒಣ ಜಬ್ಬನ್ನು ಇವತ್ತು ಇವನು ಇಲ್ಲ ಮಾಡುತ್ತಿದ್ದಾನಲ್ಲಾ ಎಂಬ ಆತಂಕವಾಗಿತ್ತು. ಅದೇ ಅವಳನ್ನು ಚಂಡಿಯಂತಾಗಿಸಿದ್ದು. ಅದೂ ಎಷ್ಟೊಂದು ಕಾಳಜಿವಹಿಸಿ, ಬೆಕ್ಕಿಗೇನಾದರೂ ಸಿಗಬಾರದೆಂದು ಮೀನುಕುಕ್ಕೆಯಿಂದ ತಪ್ಪಿಸಿ, ತನ್ನ ಮಹಾ ಆಸ್ತಿಯಾದ ಸೀರೆಯ ಅಪ್ಪುಗೆಯನ್ನೇ ದಯಪಾಲಿಸಿ ಟ್ರಂಕಿನಲ್ಲಿ ತುಂಬಿಟ್ಟಿದ್ದೆ. ಅದನ್ನೂ ಹುಡುಕಿ ತೆಗೆದನಲ್ಲಾ ಎಂಬುದನ್ನು ಯೋಚಿಸುತ್ತಲೇ, ಅವಳ ಕ್ರುದ್ಧತೆಗೆ ಅವಳೇ ಹಾಕಿಕೊಳ್ಳಲೆತ್ನಿಸುತ್ತಿದ್ದ ಕಡಿವಾಣವೂ ಕಳಚಿಹೋಯ್ತು.

ಎದುರು ಯಾರ್ಯಾರೋ ಕಂಡರು. 'ಏನೇ ರಾಮಿ' ಎಂದರು. ರಾಮಿಯ ಕಣ್ಣು, ಕಿವಿ, ನಾಲಿಗೆ ಇವಾವುದೂ ಈಗ ಕೆಲಸ ಮಾಡಲಿಲ್ಲ. ಅವೆಲ್ಲಾ ಅವಳ ಬಿರುಸೆಂದರೆ ಬಿರುಸಾದ ನಡಿಗೆಯ ಜೊತೆ ಒಪ್ಪಂದ ಮಾಡಿಕೊಂಡು ತಟಸ್ಥವಾಗಿದ್ದವು. ದಾರಿಯೇ, 'ಹೀಗೆ ಬಾ ರಾಮಿ' ಎಂದು ಅಡ್ಡಬಿದ್ದು ಅವಳನ್ನು ಸ್ವಾಗತಿಸಿ, ಮುಂದೆ ಮುಂದೆ ಕರೆದೊಯ್ಯುತ್ತಿದೆ ಎಂಬಂತಿದ್ದ ಆ ದೃಶ್ಯ, ನೋಡಿ ಮಜಾ ತಕ್ಕೊಳ್ಳುವಂತವರ ಕಣ್ಣಲ್ಲಿ ಮಿಂಚು ಕೂಡುವುದಕ್ಕೂ, ಏನೆಂದು ಅರ್ಥ ವಾಗದವರ ಅಚ್ಚರಿಗೂ ಕಾರಣವಾಯಿತು.



## ನಾಲ್ಕು

ಇದಾವುದರ ಪರಿವೆಯೂ ಇಲ್ಲದೆ ಮೀನುಪೇಟೆಯಲ್ಲಿ ಕೂತೇ ಇದ್ದನಲ್ಲ ಉಗ್ರಾಣಿ ಸ್ವಾಮಿ, ಅವನಲ್ಲೀಗ ಚೈತನ್ಯ ತುಂಬುವ ಹಾಗೆ ಮತ್ತೆ ಕಳೆಗಟ್ಟತೊಡಗಿತ್ತು ಮೀನುಪೇಟೆ. ಆಗಿನಿಂದಲೂ, ಅವನ ಆಚೀಚೆ, ಸಣ್ಣ ಜಬ್ಬಿನ ಬುಟ್ಟಿಗಳನ್ನಿಟ್ಟುಕೊಂಡು ಕೂತಿದ್ದ ಹೆಂಗಸರ ಮುಖಗಳು ಮರೆಯಾಗುತ್ತಿದ್ದ ಹಾಗೆ, ಹೊಸ ಹೊಸಾ ಹೆಂಗಸರಿಂದಲೂ, ಹೊಂತಗಾರ ಲಲನೆಯರ ಚೆಂದ ಮತ್ತು ವಾಸನೆಯ ಜರ್ಬಿ ನಿಂದಲೂ, ಇದೀಗ ತಾನೆ ಬಲೆಗೆ ಬಿದ್ದು ಇನ್ನೂ ಸಮುದ್ರದ ಸೊಗಸನ್ನು ಮೈಮೇಲೆ ಉಳಿಸಿ ಕೊಂಡ ತಾಜಾ ಮೀನುಗಳ ಬುಟ್ಟಿಗಳಿಂದಲೂ ಮೀನುಪೇಟೆಯೀಗ ರಶ್ಶಾಯಿತು. ಇಷ್ಟಾಗು ತ್ತಲೇ, ಇದನ್ನೇ ಕಾದು ಕೂತಿದ್ದವರಂತೆ, ಅದೆಲ್ಲಿ ದ್ದರೂ-ಕೊಳಕಾದ ಪ್ಯಾಂಟಿನ ಮೇಲೆ ಅಷ್ಟೇ ಕೊಳಕಾದ ತೋಳಿಲ್ಲದ ಬನಿಯನ್ನು ಹಾಕಿ ಕೊಂಡಿದ್ದ, ಕಟ್ಟುಮಸ್ತಾದ ಮೈಕಟ್ಟಿನ ಗೂಳಿಗಳಂತಾ ಆ ಐದಾರು ಮಂದಿ, ಇಲ್ಲಿಲ್ಲೇ, ಇವರ ನಡುವಿಂದಲೇ ಎದ್ದರು ಎನ್ನುವ ಹಾಗೆ ಹಠಾತ್ತನೆ ಕಾಣಿಸಿಕೊಂಡರು.

ಬೆಳಗ್ಗೆ ತನ್ನ ಮನೆಯ ಗೋಡೆಗೆ ಬಂದು ಬಡಿದ ಸುದ್ದಿಯ ವಾಸ್ತವವನ್ನು ಉಗ್ರಾಣಿ ಸ್ವಾಮಿ ಈಗ ಕಣ್ಣಾರೆ ಕಂಡ. ಚಕಚಕನೆ ನಡೆಯ ತೊಡಗಿತ್ತು ವ್ಯವಹಾರ. ಬಂದ ಬಂದ ಬುಟ್ಟಿ ಗಳನ್ನೆಲ್ಲಾ ಹೆಂಗಸರಿಂದ ತಮ್ಮ ಸುಪರ್ದಿಗೆ ಅವರು ಎಳೆದುಕೊಳ್ಳುವುದು; ಲೆಕ್ಕ ಮಾಡಿಯಲ್ಲ, ಬಾಚಿಯೇ ಕೊಡುತ್ತಾರೆನ್ನುವ ಹಾಗೆ ಕಂತೆ ಕಂತೆ ದುಡ್ಡನ್ನು ಇವರಿಗೆ ಕೊಡುವುದು ಒಂದೇ ಸಮನೆ ನಡೆಯಿತು. ಹೆಂಗಸರ ಮುಖದಲ್ಲಿ ಅರಳುವ ಉಬ್ಬಿದ ನಗೆಗೆ ಅವರು ತಮ್ಮ ಮುಖದ ನಗುವನ್ನು ಸೇರಿಸುವ, ಆಗೀಗ ಉಕ್ಕಿ ಚೆಲ್ಲುವಂತಾ ಮೈಯಿನ ಹೆಂಗಸರು ತಮ್ಮ ಬುಟ್ಟಿಯೊಂದಿಗೆ ಎದುರು ಬಂದಾಗ ಅವರ ತೋಳುಗಳನ್ನು ಒಮ್ಮೆ ಹಿಡಿದು ರುಚಿ ನೋಡುವಷ್ಟು ಅಧಿಕಾರವನ್ನೂ ಆ ಯಾವುದೋ ಜಗತ್ತಿನವರೆಂಬಂತಾ ಜನ ನಾಲ್ಕೇ ನಾಲ್ಕು ತಾಸಿನಲ್ಲಿ ಸ್ಥಾಪಿಸಿಬಿಟ್ಟದ್ದು ನೋಡುವಾಗ, ಉಗ್ರಾಣಿ ಸ್ವಾಮಿನಿಗೆ ಮೀನಿನ ವಾಸನೆಯೂ ಸಿಗದಂತೆ ಉಸಿರುಗಟ್ಟಿತು.

ಲಗುಬಗೆಯ ಆ ವ್ಯವಹಾರವಂತೂ ಸುಖದಾಯಕವೆಂಬಂತೆ ಮುಂದುವರಿದಿತ್ತು. ಈ ನಡುವೆ, ಆ ಸಣ್ಣ ಜಬ್ಬುಗಳ ಬುಟ್ಟಿ ಇಟ್ಟುಕೊಂಡು ಕೂತಿದ್ದ ಹೆಂಗಸರೂ ದುಡ್ಡು ಮಾಡಿಕೊಂಡು ನಡೆದುಬಿಟ್ಟಿರುವುದು ಗಮನಕ್ಕೆ ಬರುತ್ತಲೇ, ಇಷ್ಟೂ ಹೊತ್ತು ಬೆರಗಿನಿಂದ ಬೆರಳು ಕಚ್ಚಿ ಕೂತ ಉಗ್ರಾಣಿ ಸ್ವಾಮಿ, ಕನಸಿನಿಂದ ಎಚ್ಚರಗೊಂಡವ ನಂತೆ ಎಚ್ಚರಾದ. ಇನ್ನು ತಡಮಾಡಿದರೆ ಆಗಾ ಎಂದುಕೊಂಡವನೇ, ದೊಡ್ಡ ಧ್ವನಿಯಲ್ಲಿ ಆ ಗಂಡಸರನ್ನು ಉದ್ದೇಶಿಸಿ, "ನಿಮ್ಗೆ ಹೆಂಗಸ್ರು ಮಾತ್ರ ಕಾಣ್ತರೆ ಅಲ್ಲ? ಇದೇನು ಸಂಪತ್ತಲ್ವಾ?" ಎಂದು ತನ್ನ ಒಣಮೀನಿನ ಬುಟ್ಟಿಯನ್ನೊಮ್ಮೆ ಬಡಬಡನೆ ತಟ್ಟುತ್ತಾ ಕೇಳೇಬಿಟ್ಟ. ಆ ಅಷ್ಟೂ

ಮಂದಿ. ಇವನನ್ನೊಮ್ಮೆ, ಇವನ ಮೀನುಬುಟ್ಟಿಯ ನ್ನೊಮ್ಮೆ ವಿಚಿತ್ರವಾಗಿ ನೋಡಿ, ''ಏಯ್, ಹೋಗೊ'' ಎಂದರು, ಅಸಡ್ಡೆಯಿಂದ. ಇವರ ಮುಂದೆ ತನ್ನ ಆಟ ನಡೆಯಲಾರದೇನೊ ಎನ್ನಿಸಿ ಒಳಗೊಳಗೇ ಕಳವಳಪಟ್ಟನಾದರೂ, ಇಷ್ಟಕ್ಕೇ ನರ್ವಸ್ ಆದಂತೆ ತೋರಿಸಿಕೊಂಡುಬಿಟ್ಟರೆ ಕೆಲಸ ಕೆಟ್ಟುಹೋಗುತ್ತದೆ ಎಂದುಕೊಂಡವನೇ, ಏಕ್‌ದಂ ಜೋರು ಧ್ವನಿಯಲ್ಲಿ, ತಕ್ಷಣವೇ, ''ಏನು, ಏನ್ರೊ, ಒಂದೇ ಒಂದು ಮೀನು ಬುಟ್ಟಿಯೂ ಒಳಗೆ ಬರದೇ ಇರೂ ಹಂಗೆ ಮಾಡ್ಲೊ, ನೀವೇನು ಹರೂದಿದೆ ಹೇಳಿ ನೋಡ್ತೆ'' ಎಂದು ಸಡ್ಡುಹೊಡೆದು ನಿಂತವನ ಪೋಸಿನಲ್ಲಿ ಬೆಳಗಿದ. ಈಗ ಮಾತ್ರ ಆ ಅಪರಿಚಿತ ಧಾಂಡಿಗರು ತಪ್ಪಿದರೆ ಎಡವ ಟ್ಟಾದೀತು ಎಂದುಕೊಂಡರೂ ಏನೊ, ಮಾತಿ ಲ್ಲದೆ ಇವನ ಮೀನುಬುಟ್ಟಿಯನ್ನು ಎಳೆದು ಕೊಂಡು ಐವತ್ತು ರೂಪಾಯಿಯ ಒಂದು ನೋಟನ್ನು ಇವನ ಕೈಯಲ್ಲಿ ತುರುಕಿ, ಇಲ್ಲೇನೂ ಆಗಲೇ ಇಲ್ಲ ಎಂಬಷ್ಟು ಸ್ತಬ್ಧತೆಯಿಂದ ತಮ್ಮ ವ್ಯವಹಾರದಲ್ಲಿ ಮುಳುಗಿಹೋದರು. ಕಂತೆ ನೋಟುಗಳ ಮೇಲೆ ಕಣ್ಣಿಟ್ಟಿದ್ದ ಉಗ್ರಾಣಿ ಸ್ವಾಮನಿಗೆ, ಬರೀ ಐವತ್ತು ರೂಪಾಯಿಯ ನೋಟು ಕೈಗೆ ಬಂದು ಕೂತಾಗ, ಒಂದು ಕ್ಷಣ ವಿಚಲಿತನಾದ. ಉಪಾಯವಿರಲಿಲ್ಲ. ಮತ್ತೆ ಜೋರು ಹಾಕುವ ಧೈರ್ಯವೂ ಇರಲಿಲ್ಲ. ಬಂದ ಐವತ್ತನ್ನೂ ಕಳೆದುಕೊಳ್ಳಬೇಕಾದೀತು ಎಂಬ ಆತಂಕ ಬೇರೆ ಕೂಡಿತು. ಇಷ್ಟಾದರೂ ಆಯಿತಲ್ಲ ಎಂದು ಸಮಾಧಾನ ತಾಳುತ್ತ ಸರಸರನೆ ಮೀನುಪೇಟೆಯ ರಶ್ಶಿನಿಂದ ಹೊರಬಿದ್ದ.

ಗಂಡನನ್ನು ಮೆಟ್ಟಿಹಾಕುವಷ್ಟು ಸಿಟ್ಟನ್ನು ಕೂಡಿಸಿಕೊಂಡು ಆ ಕಡೆಯಿಂದ ಹೊರಟಿದ್ದ ರಾಮಿ ತರ್ಕ ಮಾಡಿದ್ದಳು-ಮೀನನ್ನೇನಾದರೂ ಇವನು ಮಾರಿ ಮುಗಿಸಿದ್ದರೆ, ಸೀದಾ ಎಣ್ಣೆ ಸೀವ್ಯನ ಗಡಂಗಿಗೇ ಬಂದಿರುತ್ತಾನೆ ಎಂದು. ಅದಕ್ಕೇ ಅವಳು ಮೊದಲು ಅಲ್ಲೇ ನೋಡುವು ದೆಂದು ಮೀನುಪೇಟೆಯ ದಾರಿಯಲ್ಲಿ ಹೋಗದ ಸೀವ್ಯನ ಗಡಂಗಿನ ದಾರಿಗೇ ಹೊರಳಿದ್ದಳು. ಲೆಕ್ಕ ತಪ್ಪಲಿಲ್ಲ. ಅವಳಿಗೆ ಇನ್ನೂ ಸಮಾಧಾನ ತಂದಿ ದ್ದೆಂದರೆ ವೇಳೆಯೂ ಮೀರಲಿಲ್ಲ ಎಂಬು ದಾಗಿತ್ತು. ಇವಳು ಬಂದು ಸೀವ್ಯನ ಗಡಂಗು ಮುಟ್ಟುತ್ತಿದ್ದಂತೆಯೇ, ಮೀನುಪೇಟೆ ಕಡೆಯಿಂದ ಇತ್ತಲೇ ಗಡಂಗನ್ನೇ ಎದುರುಗೊಂಡು ಬರತೊಡಗಿತ್ತು ಉಗ್ರಾಣಿ ಸ್ವಾಮನ ಸವಾರಿ. ಅಲ್ಲೇ ತಡೆದಳು. ಅವನು ನಡುಗಿಹೋದ ಇವಳ ಅವತಾರಕ್ಕೆ. ಕೈಯಲ್ಲಿದ್ದ ಐವತ್ತರ ನೋಟು ಕತ್ತನ್ನು ಹೊರಗೆ ಇಣುಕಿಕೊಂಡು ಹಾಗೇ ಇತ್ತು. ಅದನ್ನೆಳೆದುಕೊಂಡವಳೇ, ''ಎಷ್ಟಕ್ಕೆ ಮೀನು ಮಾರಿದೆ?'' ಎಂದು ಗುಡುಗಿದಳು. ಅಲ್ಲಿ ನೆರೆದವರಿಗೆಲ್ಲಾ ಈ ದೃಶ್ಯ ಅದ್ಧೂರಿಯದ್ದಾಗಿ ಕಂಡಿತು. ''ಇಷ್ಟಕ್ಕೇ'' ಎಂದು ಹೇಗೋ ಹೇಳಿ ಮುಗಿಸಿದ. ಅವನ ನಾಲಿಗೆಯ ಪಸೆ ಆರಿ ಹೋಗಿತ್ತು. 'ಅಂ?' ಎಂದಷ್ಟೇ ಉದ್ಗರಿಸಿದ ರಾಮಿ, ಮುಂದೇನು ಮಾಡುವಳೆಂದು ಊಹಿ ಸುವ ಮೊದಲೇ, ಅವನ ತೋಳನ್ನು ಹಿಡಿದು ಮೀನುಪೇಟೆಯತ್ತ ರಭಸವಾಗಿ ಎಳೆದುಕೊಂಡು ನಡೆದೇಬಿಟ್ಟಳು. ನಿಂತು ನೋಡುತ್ತಿದ್ದ ಜನ ವೆಂಕಟರಮಣ ದೇವರ ತೇರು ನೋಡುವವ ರಂತೆ ಬಾಯಿ ತೆರಕೊಂಡು ನೋಡುತ್ತಲೇ ಇದ್ದರು.

ರಾಮಿ ಹಾಗೆ ರೋಷದಿಂದ ತನ್ನ ಗಂಡನನ್ನು ಎಳೆದು ತಂದು ನಿಲ್ಲಿಸುತ್ತಿದ್ದಂತೆ, ಕೆಲವು ಕ್ಷಣಗಳವರೆಗೆ, ಇಡೀ ಮೀನುಪೇಟೆ ಚಲನ ಯನ್ನೇ ಕಳಕೊಂಡು ಕೂತಿತು. ಆ ಧಡೂತಿ ಗಂಡಸರ ಮುಂದೆ ಗಂಡನನ್ನು ನಿಲ್ಲಿಸಿ, 'ನಿಂಗೆ ಬರೀ ಐವತ್ತು ಕೊಟ್ಟು ಮೀನುಬುಟ್ಟಿ ತಕ್ಕೊಂಡೋನು ಯಾರು, ಹೇಳು' ಎಂದು ಸಣ್ಣ ಪೋರನನ್ನು ಗದರಿಸಿ ಕೇಳುವ ಹಾಗೆ ಕೇಳಿದಳು. ಸಣ್ಣ ಪೋರನ ಹಾಗೇ ನಡುಗುತ್ತಿದ್ದ ಉಗ್ರಾಣಿ ಸ್ವಾಮ, ಆ ಮನುಷ್ಯನನ್ನು ತೋರಿಸಿದ. ರಾಮಿ,

ಸೀರೆ ಕಣಕಾಲಿನ ಮಟ್ಟಕ್ಕೆ ಬರುವಂತೆ ಎತ್ತಿ ಸೊಂಟದಲ್ಲಿ ಸಿಕ್ಕಿಸಿಕೊಂಡು ನಿಂತು, ''ಏನ್ಸೋ, ಯಾವಾರ ಗೊತ್ತಿಲ್ದೋನು ಅಂತೇಳಿ ಮೋಸ ಮಾಡೂಕೆ ನೋಡ್ತಿಯೇನೊ?'' ಎಂದು ಎದೆ ಮುಂದೆ ಮಾಡಿ ನಿಂತಾಗ ಅವರಷ್ಟೂ ಮಂದಿಯನ್ನು ಅಧೀರತೆ ಆವರಿಸತೊಡಗಿತು. ''ಕುನ್ನಿಗೆ ಬಿಸಾಕ್ದಂಗೆ ಈ ಪುಡಿ ದುಡ್ಡು ಕೊಟ್ಟು ಕಳ್ಸಿಯಲ್ಲಾ, ಹಾಕ್ಲಾ ನಿನ್ನ ಮುಖಕ್ಕೆ'' ಎಂದು ಮತ್ತೆ ಸಂಪನ್ನವಾಗಿ ಕಿಡಿಕಾರುವುದನ್ನು ಮುಂದುವರೆಸಿದ ರಾಮಿ, ''ನೋಡು, ಕೊಡಬೇಕಾದ್ದು ಮರ್ಯಾದೆಯಾಗಿ ಕೊಡು, ಇಲ್ಲಾಂದ್ರೆ ಸುಖಾ ಇರ'' ಎಂದಳು. ''ನಂಗೇನು ಎಮ್ಮೆಲ್ಲೆ ಸಂಕ್ರ ಹೆಗ್ಡೇರು ಗೊತ್ತಿಲ್ಲ ಅಂದ್ಕಂಡ್ಯಾ?'' ಎಂದೂ ಒಂದು ಮಾತು ಎಸೆದೇಬಿಟ್ಟಳು. ಮೊದಲೇ ಅವಳ ಆರ್ಭಟಕ್ಕೆ ತತ್ತರಿಸಿದ್ದ ಆ ಮಂದಿ, ಅವಳೀಗ ಎಂಎಲ್‌ಎ ಹೆಸರನ್ನೂ ಪ್ರಸ್ತಾಪಿಸಿಬಿಟ್ಟಾಗ ದಿಗ್ಭ್ರಾಂತರಾಗಿ ಹೋದರು. ತುಟಿ ಕದಲಿಸದೆ, ನೋಟಿನ ಕಂತೆಯೊಂದನ್ನು ಅವಳ ಕೈಗೆ ಕೊಟ್ಟು ಕೈತೊಳೆದುಕೊಂಡರು. ರಾಮಿ ಅಲ್ಲಿಂದ ಹೊರಬೀಳುತ್ತಿದ್ದಂತೆ, ಬೆನ್ನ ಹಿಂದೆಯೇ ಬಂದ ಅವರಲ್ಲಿನ ಒಬ್ಬ, ''ಮತ್ತೆಲ್ಲೂ ಬಾಯಿ ಬಿಡ್ಬೇಡ ಮಾರಾಯ್ತಿ, ಒಂದು ಬುಟ್ಟಿಗೆ ಇಷ್ಟು ಅಂತಾ ಶಂಕ್ರ ಹೆಗ್ಡೇರು ಹೇಳಿದ್ದಕ್ಕಿಂತ ಐವತ್ತು ಜಾಸ್ತೀನೇ ಸಿಕ್ಕಿದೆ ನಿನಗೆ'' ಎಂದು ಪಿಸುಗುಟ್ಟಿ ವಾಪಸ್ಸು ಹೋದ. ಅದಕ್ಕೆ ಯಾವ ಪ್ರತಿಕ್ರಿಯೆಯನ್ನೂ ನೀಡದ ಆಕೆ, ಇದೆಲ್ಲವನ್ನೂ ಮಂಗನ ಹಾಗೆ ನೋಡುತ್ತ ನಿಂತುಬಿಟ್ಟಿದ್ದ ಗಂಡ ಹಾಗೇ ನಿಂತೇ ಇರುವಾಗಲೇ ಅಷ್ಟೂ ದುಡ್ಡನ್ನು ಕುಪ್ಪಸದೊಳಗೆ ಸೇರಿಸಿ, ಸರಸರಾಂತ ಮನೆಯ ಹಾದಿ ಹಿಡಿದು ನಡೆದೇಬಿಟ್ಟಳು. ಆಗ ಅವಳು ತನ್ನೊಳಗೇ ಮುಸಿಮುಸಿ ನಗುತ್ತಾ, ಅಚ್ಚರಿಪಡತೊಡಗಿದ್ದಳು -ಎಮ್ಮೆಲ್ಲೆ ಸಂಕ್ರ ಹೆಗ್ಡೆಯ ಮುಖವನ್ನೂ ಸಹಾ ಸರಿಯಾಗಿ ನೋಡದವಳು, ಅವನ ಹೆಸರನ್ನು ಸಮಾ ಹೊತ್ತಿಗೇ ಅದು ಹೆಂಗೆ ತೆಗೆದೆ ತಾನು?...



[illegible]

[illegible]

## ಕಾಗದದ ದೋಣಿ



# ಸೈನಿಕ ಅಣ್ಣನಿಗೊಂದು ಪತ್ರ

ಪ್ರೀತಿಯ ಕಿಟ್ಟಣ್ಣನಿಗೆ,

ನಮಸ್ಕಾರ. ನಿನ್ನನ್ನು ಕೊನೆ ಬಾರಿ ನಾವೆಲ್ಲರೂ ನೋಡಿದಾಗ ನಾನು ಆರುತಿಂಗಳ ಕೂಸಂತೆ. ಈಗ ನನಗೆ 36 ವರ್ಷ. ನಮ್ಮ ಹಳ್ಳಿಗೆ ಬಂದಾಗ ನೀನಾಗಲೇ ಮಿಲ್ಟ್ರಿಯಲ್ಲಿ ಅಧಿಕಾರಿ. ನಮ್ಮ ದರಿದ್ರ ಹಳ್ಳಿ, ನಿನ್ನ ಮೌಂಶಿಯ ಮನೆ ತುಂಬ ಇರೋ ಮಕ್ಕು, ಬಡತನ, ನೋಡಿ ನಿನಗೆ ಕೆಡುಕನಿಸಿತಂತೆ. ಸೈನ್ಯದಿಂದ ರಜೆಗೆಂದು ಬಂದಾಗ ಎಲ್ಲರಿಗೂ ಏನೇನೋ ಉಡುಗೊರೆ ತಂದಿದ್ದೆಯಂತೆ. 'ಕಿಟ್ಟಣ್ಣಾ, ಕಮ್ತ ನೀಗವಲ್ತಪಾ, ಆರೆತ್ತಿನ ಕಮ್ತ ಇತ್ತು ನಮ್ದು, ನಮಗs ತಿನ್ನಲಿಕ್ಕ ಇಲ್ಲಂದ್ರ, ಹೆಂಗರೆ ತಡಕೊಂಡೆವ್ಪೊ, ಆದರs ದನಕ್ಕ ಕೂಳ ಇಲ್ಲಂದ್ರ, ಹೆಂಗ ಆದೀತೋ ಮಾರಾಯಾ. ಮೂಕಪ್ರಾಣಿ ಹಿಂಸಾ ನೋಡ್ಲಿಕ್ಕಾಗಲಿಲ್ಲ. ಅದಕ್ಕs ಕಮ್ತ ತೆಗದಬಿಟ್ಟೆ.' ಅಂತ ಅಪ್ಪ ಹೇಳಿದರ, ನೀನು- 'ಕಾಕಾ, ನೀ ಯೇನ ಚಿಂತಿ ಮಾಡಬ್ಯಾಡ, (ನನ್ನನ್ನೆತ್ತಿಕೊಂಡು) ಇವರೆಲ್ಲಾ ದೊಡ್ಡವರಾದರಂದ್ರ, ನಿನ್ನ ಹಿಡದವರs ಇಲ್ಲ ಅಂತ ತಿಳಿ.' ಎಂದು ಸಮಾಧಾನ ಹೇಳಿದಿಯಂತೆ. ಆ ನಿನ್ನ ಭವಿಷ್ಯ ತಕ್ಕ ಮಟ್ಟಿಗೆ ನಿಜಾನೂ ಆಗಿದೆ. ಹೋಗುವಾಗ ನನ್ನ ಕೈಲಿ ಎಂಟಾಣೆ ಇಟ್ಟು, ಒಂದು ಬೆಚ್ಚನೆ ಮುತ್ತು ನೀಡಿ ಹೋದಿಯಂತೆ. ಆ ಮುತ್ತು ಆಗ ಹೇಗಿತ್ತೋ ಏನೋ? ಈಗ್ಲೂ ನೆನೆಸಿಕೊಂಡ್ರ, ನನ್ನ ಹಣೆ ಬೆಚ್ಚಗs ಅನಿಸಿ ಜುಂ, ಜುಂ, ಅಂತದ.

ಇನ್ನು, ನಿನ್ನಣ್ಣ ಶಂಕ್ರಣ್ಣನಿಗೂ ನಿವೃತ್ತಿಯಾಯಿತು. ಈಗ ಬೆಂಗಳೂರಿನಲ್ಲೇ ಸೆಟ್ಲ ಆಗ್ಯಾನ. ನಿನ್ನ ತಾಯಿ, ಅಂದ್ರ ನಮ್ಮ ದೊಡ್ಡಮ್ಮ ತೀರಿಕೊಂಡು ಐದು ವರ್ಷನs ಆದವು. ನಿನ್ನ ಮಿಲ್ಟ್ರಿ ಡ್ರೆಸ್ಸು ಮತ್ತs ಪೆಟ್ಟಿಗೆ ಇನ್ನೂ ಬಂದಿಲ್ಲ, ನೀ ಇನ್ನ ಬದುಕೀ ಇದ್ದಿ ಅಂತ ಕೊನಿತನಕ ನಂಬಿದ್ಲು. ನಾವೂ ಅಷ್ಟೇ. ಭಾರತ-ಪಾಕಿಸ್ತಾನ ಯುದ್ಧದ ಸಮಯದಲ್ಲಿ 82 ಭಾರತೀಯ ಸೈನಿಕರು ಕಾಣೆಯಾದರು. ಆ ಪೈಕಿ ನೀನೂ ಒಬ್ಬ. ಅವರಲ್ಲನೇಕರು ಇಂದಿಗೂ ಪಾಕಿಸ್ತಾನದ ಜೈಲಿನಲ್ಲಿದ್ದಾರಂತೆ. ನೀನೂ ಅಲ್ಲೆ ಇರಬಹುದು. ನೀನು ನಮ್ಮನೆಯ ಸುಭಾಸಚಂದ್ರ ಭೋಸ ಇಂದ್ದಂಗ. ಅನುಮಾನಾಸ್ಪದ ರೀತಿಯಲ್ಲಿ ಸುಭಾಸರು ಕಣ್ಮರೆಯಾದ್ದಂಗೆ ನೀನೂ ಕಣ್ಮರೆ ಆಗಿರುವೆ. ಎಲ್ಲಿಯಾದರೂ ಸರಿ ನೀನು ಬದುಕಿರುವೆ ಅಂತ ನಮ್ಮೆಲ್ಲರ ಜೀವ ಹೇಳುತ್ತದೆ.

ಮೊನ್ನೆ ಕಾರ್ಗಿಲ್ ಕದನ ಸಮಯದಲ್ಲಿ ಭಾರತೀಯ ಸೈನಿಕರ ಸಾಹಸದ್ದೇ ಸುದ್ದಿ. ನಮಗ ನಿನ್ನ ನೆನಪು ಆಗ ಭಾಳ ಆತು. ಅವ್ವ ಅಂತೂ ಕಣ್ಣು ಒರೆಸಿಕೊಳ್ಳುವುದು ನಡದೇ ಇತ್ತು. ಪ್ರಜೆಗಳು, ಸಂಘ-ಸಂಸ್ಥೆಗಳು,

ರಾಜಕಾರಣಿಗಳು, ಸೈನಿಕರ ಸಾಹಸವನ್ನು ಕೊಂಡಾಡಿದರು.

ಕಿಟ್ಟಣ್ಣಾ, ಯುದ್ಧದಲ್ಲಿ ಮರಣ ಹೊಂದಬೇಕು, ಇಲ್ಲಾ ಗೆದ್ದು ಬರಬೇಕು. ಹಿಂಗ ಕಾಣೆಯಾದರ ನಯಾ ಪೈಸಾ ಕಿಮ್ಮತ್ತಿಲ್ಲ, ಅಂತ ಜನ ನಮಗ ಖಾತ್ರಿ ಮಾಡಿಸಿದರು. ಕಾಣೆಯಾದವರು ಯಾಕ ಕಾಣೆಯಾದರು? ಕಾಣೆಯಾಗಿ ಎಲ್ಲಿಗೆ ಹೋದರು? ಅದರ ಹಿಂದಿನ ರಹಸ್ಯ ಏನು? ಅನ್ನುವುದು ಯಾರಿಗೂ ಬ್ಯಾಡ. ಅವರ ಸಂಸಾರದ ಗತಿಯಂತೂ ನರಕ. ನಿತ್ಯ ನೆನೆಸಿಕೊಳ್ಳೋದು, ಅಳೋದು, ದಾರಿಕಾಯೋದು, ಇಷ್ಟೇ. ಇರಲಿ, ನೀನಿಲ್ಲದೂ, ಎಲ್ಲಾ ಇದ್ರು ನಾವು ಏಕಾಂಗಿಗಳೇನೋ ಅನ್ನುವ ಭಾವ ಸದಾ ನಮ್ಮಲ್ಲಿದೆ.

ಎಲ್ಲಿದ್ರೂ ಸುಖವಾಗಿರು. ನಿನ್ನ ತಮ್ಮ

ಜಕಾತಿ ಚಾಳ್, ಲೈನ್ ಬಜಾರ್, ಧಾರವಾಡ ಶೀನೂ



ಚಿಟ್ಟಿ



# ಕೈ ಸೇರದ ಫೋಟೊ

ಅಪರಿಚಿತ ಫೋಟೋಗ್ರಾಫರ್‌ಗೆ,

ನಿಮಗೆ ನೆನಪಿರಬಹುದು. ಬೆಂಗಳೂರಿನ ನ್ಯಾಶನಲ್ ಕಾಲೇಜಿನಲ್ಲಿ ಅದೊಂದು ವಾರಪತ್ರಿಕೆಯ ಹುಟ್ಟುಹಬ್ಬ. ನನ್ನ ಮೆಚ್ಚಿನ ಅಂಕಣಕಾರ, ಕಥೆಗಾರರೊಬ್ಬರು ಮುಖ್ಯ ಅತಿಥಿಗಳಾಗಿ ಬರುವವರಿದ್ದರು. ಅವರ ಜೊತೆ ಫೋಟೋ ತೆಗೆಸಿಕೊಳ್ಳಬೇಕೆಂಬ ನನ್ನ ಆಸೆಗೆ ನೀವೇ ಪ್ರೋತ್ಸಾಹಿಸಿದಿರಿ. ಫೋಟೋದ ಒಟ್ಟೂ ಹಣ ಪಡೆದಿರಿ. ಜೊತೆಗೆ ವಿಳಾಸವನ್ನೂ. ನಾ ಮೆಚ್ಚಿದ ಆ ಕಥೆಗಾರರು ಜನಜಂಗುಳಿಯಲ್ಲಿ ಒಂದೆಡೆ, ಹಸನ್ಮುಖಿಯಾಗಿ ಎಲ್ಲವನ್ನೂ ವೀಕ್ಷಿಸುತ್ತಾ ನಿಂತಿದ್ದರು. ಪರಿಚಯಿಸಿಕೊಂಡೆ. ಹಾರ್ದಿಕವಾಗಿ ಮಾತನಾಡಿಸಿದರು. ನನ್ನಾಸೆ ತಿಳಿಸಿದಾಗ ಆತ್ಮೀಯತೆಯಿಂದ ಹೆಗಲ ಮೇಲೆ ಕೈ ಹಾಕಿ ಒಂದು ಸ್ನ್ಯಾಪ್ ತೆಗೆಸಿಕೊಳ್ಳಲು ಸಹಕರಿಸಿದರು. ನನಗೋ ತುಂಬ ಸಂತಸ. ನೀವೂ ಸಹಕರಿಸಿದಿರಿ. ಫೋಟೋ ತಲುಪಿಸುತ್ತೇನೆಂದಿರಿ. ಅನುಮಾನವಾದರೆ ಫೋನ್ ನಂಬರ್ ತೆಗೆದುಕೊಳ್ಳಿ ಎಂದಿರಿ.

ಸರಿ, ದಿನಗಳು ವಾರವಾಗಿ, ತಿಂಗಳುಗಳಾದವು. ನೀವು ಕೊಟ್ಟ ನಂಬರಿಗೆ ಫೋನಿಸಿದೆ. ಅದು ಬರೀ ಗಂಟೆ ಹೊಡೆಯುತ್ತಿತ್ತು. ದಿನಕ್ಕೊಮ್ಮೆಯಂತೆ ತಿಂಗಳಿಡೀ ಪ್ರಯತ್ನಿಸಿದೆ. ಕೊನೆಗೆ ಆ ಫೋನು ಸತ್ತಿದೆ ಎಂದು ಗೊತ್ತಾಯಿತು. ಈಗ ಸಣ್ಣದೊಂದು ಆಸೆಯೊಡನೆ ಈ ದೋಣಿ ಬಿಡುತ್ತಿದ್ದೇನೆ. ಈಗಲಾದರೂ ನನ್ನ ಆಸೆ ನೆರವೇರಿಸಿ, ನನ್ನ ಮೆಚ್ಚಿನ ಕಥೆಗಾರರೊಡನೆ ಕಳೆದ ಆ ಐದು ನಿಮಿಷಗಳ ರಸಘಳಿಗೆ ನನ್ನೊಡನೆ ಸದಾ ಇರುವಂತೆ ಮಾಡಿ.

ನೀವು ಕಳಿಸುವ ಫೋಟೋ ನಿರೀಕ್ಷೆಯಲ್ಲಿ-

ಮಳಲಕೆರೆ ಬಸವರಾಜು

ಸಂತೇಬೆನ್ನೂರು

# ನಿನ್ನಿಂದ ಉತ್ತರ ಅಪೇಕ್ಷಿಸುವುದಿಲ್ಲ...

ಪ್ರಿಯತಮಾ,

ನಿನ್ನ ಸಹವಾಸವನ್ನು ಬಿಟ್ಟು 12 ವರ್ಷಗಳಾದ ನಂತರವೂ ನಿನ್ನನ್ನು 'ಪ್ರಿಯತಮಾ' ಎಂದೇ ಸಂಬೋಧಿಸುತ್ತಿದ್ದೇನೆ. ಹೌದು, ನೀನು ನನಗೆ ಮೋಸ ಮಾಡಿದ ನಂತರವೂ ನಿನಗಾಗಿ ನನ್ನಲ್ಲಿ ಪ್ರೀತಿ ತುಂಬಿದೆ. ಹಾಗೆಂದು, ಗಂಡು ಏನು ಮಾಡಿದರೂ ಕ್ಷಮಿಸಿ ಅವನನ್ನೇ ಹಿಂಬಾಲಿಸುವ 'ಆದರ್ಶ(?) ಪ್ರೇಮಿಯೂ ನಾನಲ್ಲ. ಆದರೂ, ನಿನ್ನೊಂದಿಗೆ ಕಳೆದ ಕೆಲವು ಕ್ಷಣಗಳು ಬಹಳ ಆಪ್ತವಾಗಿದ್ದವು. ಅವು ನನ್ನ ಬದುಕನ್ನು ಬದಲಾಯಿಸಿದವು. ಅವುಗಳನ್ನು ನಾನು ಮರೆತಿಲ್ಲ.

ನಿನ್ನಿಂದ ನಾನು ಉತ್ತರ ಅಪೇಕ್ಷಿಸುವುದಿಲ್ಲ ಎಂದು ಶೀರ್ಷಿಕೆಯಲ್ಲೇ ಹೇಳಿದ್ದೇನೆ. ಯಾಕೆಂದರೆ, ಉತ್ತರ ಬರೆಯುವ ನೈತಿಕ ಧೈರ್ಯ ನಿನಗೆ ಖಂಡಿತ ಇಲ್ಲ. ನನಗೆ ಗೊತ್ತು.

ಆಗ- ಸುಮಾರು 15 ವರ್ಷಗಳ ಹಿಂದೆ. ನಾನು ವಿಚ್ಛೇದನ ಹೊಂದಿದ ಒಂಟಿ ಉದ್ಯೋಗಿ ಹೆಣ್ಣು. ಎಲ್ಲೋ ಪರಿಚಯವಾದ ನೀನು ನನ್ನ ಹಿಂದೆ ಇದ್ದೆ. ನಾನು ಅನಿವಾರ್ಯವಾಗಿ ವಿಚ್ಛೇದನ ಹೊಂದಬೇಕಾದ ಪರಿಸ್ಥಿತಿ ಬಂದು, ಹಾಗೆ ಮಾಡಿದ್ದರೂ ಲೈಂಗಿಕ ಸ್ವೇಚ್ಛಾಚಾರವನ್ನು ಒಪ್ಪಿದವಳಲ್ಲ. ಅಷ್ಟೇ ಅಲ್ಲ, ಎರಡನೆಯ ಮದುವೆಯ ಬಗ್ಗೆಯೂ ಯೋಚಿಸಲಾರದಷ್ಟು ತಲ್ಲಣಗೊಂಡವಳಾಗಿದ್ದೆ. ಅಂತಹ ನನಗೆ ನೀನು ದುಂಬಾಲು ಬಿದ್ದೆ. ಪ್ರೀತಿ, ಪ್ರೇಮ, ಪುಸ್ತಕ, ಉಡುಗೊರೆ, ಊಟ, ಪಾರ್ಟಿ ಯಾವುದನ್ನೂ ಬಿಡದೆ, ನನಗಾಗಿ ಎಲ್ಲವನ್ನೂ ಮಾಡಿದೆ.

ನೆನಪಿದೆಯಾ ನಿನಗೆ? ನೀನು ನನಗಿಂತ ಮೂವತ್ತು ವರ್ಷ ಹಿರಿಯ. ನೀನು ವಿವಾಹಿತ. ನಿನಗೆ ಬೆಳೆದ ಮಕ್ಕಳಿದ್ದರು, ಅವರಿಗೆಲ್ಲ ಮದುವೆಯೂ ಆಗಿತ್ತು, ಮೊಮ್ಮಗುವೂ ಇತ್ತು. ಆದರೆ, ನೀನು ನನ್ನ ಹಿಂದೆ ಬಿದ್ದ ಪರಿ ಎಂತಹುದಿತ್ತು...?

ನೀನೊಮ್ಮೆ ನನ್ನನ್ನು ಯಾರೂ ಇಲ್ಲದಾಗ ನಿನ್ನ ಮನೆಗೆ ಕರೆದು, ನಿನ್ನ ಆಸೆಯನ್ನು ತೋಡಿಕೊಂಡಾಗ ನಾನು ಬೈದಿದ್ದೆ. ನಿನ್ನ ಹೆಂಡತಿಯ ನೆನಪು ಮಾಡಿಕೊಟ್ಟು, 'ಸಾಮಾಜಿಕ ಜವಾಬ್ದಾರಿಗಳಿರಬೇಕು' ಎಂದಿದ್ದೆ. ಆದರೆ ನೀನು ಬಿಡಲಿಲ್ಲ. ಮತ್ತೆ ಮತ್ತೆ ಫೋನ್ ಮಾಡಿದೆ.

ಇಷ್ಟೆಲ್ಲ ದೂರುಗಳನ್ನು ನಿನ್ನ ಬಗ್ಗೆ ಹೇಳುತ್ತಿದ್ದರೂ, ನೀನು ಕರೆದೆಡೆ ನಾನು ತಪ್ಪದೆ ಹಾಜರಾಗುತ್ತಿದ್ದೆ ಅಲ್ಲವೇ? ಯಾಕೆಂದು ಈಗ



ಹೇಳುತ್ತೇನೆ. ಲೈಂಗಿಕ ಸ್ವೇಚ್ಛಾಚಾರವನ್ನು ಇಷ್ಟಪಡದಿದ್ದರೂ, ನನಗೆ ಹೆಣ್ಣು-ಗಂಡುಗಳ ನಡುವೆ ಆರೋಗ್ಯಪೂರ್ಣ ಸಂಬಂಧಗಳಿರಬೇಕು ಅನ್ನಿಸುತ್ತಿತ್ತು... ಅದು ತಪ್ಪೆಂದು ಯಾವತ್ತೂ ಅನ್ನಿಸಿಲ್ಲ. ಅಷ್ಟೇ ಅಲ್ಲ, ಗಂಡಸರೊಂದಿಗೆ ಹರಟೆ ಹೊಡೆಯುವುದು ನನಗಿಷ್ಟವಾಗಿತ್ತು.

ಇದಿಷ್ಟೇ ಅಲ್ಲ, ನೀನು ಸಾರ್ವಜನಿಕವಾಗಿ ಅತ್ಯಂತ ಪ್ರತಿಷ್ಠಿತ ವ್ಯಕ್ತಿಯಾಗಿದ್ದೆ. ನಿನ್ನನ್ನು ನೋಡಲು ಜನ ಕ್ಯೂ ನಿಲ್ಲುತ್ತಿದ್ದರು. ಆದರೆ, ನೀನು ಮಾತ್ರ ಇನ್ನಿಲ್ಲದಂತೆ ನನ್ನ ಹಿಂದೆ ಬಿದ್ದಿದ್ದೆ.

ಕೊನೆಗೂ ನಾನು ಸೋತೆ. ಸಂಪೂರ್ಣ ಸಮರ್ಪಣಭಾವದಿಂದ ಬಾಳಿದ ಮದುವೆಯನ್ನೇ ಮುರಿದ ನನ್ನ ಗಂಡ ಕೊಟ್ಟ ನೋವನ್ನು, ನಿನ್ನ ಸಂಗದಲ್ಲಿ ಯಾಕೆ ಮರೆಯಬಾರದು? ತಪ್ಪೇನು? ಎಂದೆನ್ನಿಸಿತು. ನಿನ್ನ ಜೊತೆ ಊರೂರು ಸುತ್ತಿದೆ, ಲೆಕ್ಕವಿಲ್ಲದಷ್ಟು ಪಾರ್ಟಿಗಳಿಗೆ ಹೋದೆ, ನೀನು ಕರೆದಲ್ಲೆಲ್ಲಾ ನಾನು... ಈಗಲೂ ನನಗನ್ನಿಸುತ್ತದೆ... ನೀನು ಅತ್ಯಂತ ತಜ್ಞಪ್ರೇಮಿ.

ಹೀಗೇ, ಒಂದೆರಡು ವರುಷಗಳೇ ಕಳೆದವು. ನೀನು ನನ್ನ ಜೀವನದ ಅವಿಭಾಜ್ಯ ಅಂಗವಾಗಿದ್ದೆ. ಈಗ ನನಗೆ ಪ್ರೇಮಿಗಳ ಗುಪ್ತಭೇಟಿಗಳು ಬೇಸರವೆನ್ನಿಸತೊಡಗಿದವು. ನಿನ್ನೊಂದಿಗೆ ಒಟ್ಟಿಗೆ ಬಾಳಬೇಕೆಂದೆನ್ನಿಸಿತ್ತು. ಸಾರ್ವಜನಿಕ ಜೀವನದಲ್ಲಿರುವ ನಿನಗೆ ಎರಡನೆಯ ಮದುವೆ ಕಾನೂನುಬಾಹಿರ ಎಂದೆಲ್ಲ ನೀನು ಭಾಷಣಕೊಟ್ಟೆ. 'ಹಾಗಾದರೆ ಒಂದೇ ಮನೆಯಲ್ಲಿರೋಣ' ಎಂದೆ. ಅದಕ್ಕೂ ನೀನು ಮನಸ್ಸು ಮಾಡಲಿಲ್ಲ. ಅಂದಿನಿಂದ ನೀನು ನನ್ನನ್ನು ದೂರ ಮಾಡುತ್ತಾ ಬಂದೆಯೇನೋ. ಎಂಬ ನನ್ನ ಅನುಮಾನಕ್ಕೆ ಅಂದೂ ನೀನು ಉತ್ತರ ಕೊಟ್ಟಿಲ್ಲ, ಇಂದೂ ಕೊಡುವುದಿಲ್ಲ ಎಂದು ನನಗೆ ಗೊತ್ತಿದೆ.

ನಾನು ನಿನಗೆ ಸೋತಾಗ ನಾನೊಂದು ದಿಟ್ಟ ಹೆಜ್ಜೆಯನ್ನು ಹಾಕಿದ್ದೆ. ಯಾಕೆಂದರೆ, ಆಗಲೇ ನೀನೊಬ್ಬ ವುಮನೈಸರ್ ಎಂಬುದನ್ನು ನನಗೆಲ್ಲರೂ ಹೇಳಿದ್ದರು. ಆದರೆ ನೀನು ಎಡೆಬಿಡದೆ ನನ್ನ ಹಿಂದೆ ಬಿದ್ದದ್ದು ಮತ್ತು ನಾನು ನಂಬಿಕೊಂಡಿದ್ದವರ ಹಿಪೋಕ್ರಸಿ ಎಲ್ಲವೂ ನನ್ನನ್ನು ದಿಕ್ಕೆಡಿಸಿದ್ದವು. ನಿನ್ನ ಪ್ರೀತಿ ನನಗೆ ಅತ್ಯಂತ ಬೆಲೆಯುಳ್ಳದ್ದಾಗಿತ್ತು. ಅದಕ್ಕಾಗಿ ಇಡೀ ಪ್ರಪಂಚವನ್ನೇ ಧಿಕ್ಕರಿಸಿ ನಿಲ್ಲುವ ಧೈರ್ಯವನ್ನು ನಾನು ಮಾಡಿದ್ದೆ.

ಆದರೆ, ಅದೇ ಹೊತ್ತಿನಲ್ಲಿ... ನೀನು ಇನ್ನೊಬ್ಬ ಹೆಣ್ಣಿನೊಡನೆ ಸಲುಗೆಯಿಂದ ಓಡಾಡುತ್ತಿರುವ ಸುದ್ದಿ ನನ್ನ ಕಿವಿಗೆ ಬಿದ್ದಿತ್ತು. ಅವಳೂ ನಾನೇ ನಿನಗೆ ಪರಿಚಯಿಸಿದ ನನ್ನ ಸ್ನೇಹಿತೆ. ಅವಳು ಒಮ್ಮೆ ಖುಷಿಯಿಂದ ನನ್ನೊಂದಿಗೆ ಆ ವಿಚಾರ ಹೇಳಿದಳು. ಖುಷಿ ಏಕೆಂದರೆ, ನೀನು ಸಾರ್ವಜನಿಕ ಜೀವನದಲ್ಲಿ ಒಬ್ಬ ಸ್ಟಾರ್. ಇದರಿಂದ ನನ್ನ ಹೃದಯ ಒಡೆಯಿತು. ಮುಂದಿನ ಕೆಲವು ವರ್ಷ ಮಾನಸಿಕ ತೊಳಲಾಟದಲ್ಲಿ ಬಳಲಿದೆ. ಗಂಡಸರ ಬಗ್ಗೆ ನಂಬಿಕೆಯನ್ನೇ ಇಟ್ಟುಕೊಳ್ಳಬಾರದೆಂಬ ಭಾವ ಆಕ್ರಮಿಸಿತು.

ಇದೆಲ್ಲ ನಡೆದದ್ದು 12 ವರ್ಷಗಳ ಹಿಂದೆ. ಈಗ ನಿನ್ನ ದಾರಿ ನಿನಗೆ, ನನ್ನ ದಾರಿ ನನಗೆ. ನಿನ್ನ ಪ್ರೇಮ, ನೀ ಕೊಟ್ಟ ನೋವು ಎರಡೂ ಮರೆತಿಲ್ಲ.

■

**ಎಸ್. ಮಾಲತಿ**

ಸಾಗರ



# ಗಂಗಾ ಪಾದೇಕಲ್

# ಪರಿಮಾರ್ಜನೆ

ಜಾವಡಿಯಲ್ಲಿ ಕೂತು ಹೂಬತ್ತಿ ಹೊಸೆಯುತ್ತಿದ್ದ ಪಾರ್ತಮ್ಮ ತುಸು ಆತಂಕದಿಂದಲೇ ಹೇಳಿಕೊಂಡರು, 'ಅಲ್ಲ, ಬೆಳಗ್ಗೆಯೆ ಹೋಗಿದ್ದಾರೆ, ಸಂಜೆಯಾದರೂ ಬಂದಿಲ್ಲವೆಂದರೆ ಏನರ್ಥ? ಅರವಿಂದನೂ ಅಷ್ಟೆ, ತಿಂಗಳಿಗೆರಡು ಸಲ ಮನೆಗೆ ಬಂದೇ ಸಿದ್ಧ. ಈ ಸಲ ಹಾಗಾಗಿಲ್ಲವೆಂದೇ ಇವರು ಹೋಗಿದ್ದಲ್ಲವೆ? ಒಂದು ವೇಳೆ ಗೌರಿಗೆ ಹುಷಾರಿಲ್ಲವೋ? ಅಂದರೆ ಬಯಕೆ, ಗಿಯಕೆ', ಹುಷಾರಿರದೇ ಇದ್ದರೂ ಅದೂ ಸಿಹಿ ಸುದ್ದಿಗೇ ಆಗಿರಲಿ ಎಂದುಕೊಳ್ಳುತ್ತ, ಆ ವೇಳೆಗೆ ಬತ್ತಿಯ ಕೆಲಸವೆಲ್ಲ ಪೂರೈಸಿದ್ದರಿಂದ, ಎದ್ದು ನಿಂತರಾಕೆ. ಹಾಗೆ ಎದ್ದು ಇನ್ನೇನು ಒಳಗೆ ಹೋಗಬೇಕು, ಆಗ ಗೇಟಿನ ಸದ್ದು ಕೇಳಿಸಿತಾಗಿ, ನೋಡಿದರೆ ಅನಂತಯ್ಯ.

'ಸದ್ಯ ಬಂದಿರಲ್ಲ, ಏನಪ್ಪ ಇಷ್ಟು ಹೊತ್ತೂ ಬರಲಿಲ್ಲ ಎಂದುಕೊಳ್ಳುತ್ತಿದ್ದೆ', ಮೆಲ್ಲಗೆ ಉದ್ಗರಿಸುತ್ತಲೆ ಸ್ವಾಗತಿಸಿದ ಪಾರ್ತಮ್ಮ, ಆಮೇಲೆ ನೇರ ಅಡಿಗೆಕೋಣೆಗೆ ನಡೆದರು. ಕ್ಷಣಗಳಲ್ಲಿ ಒಲೆ ಹತ್ತಿಸಿ, ಅಷ್ಟು ಕೊತ್ತಂಬರಿ ಕಷಾಯ ಮಾಡಿ ಅದಕ್ಕೆ ಹಾಲು, ಸಕ್ಕರೆ ಬೆರೆಸಿ, ದೊಡ್ಡ ಹಿತ್ತಾಳೆ ಗಿಂಡಿಯಲ್ಲಿ ತುಂಬಿಸಿಕೊಂಡು ಆಕೆ ಮತ್ತೆ ಜಾವಡಿಗೆ ಬಂದಾಗ, ಅನಂತಯ್ಯ ಕೈಕಾಲೂ ತೊಳೆಯದೆ ಪೇಟೆಯ ಅದೇ ದಿರುಸಿನಲ್ಲಿಯೇ ಕೂತಿದ್ದು ಕಾಣಿಸಿ ಅಚ್ಚರಿಯಾಯಿತು. ಜತೆಗೇ ತುಸು ಭಯಕೂಡ. 'ಯಾಕೆ ಹೀಗಿದ್ದಾರೆ? ಏನು ಸಂಗತಿ?' ಮನಸ್ಸಿನೊಳಗೆ ಮೂಡಿದ ಪ್ರಶ್ನೆಯನ್ನು ಮಾತಾಗಿಸದೆ, ಗಂಡ ಕೂತಿದ್ದ ಆರಾಮಕುರ್ಚಿ ಬದಿಗಿನ ಮೇಜಿನ ಮೇಲೆ ಗಿಂಡಿಯನ್ನಿಟ್ಟು ಆಕೆ ಮೆಲ್ಲಗೆ ಹೇಳಿದರು, 'ಆಸರು ತೆಗೆದುಕೊಳ್ಳಿ.' ಅನಂತಯ್ಯ ಅದಕ್ಕೆ ಯಾವ ರೀತಿಯಿಂದಲೂ ಪ್ರತಿಕ್ರಿಯಿಸದೆ ಸುಮ್ಮಗೇ ಇದ್ದಾಗ ಈಕೆಗೆ ಇನ್ನೂ ಕಳವಳವಾಯಿತು. ಆದರೆ ಆ ಬಗ್ಗೆ ಏನೊಂದೂ ಕೇಳದೆ ಅಲ್ಲಿಯೆ ಸನಿಹದಲ್ಲಿ ಗೋಡೆಗೊರಗಿ ಕೂತರಾಕೆ. ಪತ್ನಿಯ ಈ ವಿಧಾನ ಅನಂತಯ್ಯನವರಿಗೆ ಯಾವತ್ತೂ ಅಚ್ಚುಮೆಚ್ಚು. 'ಸಂಬಂಧಗಳು ಎಷ್ಟೇ ಹತ್ತಿರದ್ದೇ ಆಗಿರಲಿ, ಪ್ರತಿಯೊಬ್ಬನಿಗೂ ಅವನದೇ ಆದ ಖಾಸಗೀ ವಲಯವಿರುತ್ತದೆ, ಎಲ್ಲವನ್ನೂ ಎಲ್ಲರೊಂದಿಗೆ ಹೇಳಿಕೊಳ್ಳಲೇಬೇಕೆಂದಿಲ್ಲ' ಎಂಬ ಆಕೆಯ ನಿಲುವನ್ನು ಯಾವತ್ತೂ ಅಭಿಮಾನಿಸುತ್ತಿದ್ದ ಅನಂತಯ್ಯ, ಇಂದು

ಶ್ರೀಪಾದ್

ಮಾತ್ರ ಸ್ವಲ್ಪ ಮುಜುಗರಕ್ಕೊಳಗಾಗಿದ್ದರು. ಜತೆಗೇ ತುಸು ಸಿಟ್ಟೂ, ಮೊದಲ ಸಲ ಪತ್ನಿಯ ಮೇಲೆ ಬಂದಿತ್ತು. 'ವಿಷಯವೇನೆಂದು ಕೇಳಬಾರದೆ ಇವಳು?' ಒಳಗೇ ಹಾಗೆಂದುಕೊಂಡರೂ, ತಾವಾಗಿ ಬಾಯ್ತೆರೆಯದೆ ಅವಳೇನೂ ಕೇಳುವುದಿಲ್ಲ ಎಂಬ ಅರಿವೂ ಇದ್ದುದರಿಂದ ನಿಧಾನವಾಗಿ ನುಡಿದರು.



'ಪದ್ಮ ಮತ್ತೆ ಬಂದಿದ್ದಾಳೆ.' ಹಾಗೆಂದು ಪಾರ್ತಿಯ ಮೋರೆ ನೋಡಿದರೆ, ಕಳವಳ ದಿಗ್ಭ್ರಮೆಗಳು ಅಲ್ಲಿ ಸ್ಪಷ್ಟವಾಗಿ ಗೋಚರಿಸಿದುವಲ್ಲದೇ, ಆಕೆಯ ಆತಂಕ ಮಾತಿನಲ್ಲಿಯೂ ಹೊರಗೆ ಬಿತ್ತು. 'ಓ, ಹೌದೆ? ನಿಮಗೆ ಹೇಗೆ ಗೊತ್ತು? ಸಿಕ್ಕಿದ್ದಳೆ ಅಲ್ಲಿ?' ಆ ಪ್ರಶ್ನೆ ಕೇಳುತ್ತಿದ್ದಂತೆ ತಟ್ಟನೆ ಏನೋ ಹೊಳೆದು ಮತ್ತೆ ಉದ್ಗರಿಸಿದರಾಕೆ, 'ಆ ಶನಿ ಮತ್ತೆ ವಕ್ರಿಸಬೇಕೆ? ಹಾಗಾಗಿಯೇ ಅರವಿಂದ ಈ ಕಡೆಗೆ ಬರದಿದ್ದುದ್ದೋ?' ಅನಂತಯ್ಯ ಅರ್ಧ ಸ್ವಗತ, ಅರ್ಧ ಪ್ರಶ್ನೆಯಂತಿದ್ದ ಆ ಮಾತಿಗೆ ನೇರವಾಗಿ ಉತ್ತರಿಸದೆ ಬಳಸಾಗಿ ವಿಷಯ ವಿವರಿಸಿದರು.

'ತಿಂಗಳು ದಾಟಿತಂತೆ ಬಂದು. ಬಂದವಳು ನೆಪಕ್ಕೆ ಎಲ್ಲೋ ಬಾದರಾಯಣ ಸಂಬಂಧಿಗಳಲ್ಲಿ ಉಳಿದುಕೊಂಡು, ವಾರಕ್ಕೆ ನಾಲ್ಕು ಸಲ ಅರವಿಂದನಲ್ಲಿಗೆ ಬಂದು ಹೋಗುತ್ತಿರುತ್ತಾಳಂತೆ. ಹಾಗೆಂದು ನನಗೇನೂ ಕಾಣಲು ಸಿಗಲಿಲ್ಲ. ಎಲ್ಲವನ್ನೂ ಗೌರಿಯೆ ಹೇಳಿದಳು. ಅಂದ ಹಾಗೆ ಇವತ್ತು ಅರವಿಂದನೂ ಇರಲಿಲ್ಲ. ಆಫೀಸಿನ ಕೆಲಸಕ್ಕೆಂದು ನಗರಕ್ಕೆ ಹೋಗಿದ್ದಾನಂತೆ.' ಅಷ್ಟು ಹೇಳಿದ ಅನಂತಯ್ಯ ಎದ್ದು, ಉಡುಪು ಕಳಚಿ ಗೂಟಕ್ಕೆ ಕೀಲಿಸಿ, ನಿತ್ಯದ ಲುಂಗಿ ಉಟ್ಟು ಬಚ್ಚಲಿಗೆ ಹೋದರು. ಅಲ್ಲಿ ಕೈಕಾಲು, ಮೋರೆ ತೊಳೆದು, ಲುಂಗಿಯಿಂದಲೆ ಒರೆಸಿಕೊಳ್ಳುತ್ತ ಮರಳಿದವರಿಗೆ ಕಂಡದ್ದು ಕಂದಿದ ಮೋರೆಯ ಮಡದಿ. ಇವರನ್ನು ಕಾಣುತ್ತಲೂ ಆಕೆಯಿಂದ ನೋವಿನ ದನಿ ಹೊರಗೆ ಬಿತ್ತು.

'ಖಂಡಿತ ಇದೇನೂ ಒಳ್ಳೆಯ ಲಕ್ಷಣವಲ್ಲ. ಅಲ್ಲ, ಅರವಿಂದನಿಗಾದರೂ ಸ್ವಲ್ಪ ಸೊಯ ಬೇಡವೆ? ಆವತ್ತು ಅವನನ್ನು ಅಷ್ಟೆಲ್ಲ ಅಪಮಾನಿಸಿ ಯಾವ ಗತ್ತಿನಿಂದ ಹೊರಟೇಹೋಗಿದ್ದಳು? ಅಂಥವಳು ಮತ್ತೆ ಬಂದಾಗ ಸ್ವಾಗತಿಸುವುದುಂಟೆ? ಚೆನ್ನಾಗಿ ಚಪ್ಪಲಿ ಪೂಜೆ ಮಾಡಿ ಕಳಿಸಬೇಕಿತ್ತು. ಅದು ಬಿಟ್ಟು...' ವ್ಯಥೆ, ರೋಷಗಳೆರಡನ್ನೂ ಅನುಭವಿಸುತ್ತ ಹಾಗೆಂದ ಪತ್ನಿಯನ್ನ ಅನುಕಂಪದಿಂದ ದಿಟ್ಟಿಸಿದ ಅನಂತಯ್ಯ, ನಿಟ್ಟುಸಿರೊಂದನ್ನು ಹೊರದಬ್ಬಿ ತುಟಿ ತೆರೆದರು. 'ನೀನಂದಿದ್ದು ನಿಜವೆ ಪಾರ್ತಿ. ಆದರೆ ಪದ್ಮ ಅರವಿಂದನ ಬದುಕಿನಲ್ಲಿ ಮೊದಲಿಗೆ ಪ್ರವೇಶಿಸಿದ ಹೆಣ್ಣು. ಅವನು ಮನಸಾರೆ ಪ್ರೀತಿಸಿದ ಹುಡುಗಿ. ಅದರಲ್ಲಿಯೂ ಅರವಿಂದ ನಮ್ಮ ಮಗ. ಕಣ್ಣಲ್ಲಿ ರಕ್ತ ಇಲ್ಲದವರಲ್ಲವಲ್ಲ ನಾವಿಬ್ಬರೂ? ಬಹುಶಃ ಈ ಎಲ್ಲ ಕಾರಣಗಳಿಂದಲೇ ಅವಳ ಪ್ರವೇಶವನ್ನು ನಿರಾಕರಿಸಿಲ್ಲ ಅವನು. ಆದರೆ ಇದರ ನೇರ ಪರಿಣಾಮವಾಗಿದ್ದು, ಆಗಲಿರುವುದು ಗೌರಿಯ ಮೇಲೆ ಎನ್ನುವುದೇ ಸಂಕಟದ ಸಂಗತಿ. ಪಾಪದ ಹುಡುಗಿ, ಕಂಗಾಲಾಗಿಬಿಟ್ಟಿದ್ದಾಳೆ.'

'ಅಂದರೆ? ನೀವು ಹೇಳಿದ್ದರ ಅರ್ಥವೇನು? ಗೌರಿ, ಗೌರಿಗೇನಾಗಿದೆ? ಏನಂದಳು ಆಕೆ?' ತೀರ ಕಾತರರಾಗಿ ಪಾರ್ತಮ್ಮ ಪ್ರಶ್ನಿಸಿದಾಗ ಆಸರು ಕುಡಿಯಲಾರಂಭಿಸಿದ್ದ ಅನಂತಯ್ಯ, ಅದನ್ನೆಲ್ಲ ಒಂದೇ

ಗುಟುಕಿಗೆ ಹೀರಿ, ಅನಂತರ ವಿವರಿಸಿದರು. 'ಪದ್ಮ, ಗೌರಿಯರ ಸ್ವಭಾವಗಳ ಅಂತರ ತಿಳಿದದ್ದೇ. ಒಬ್ಬಳು ಸ್ವಾರ್ಥದ ಮೊಟ್ಟೆಯಾದರೆ ಇನ್ನೊಬ್ಬಳು ಸಹನೆಯ ಕಡಲು. ಮೊದಲ ಸಲ ಬಂದಾಗ ಪದ್ಮ ಅವಳಿಂದ ತಪ್ಪಾಯಿತೆಂದೂ, ಕ್ಷಮಿಸಬೇಕೆಂದೂ ಗೋಳಾಡಿದ್ದಳಂತೆ. ಅವಳಸಗಿದ ತಪ್ಪಿಗೆ ಯಾವುದೇ ಶಿಕ್ಷೆ ಕೊಟ್ಟರೂ ಸರಿ ಎಂದೂ, ಆದರೆ ವಾರಕ್ಕೊಮ್ಮೆಯಾದರೂ ಮನೆಗೆ ಬಂದು ಅರವಿಂದನ ಮೋರೆ ನೋಡಿ ಹೋಗುವ ಸೌಭಾಗ್ಯವನ್ನು ಅವಳಿಂದ ಕಸಿದುಕೊಳ್ಳಬಾರದೆಂದೂ ಬೇಡಿಕೊಂಡಳಂತೆ. ಸರಿ, ಅರವಿಂದ ಒಪ್ಪಿಯೇ ಬಿಟ್ಟ. ಅವನೇ ಹುಂಗುಟ್ಟಿದ ಮೇಲೆ ತನ್ನದೇನೆಂದು ಗೌರಿಯೂ ಸುಮ್ಮಗೇ ಇದ್ದಳಂತೆ' ಹೇಳುತ್ತ ಅನಂತಯ್ಯ ಕ್ಷಣ ನಿಲ್ಲಿದಾಗ ಪಾರ್ತಮ್ಮ ಉದ್ಗರಿಸಿಯೇ ಬಿಟ್ಟರು, 'ಅದೊಂದು ಮಂಕು. ಹೋಗಲಿ, ಇಲ್ಲಿಗಾದರೂ ಬಂದು ಹೇಳಬಹುದಿತ್ತಲ್ಲ?' 'ನಾನೂ ಅದನ್ನೇ ಹೇಳಿದೆ. ಆ ವಿಚಾರ ತೋಚಲಿಲ್ಲವೆಂದು ಹೇಳಿ ಅತ್ತಳು. ಈಗೇನಾಗಿದೆ ಎಂದರೆ ಕಳೆದ ಸಲ ಬಂದಾಗ ಪದ್ಮ ಎರಡು ದಿನ ಅಲ್ಲಿಯೇ ಇದ್ದಳಂತೆ. ಅವಳು ಹೋದ ಮೇಲೆ ಅರವಿಂದ, ಗೌರಿಯ ಹತ್ತಿರ, 'ಆಗಿದ್ದು ಆಗಿ ಹೋಯಿತು. ಇನ್ನೂ ಹೀಗೆಯೆ ಇರುವುದು ಚೆನ್ನಾಗಿರುವುದಿಲ್ಲ. ನೀನು ನಿನ್ನ ತವರಿಗೆ ಹೋಗಿ ಬಿಡು' ಎನ್ನಲು ಶುರುಮಾಡಿದ್ದಾನಂತೆ'

'ಇನ್ನೂ ಹೀಗೆಯೆ ಇರುವುದು ಎಂದರೇನರ್ಥ? ಇಷ್ಟಕ್ಕೂ ಇಂತಹ ಪರಿಸ್ಥಿತಿ ಬಂದದ್ದಾದರೂ ಯಾರಿಂದ? ಅವನು ಹೇಳಿದರೆ ಹೇಳಲಿ ಎಂದು ನೀವು ಅವಳಿಗೆ ಧೈರ್ಯ ತುಂಬ ಬೇಕಿತ್ತು. ಬಾ ಎಂದಾಗ ಬಂದು, ಬೇಡವೆಂದಾಗ ಹೋಗಲು ಇದೇನು ಮಕ್ಕಳಾಟವೆ?'

'ಅರಿತೋ ಅರಿಯದೆಯೋ ಇದೆಲ್ಲವೂ ಮಕ್ಕಳಾಟವೇ ಆಗಿದ್ದು ಸುಳ್ಳಲ್ಲ ಪಾರ್ತಿ', ಆವೇಶದಿಂದ ನುಡಿದ ಪತ್ನಿಗೆ ವ್ಯಥೆಯಿಂದ ಉತ್ತರಿಸಿದ ಅನಂತಯ್ಯ ಅನಂತರ ಮುಂದುವರೆಸಿದರು. 'ಪದ್ಮ ಅರವಿಂದನನ್ನ ಬಿಟ್ಟು ಯಾರ ಜತೆಗೋ ಹೋದ ತರುಣದಲ್ಲಿ ಅವನು ಕೆಲವು ದಿನ ಅವಮಾನದಿಂದ ಮೂಲೆ ಸೇರಿದರೂ ಮತ್ತೆ ಚೇತರಿಸಿಕೊಂಡ. ಆ ವೇಳೆಗೆ ಯಾರೋ ಇನ್ನೊಂದು ಮದುವೆ ಬಗ್ಗೆ ಅವನ ಕಿವಿ ತುಂಬಿದರು. ಸರಿ, ಹೆಣ್ಣಾದ ಅವಳೇ ಗಂಡನನ್ನು ಬಿಟ್ಟು ಇನ್ನೊಬ್ಬನೊಂದಿಗೆ ಹೋದ ಮೇಲೆ ಗಂಡಾದ ನನಗೇನಂತೆ ಬಿಸಾಕು? ಎಂದೆಲ್ಲ ಅರವಿಂದ ಹಾರಾಡಿದ್ದಕ್ಕೆ ನಾವೂ ಕುಮ್ಮಕ್ಕು ನೀಡಿದೆವು. ಜತೆಗೇ ಹೆಣ್ಣನ್ನೂ ಹುಡುಕಿ, ಗೌರಿಯನ್ನು ಸರಳವಾಗಿ ಮನೆ ತುಂಬಿಸಿಕೊಂಡೆವು. ಆಗ ನಮಗಿದ್ದ ಮನಃಸ್ಥಿತಿಯಲ್ಲಿ ಪದ್ಮಳಿಗೂ, ಅರವಿಂದನಿಗೂ ವಿಚ್ಛೇದನವಾಗಿಲ್ಲ ಎಂಬ ಮಹತ್ವದ ಅಂಶವನ್ನೇ ಮರೆತೆವು. ಗೌರಿಗೆ ಸರಿಯಾದ ದಾತಾರರು ಇರುತ್ತಿದ್ದಲ್ಲಿ ಅವರಾದರೂ ಆ ಬಗ್ಗೆ ಕೇಳುತ್ತಿದ್ದರೇನೋ. ಆದರವಳು ತಂದೆ ತಾಯಿ ಇಲ್ಲದ ಬಡಪಾಯಿ. ಇನ್ನು ಅಣ್ಣಂದಿರೇಕೆ ಅದನ್ನೆಲ್ಲ ವಿಚಾರಿಸುತ್ತಾರೆ? ಅಂತೂ ಈ ಎಲ್ಲದರಿಂದಾಗಿ ಗೌರಿಯ ವಿವಾಹಕ್ಕೆ ಕಾನೂನಿನ ಬೆಂಬಲವಿಲ್ಲದ್ದಂತೂ ಸತ್ಯ. ಗೌರಿಗೆ ನನ್ನಿಂದಾದಷ್ಟು ಸಮಾಧಾನ, ಧೈರ್ಯ ಹೇಳಿ ಬಂದಿದ್ದೇನಾದರೂ ಮುಂದೆ ಏನಾಗುವುದೋ ಎಂಬ ಆತಂಕದಿಂದ ಒಂದೂ ತಲೆಗೇ ಹೋಗುತ್ತಿಲ್ಲ ಪಾರ್ತಿ', ಪತಿ ತೀರ ವಿವಶರಾಗಿ ಹಾಗೆಂದಾಗ ಪಾರ್ತಮ್ಮನವರಿಗೂ ಕಳವಳವಾದರೂ, ಅದನ್ನಲ್ಲಿಗೇ ಅಣಗಿಸಲು ಪ್ರಯತ್ನಿಸುತ್ತ ಸಂತೈಕೆಯ ದನಿ ಎತ್ತಿದರಾಕೆ. 'ಯಾಕಷ್ಟು ಯೋಚಿಸುತ್ತೀರಿ? ನಾಳೆ ಮತ್ತೆ ಅಲ್ಲಿಗೆ ಹೋಗಿ ಅರವಿಂದನಿಗೆ ಚೆನ್ನಾಗಿ ಬುದ್ಧಿ ಹೇಳಿ. ಆ ಮೇಲೆ ಅವನನ್ನೂ ಕರೆದುಕೊಂಡು ಹೋಗಿ ಲಾಯರನ್ನೂ ಭೇಟಿ ಮಾಡಿ. ಅವರೇನಾದರೂ ಪರಿಹಾರ ಕೊಡಿಸಿಯಾರು ಅಲ್ಲವೆ?'

'ಪರಿಹಾರವೆಂದರೆ ವಿಚ್ಛೇದನವೆ. ಮತ್ತೆ ಅರವಿಂದನನ್ನು ಹುಡುಕಿಕೊಂಡು ಬಂದ ಪದ್ಮಳೆ ಅದಕ್ಕೆ ಒಪ್ಪುವವಳು? ಒಟ್ಟಿನಲ್ಲಿ ಗೌರಿಗೆ ಅನ್ಯಾಯವಾಯಿತು ಪಾರ್ತೀ.' ಪತ್ನಿಯ ಸಲಹೆಗೆ ಉತ್ತರವಾಗಿ ಆ ಮಾತುಗಳು ಮನಸ್ಸಿನೊಳಗೆ ತಕ್ಷಣವೆ ಹೊಳೆದರೂ ಅನಂತಯ್ಯ ಅದನ್ನಾಡದೆ ನುಂಗಿಕೊಂಡು ಎದ್ದು ಹೇಳಿದರು.

'ಅದು ನಾಳೆಗಲ್ಲವೆ? ಈಗಂತೂ ಒಮ್ಮೆ ತೋಟಕ್ಕೆ ಹೋಗಿ ಬರುತ್ತೇನೆ'

ಅವರತ್ತ ಹೋದ ಮೇಲೆ ಪಾರ್ತಮ್ಮನೂ ಎದ್ದು ಹಟ್ಟಿಗೆ ಹೋಗಿ, ಬೈಪಣೆಯಲ್ಲಿ ಬೈಹುಲ್ಲು ಹರಿವಿದರು. ಅದಾದ ಮೇಲೆ ರಾತ್ರೆಯಡುಗೆ ಚಿಂತೆ. ಮಧ್ಯಾಹ್ನ ಹೇಗೂ ಪತಿ ಇಲ್ಲವೆಂದು ಬರೀ ಗಂಜಿ ಮಾಡಿಟ್ಟು ತುಂಬ ದಿನಗಳಿಂದ ನೆನಸಿಕೊಂಡಿದ್ದ ಅಂಗಳಕ್ಕೆ ಸಗಣಿ ಉಡುಗುವ ಕೆಲಸದಲ್ಲಿ ತೊಡಗಿಕೊಂಡಿದ್ದರು. ಹಾಗೆಂದೇ ಈಗ ಏನಾದರೊಂದು ಮೇಲೋಗರ ಮಾಡಲೇ ಬೇಕಿತ್ತಾಗಿ ತರಕಾರಿ ಬುಟ್ಟಿ ಮುಂದಿಟ್ಟುಕೊಂಡು ಈಳಿಗೆಮಣೆ ಮೇಲೆ ಕೂತವರ ಮನಸ್ಸಿನೊಳಗಿದ್ದುದು ಅರವಿಂದನ ರೀತಿ, ನೀತಿಗಳೂ, ತಮ್ಮ ಅಸಹಾಯಕತೆಯೂ.

'ಛೇ, ತಮ್ಮದೆಂತಹ ಪರಿಸ್ಥಿತಿ? ಇರುವುದೇ ಒಬ್ಬ ಮಗ. ಅವನು ಚೆಂದಕ್ಕೆ ಬಾಳುವುದನ್ನು ನೋಡುವುದು ತಮಗೆ ಬಗೆದಿಲ್ಲವೋ? ಹೇಗಾಯಿತಿದೆಲ್ಲ? ಬಹುಶಃ ಮೂರು ಬಸಿರನ್ನು ನೀಗಿಕೊಂಡ ಮೇಲೆ ಉಳಿದ ಒಂದೇ ಕುಡಿ ಎಂದು ಮುದ್ದು ಮಾಡಿ ಬೆಳೆಸಿದ್ದೇ ಜಾಸ್ತಿಯಾಯಿತೋ? ಯಾವಾಗ ನೋಡಲಿ ಅವನು ಹೇಳಿದ್ದೇ ಆಗಬೇಕು. ಆ ಕೆಟ್ಟ ಹಟ ಬಿಟ್ಟರೆ ಉಳಿದಂತೆ ಬುದ್ಧಿವಂತನೇ. ಹಾಗೆಂದೇ ಅಲ್ಲವೆ ಪದವಿ ಮುಗಿಸಿದೊಡನೆ ಪೇಟೆಯಲ್ಲಿ ಸರಕಾರಿ ಚಾಕರಿ ಸಿಕ್ಕಿದ್ದು? ಕೆಲಸವಾದ ಮೇಲೆ ಪದ್ಮಳೊಂದಿಗೆ ಲಗ್ನ. ನಿಜವೆಂದರೆ ಅವಳನ್ನು ಸೊಸೆಯಾಗಿ ತರಲು ತಮಗಿಬ್ಬರಿಗೂ ಮನಸ್ಸೇ ಇರಲಿಲ್ಲ. ಕಾರಣ, ಅವಳಮ್ಮನ ಹೆಸರಿಗೆ ಬಹುಮೊದಲೇ ಅಂಟಿದ್ದ ಕಲಂಕ. ಆ ಕಾಲಕ್ಕೆ ಅದರ ಪ್ರಖರತೆ ಮಾಸಿದ್ದರೂ ತಮ್ಮ ನೆನೆಪಿನಲ್ಲಿತ್ತಾಗಿ ಬೇಡವೆಂದಿದ್ದರೆ, ಮಗ ಅದನ್ನು ಗಣ್ಯವೇ ಮಾಡದೆ ಕೂಗಾಡಿದ್ದ.

'ಸೌಂದರ್ಯವಿರುವಲ್ಲಿ ಅಸೂಯೆ ಸಹಜ, ಅಂಥ ಮತ್ಸರೇ ಆ ಕೆಟ್ಟ ಸುದ್ದಿಗೆ ಮೂಲ. ತಾಯಿಯಂತೆ ಮಗಳೂ ಅಪ್ರತಿಮ ಸುಂದರಿಯೇ. ಸದ್ಯ, ನೀವು ಅವಳಿಗೆ ಆ ಬಿರುದು ಕೊಡಲಿಲ್ಲವಲ್ಲ? ಇನ್ನು ಜಾತಿ. ಅದಂತೂ ನಮ್ಮದೇ. ಇಲ್ಲಿ ಕೇಳಿ, ನಾನು ವಿವಾಹವಾದರೆ ಅವಳನ್ನೇ. ಇಲ್ಲವಾದರಿಲ್ಲ' ಎಂದಿನಂತೆ ಗದ್ದದ್ದು ಅವನೇ. ಅಥವಾ ಪದ್ಮಳೆಂದರೂ ತಪ್ಪಿಲ್ಲ. ಇಲ್ಲವೆಂದರೆ ವಿವಾಹವಾದ ಎರಡು ತಿಂಗಳಿನಲ್ಲಿಯೇ ಪೇಟೆಯಲ್ಲಿ ಬಾಡಿಗೆ ಬಿಡಾರ ಹೂಡುತ್ತಿದ್ದನೆ ಮಗ? ಅದು ಕೂಡ ಇಲ್ಲಿಂದ ಪೇಟೆಗೆ ಇದ್ದುದು ಖಾಲಿ ಅರ್ಧತಾಸಿನ ಬಸ್‌ಪ್ರಯಾಣ, ಮದುವೆಗೆ ಮೊದಲು ಮನೆಯಿಂದಲೆ ಹೋಗಿಬರುತ್ತಿರಲಿಲ್ಲವೆ? 'ಹೋಗಲಿ, ಹೊಸ ಜೋಡಿ ಹಾಯಾಗಿರಲಿ' ಎಂದುಕೊಂಡಿದ್ದರು ಕೊನೆಗೆ. ಆ ಹೊಸ ದಿನಗಳಲ್ಲಿ ಅವರಿದ್ದುದೂ ಹಾಗೆಯೆ. ಸದಾ ತಿರುಗಾಟ, ಹನಿಮೂನು. ಅಂತಿದ್ದಾಗಲೇ ಹೆಣ್ಣು ಮಗುವೂ ಹುಟ್ಟಿತ್ತು. ಆವಾಗ ವಿವಾಹವಾಗಿ ಎರಡು ವರ್ಷ ದಾಟಿತ್ತಾಗಿ, ಈಗಿನ್ನು ಮಗುವೂ ಜನಿಸಿತಲ್ಲ, ಈ ಹಾರಾಟ, ತಿರುಗಾಟ ತನ್ನಂತೇ ಕಡಿಮೆ ಆದೀತೆಂದುಕೊಂಡಿದ್ದರೆ ಆಗಿದ್ದೇ ಬೇರೆ. ಮಗುವಿಗೆ ಆರು ತಿಂಗಳು ತುಂಬಬೇಕಿದ್ದರೇ ಎದೆಹಾಲು ಬಿಡಿಸಿ, ಅದನ್ನು ಆಯಾ ಕೈಗೊಪ್ಪಿಸಿ ಪದ್ಮ ಮತ್ತೆ ಕ್ಲಬ್ಬು, ಪಾರ್ಟಿ, ಮೀಟಿಂಗೆಂದು ತಿರುಗತೊಡಗಿದ್ದಳು. 'ಇದೇನು ವಿಪರೀತ? ಹೀಗಾದರೆ ಆ ಮಗುವಿನ ಗತಿಯೇನು?' ಎಂದೆಲ್ಲ ತಾವು ತಲೆ ಕೆಡಿಸಿಕೊಂಡಿದ್ದಾಗಲೇ ಸಿಕ್ಕಿದ್ದು ಆ ಸುದ್ದಿ. ಪದ್ಮ ಕಾಣೆಯಾಗಿದ್ದಳು. ಜತೆಗೇ ಅರವಿಂದ ಕೆಲಸ ಮಾಡುತ್ತಿದ್ದ ಕಂಪನಿಯ ಸೆಕ್ರೆಟರಿಯೂ. 'ಅವನಿಗೆ ವರ್ಗವಾಗಿದ್ದು ಗೊತ್ತಮ್ಮ. ಆದರೆ ಇವಳು ಈ ರೀತಿ ಮೋರೆಗೆ ಮಸಿ ಬಳಿದಾಳೆಂದುಕೊಂಡಿರಲಿಲ್ಲ. ಹುಂ, ಈಗ ಯೋಚಿಸಿ ಏನು ಫಲ? ನನ್ನ ಮುಂದೆಯೆ ಅವನನ್ನು ಇಂದ್ರ ಚಂದ್ರನೆಂದು ಹಾಡಿ ಹೊಗಳುತ್ತಿದ್ದಾಗಲೇ ಎಚ್ಚೆತ್ತುಕೊಳ್ಳಬೇಕಿತ್ತು.' ಮಗ ತಮ್ಮಲ್ಲಿ ಹಾಗೆ ಹಲುಬಿದ್ದಾಗ ಆ ಪ್ರಕರಣಕ್ಕೆ ಹಿನ್ನೆಲೆಯೂ ಇದ್ದುದು ತಿಳಿದಿತ್ತು. ಆದರೆ ಆವಾಗ ಏನು ಮಾಡಲೂ ಆಸ್ಪದವಿರಲಿಲ್ಲವೆಂದೇ ಮಗನಿಗೇ ಸ್ವಾಂತನ ಹೇಳಿದ್ದರು. ಆದರೂ ವಿವಾಹವಾದ ಮೂರೇ ವರ್ಷಕ್ಕೆ ಅವನ ಬದುಕು ಹೀಗಾಯಿತಲ್ಲ ಎಂದೆಷ್ಟು ಕೊರಗಿದ್ದರೋ. ಆ ಕೊರಗಿಗೆ ವಿರಾಮ ದೊರೆತದ್ದು

ಗೌರಿ ಈ ಮನೆ ತುಂಬಿದ ಮೇಲೆ. ಎಳೆ ವಯಸ್ಸಿನಲ್ಲಿಯೆ ಮಾಗಿದ್ದ ಜೀವ ಅವಳದು. ಆವಾಗ ಇವರೆಂದ ಹಾಗೆ ಸತ್ತಸೆಯ ಕಡಲು. ಆದರೇನಂತೆ? ಬಂತಲ್ಲ ಈಗ ಆಪತ್ತು? ಇನ್ನು ಇದರಿಂದ ಪಾರಾಗಲು ಏನು ದಾರಿಯೋ? ಭಗವಂತಾ, ಯಾಕೆ ಈ ರೀತಿ ಮೇಲೆ ಮೇಲೆ ಪರೀಕ್ಷಿಸುತ್ತಿದ್ದೀಯಪ್ಪ?' ತೀರ ಖಿನ್ನರಾಗಿ ಚಿಂತಿಸುತ್ತಲೇ ಎದ್ದ ಪಾರ್ತಮ್ಮ ಅಡುಗೆಗೆ ಮೊದಲಿಟ್ಟರು.



ಬೆಳಗ್ಗೆ ಎಂಟೂಕಾಲಕ್ಕೆ ಹಳ್ಳಿಗೆ ಬರುವ ಸರಕಾರೀ ಬಸ್ಸು, ಎಂಟೂವರೆಗೆ ಮರಳಿ ಪೇಟೆಗೆ ಹೋಗುತ್ತದೆ. ಹೆಚ್ಚಾಗಿ ಶಾಲಾಮಕ್ಕಳೇ ಹೋಗುವ ಆ ಬಸ್ಸಿಗೆ 'ಶಾಲೆಬಸ್ಸು' ಎಂಬ ಹೆಸರೂ ಇದೆ. ಅನಂತಯ್ಯ ಆ ಬಸ್ಸಿಗೇ ಹೋಗಬೇಕೆಂದು ಯೋಚಿಸಿದ್ದರಿಂದ ಬೆಳಗ್ಗೆ ಎಂದಿಗಿಂತ ಬೇಗ ಎದ್ದು ತೋಟಕ್ಕೆ ನಡೆದಿದ್ದರು. ಆ ತೋಟ ಅನಂತಯ್ಯನವರ ದುಡಿಮೆಯ ಫಲ. ತಮ್ಮ ಜವ್ವನದಲ್ಲಿ ಅವರು ಸುರಿಸಿದ ಬೆವರಿನ ಬೆಲೆ. ಎಳೆವಯದಲ್ಲಿಯೆ ತಂದೆಯನ್ನು ಕಳೆದುಕೊಂಡ ನತದೃಷ್ಟ ಅನಂತಯ್ಯ, ಅಣ್ಣಂದಿರ ಕಟುಮಾತು ಸೈರಿಸದೆ ಘಟ್ಟ ಹತ್ತಿದವರು ಅಲ್ಲಿ ಹಲವು ವರ್ಷಗಳ ಕಾಲ ಮೈಮುರಿದು ಕೆಲಸ ಮಾಡಿ ಪುಟ್ಟ ಗಂಟು ಮಾಡಿದ್ದು, ಅಲ್ಲಿಂದ ಮರಳಿ ದಕ್ಷಿಣಕನ್ನಡದ ಈ ಪುಟ್ಟಹಳ್ಳಿಯಲ್ಲಿ ಖಾಲಿ ಜಾಗೆ ಕೊಂಡು ತೋಟ ಎಬ್ಬಿಸಿದ್ದು, ಮನೆ ಕಟ್ಟಿ ಮದುವೆಯನ್ನೂ ಮಾಡಿಕೊಂಡದ್ದು, ಎಲ್ಲ ಈಗ ಹಳೆಯ ಸಂಗತಿಗಳು. ಅವರು ಆಗ ಇಟ್ಟ ಅಡಿಕೆ ಸಸಿಗಳೀಗ ಬೆಳೆದು ಫಲ ನೀಡುವ ಮರಗಳಾಗಿವೆಯಾದರೆ ಜತೆ ಜತೆಗೇ ನೆಟ್ಟಿದ್ದ ಬಾಳೆ, ಕೊಕೋಗಳೂ ಬೆಳೆದು ತಂತಮ್ಮ ಪಾಲನ್ನು ಸಲ್ಲಿಸುತ್ತಿವೆ. ಇನ್ನು ಮನೆ ಖರ್ಚಿಗಾಗಿ ಮಾರುವಷ್ಟು ತೆಂಗು, ತೋಟದ ಕಟ್ಟಪುಣೆಯಲ್ಲಿ ಸಾಲಾಗಿ ನೆಟ್ಟ ಮರಗಳಿಂದ ದೊರಕುತ್ತದೆ. ಈ ಎಲ್ಲ ಬೆಳೆಗೂ ಧಾರಾಳ ನೀರಿರುವುದೊಂದು ತುಂಬ ಅನುಕೂಲಕರ ಅಂಶ. ತಾವೇ ನೆಟ್ಟು ಬೆಳೆಯಿಸಿದ ಈ ತೋಟದ ಬಗ್ಗೆ ಅನಂತಯ್ಯನವರಿಗೆ ತುಂಬ ಅಭಿಮಾನ, ತೀರದ ಪ್ರೀತಿ. ಮಗ ಕೆಲಸಕ್ಕೆ ಸೇರುತ್ತೇನೆಂದಾಗ 'ಹೇಗೂ ಒಂದು ಸಂಸಾರದ ಖರ್ಚಿಗೆ ಈ ತೋಟದ ಉತ್ಪತ್ತಿ ಸಾಕು. ಇದನ್ನೇ ಚೆನ್ನಾಗಿ ನೋಡಿಕೊಂಡರೆ ಸಾಲದೆ? ಅದು ಕೂಡ ಕೆಲಸವೇ ಅಲ್ಲವೆ?' ಎಂದು ಅವರಿಗೆ ಕಂಡಿತ್ತಾದರೂ ಮಗನ ಆಸೆಯನ್ನು ನಿರಾಕರಿಸಲೂ ಅವರಿಂದಾಗಿರಲಿಲ್ಲ. ಹಾಗೆಂದೇ ಮತ್ತೆ ತಮಗೆ ತಾವೇ ಸಾಂತ್ವನ ಹೇಳಿಕೊಂಡಿದ್ದರಾತ.

'ಒಂದು ರೀತಿಯಲ್ಲಿ ಅದೂ ಒಳ್ಳೆಯದೆ. ಈಗೇನೋ ಸಂಸಾರ ಚಿಕ್ಕದು ನಿಜವಾದರೂ ಮುಂದೆ ಬೆಳೆದಾಗ ಖರ್ಚುಗಳೂ ಜಾಸ್ತಿಯಲ್ಲವೆ? ಹೋಗಿ ನಾಲ್ಕು ಕಾಸು ಸಂಪಾದಿಸಲಿ. ನಿವೃತ್ತಿಯ ನಂತರ ಬಂದು ನೆಲಸಲು ತೋಟವಿದ್ದೇ ಇದೆ. ಹಾಗೆ ತಾವೂ, ಪಾರ್ತಿಯೂ ಈಗ ಗಟ್ಟಿಯಾಗಿಯೇ ಇದ್ದೇವಲ್ಲ? ಇಷ್ಟಕ್ಕೂ ಮಗ ಕೆಲಸಕ್ಕೆ ಹೋಗುವುದು ಮನೆಯಿಂದಲೇ ತಾನೆ?' ಆದರೆ ಆ ಸಮಾಧಾನವಿದ್ದುದು ಕೆಲವೇ ಕಾಲ. ಅನಂತರ ಅರವಿಂದನಿಗೆ ವಿವಾಹವಾಯಿತು, ಜತೆಗೇ ಎಲ್ಲವೂ ಬದಲಾಗಿಬಿಟ್ಟಿತು.

ಓಣಿಗಳ ಮಧ್ಯೆ ನಡೆಯುತ್ತಲೂ, ಅಲ್ಲಲ್ಲಿ ಬಿದ್ದಿದ್ದ ಹಣ್ಣಡಿಕೆಗಳನ್ನು ಹೆಕ್ಕುತ್ತಲೂ ಇದ್ದು ಮನದೊಳಗೇ ನಡೆದ ಘಟನೆಗಳನ್ನೆಲ್ಲ ವಿಮರ್ಶಿಸುತ್ತಿದ್ದ ಅನಂತಯ್ಯ, ತಮ್ಮಲ್ಲಿಯೇ ಹೇಳಿಕೊಂಡರು.

'ಪದ್ಮ ಹೋಗಿ ಗೌರಿ ಬರುತ್ತಲೂ ತಾವು ಮತ್ತೆ ಆ ಹಳೆಯ ಕ್ರಮವನ್ನೆ ಜಾರಿಗೆ ತರಬೇಕಿತ್ತು. ಹಾಗೆ ಮಾಡಿರುತ್ತಿದ್ದರೆ ಇದು ಇಷ್ಟೆಲ್ಲ ಬೆಳೆಯುತ್ತಲೇ ಇರಲಿಲ್ಲ. ಇರಲಿ, ಈಗಾದರೂ ಏನಂತೆ? ಆ ಬಾಡಿಗೆ ಬಿಡಾರ ಬರ್ಖಾಸ್ತು ಮಾಡಿ, ಇಲ್ಲಿಗೇ ಬಂದಿರಲಿ ಅವರಿಬ್ಬರೂ. ಪದ್ಮಳ ವಿಚಾರಕ್ಕೆ ಕೋರ್ಟು ಇದ್ದೇ ಇದೆಯಲ್ಲ?' ಹಾಗೆಂದು ಕೊಂಡರೂ ತಾವು ಯೋಚಿಸಿದಷ್ಟು ಸರಳವಲ್ಲ ಆ ಕೆಲಸ ಎಂಬ ಅರಿವೂ ಇತ್ತಾಗಿ, ಒಂದು ರೀತಿಯ ಕಳವಳದಿಂದಲೇ ಅಡಿಕೆ ಹೆಕ್ಕಿದ ಅನಂತಯ್ಯ, ಆಮೇಲೆ ಮನೆಗೆ ಬಂದು, ಅದನ್ನೆಲ್ಲ ಅಂಗಳದಲ್ಲಿ ಸುರುವಿ, ಸಮನಾಗಿ ಹರಡಿದರು. ಅದಾದ ನಂತರ ಸ್ನಾನ, ಕಾಫಿ, ತಿಂಡಿ ಅಷ್ಟೆಲ್ಲ ಆದಾಗ ಘಂಟೆ ಎಂಟು ದಾಟಿತ್ತು.

'ಇನ್ನು ಹೊರಡದಿದ್ದರೆ ಬಸ್ಸು ಸಿಗಲಿಕ್ಕಿಲ್ಲ, ಮುಂದಿನದಕ್ಕೆ ಹೋದರೆ ಅಲ್ಲಿ ಅರವಿಂದನೇ ಸಿಗಲಿಕ್ಕಿಲ್ಲ. ಆಫೀಸು ಹತ್ತು ಗಂಟೆಗಲ್ಲವೆ? ಎಂದುಕೊಳ್ಳುತ್ತಲೇ ತಯಾರಾದ ಅನಂತಯ್ಯ,' ಪಾರ್ತೀ ಹೋಗಿ ಬರುತ್ತೇನೆ' ಎಂದು ಹೇಳಿ ಅಂಗಳಕ್ಕೆ ಇಳಿಯುವುದಕ್ಕೂ, ಗೇಟು ತೆರೆದ ಗೌರಿ ಅಂಗಳದೊಳಗೆ ಕಾಲಿಡುವುದಕ್ಕೂ ತಾಳೆಯಾಯಿತು.



ಗೌರಿ ಬಂದು ಎರಡು ದಿನ ಕಳೆದಿತ್ತು. ಆ ಸಂಜೆ ಅರವಿಂದ ಬಂದಾಗ ಅವಳು ತೋಟಕ್ಕೆ ಹೋಗಿದ್ದರೆ, ಪಾರ್ತಮ್ಮ ಹಾಲು ಕರೆಯಲು ಹಟ್ಟಿಗೆ ತೆರಳಿದ್ದರು. ಅಂಗಳದಲ್ಲಿ ಕೂತು ಹಳೆ ಅಡಿಕೆ ಸುಲಿಯುತ್ತಿದ್ದ ಅನಂತಯ್ಯ, ಮಗನ ಆಗಮನವನ್ನು ನೋಡಿದ್ದರೂ ಮೌನವಾಗಿಯೇ ಇದ್ದರು. ಆ ಮೌನವನ್ನು ತಾನೂ ಗಣ್ಯ ಮಾಡದವನಂತೆ ಅರವಿಂದ ನೇರ ಮನೆಯೊಳಗೆ ನಡೆದನಾದರೂ, ಅಲ್ಲಿ ಯಾರನ್ನೂ ಕಾಣದೆ ಮತ್ತೆ ಮರಳಿ ಅಂಗಳದ ಬಲಬದಿಯ ಜಗಲಿಯಲ್ಲಿ ಕೂರುತ್ತ ತಮಾಷೆಯ ದನಿಯಲ್ಲಿ ಪ್ರಶ್ನಿಸಿದ.

'ಹಳೆ ಅಡಿಕೆ ಸುಲಿಯುವುದು ಈಗಲೇ ಯಾಕಪ್ಪ? ಏನಾದರೂ ವಿಶೇಷವಿದೆಯೆ?'

'ಅದನ್ನು ನೀನೇ ಹೇಳಬೇಕು! ನಾನಂತೂ ಬೇಕಿದ್ದರೆ ಇರಲಿ ಎಂದುಕೊಂಡು ಈ ಕೆಲಸಕ್ಕೆ ಕೂತೆ' ಅವನ ಪ್ರಶ್ನೆಗೆ ತಟ್ಟನೆ ಆ ಉತ್ತರ ಸಿಕ್ಕಿದಾಗ ತುಸು ತಬ್ಬಿಬ್ಬಾದರೂ, ಮತ್ತೆ ಚೇತರಿಸಿಕೊಂಡು ಆಕ್ಷೇಪಿಸಿದನಾತ. 'ತಮಾಷೆ ಸಾಕಪ್ಪ, ಗೌರಿ ಮೊನ್ನೆ ಏನಂದಳು? ನೀವೆ ವಳನ್ನು ಕಳಿಸಿದಿರಿ ತಾನೆ?'

'ಕಳಿಸುವುದೆ? ಎಲ್ಲಿಗೆ? ಯಾಕಾಗಿ?'

'ಇದೇನಪ್ಪ ಹೀಗನ್ನುತ್ತೀರಿ? ಗೌರಿ ಏನನ್ನೂ ಹೇಳಲಿಲ್ಲವೆ? ಪದ್ಮ ಬಂದಿದ್ದಾಳೆ ಊರಿಗೆ' ಒಳಗೇ ಅಳುಕು ಬಾಧಿಸುತ್ತಿದ್ದರೂ ಹೊರಗೆ ಗಂಭೀರತೆ ನಟಿಸುತ್ತ ಅರವಿಂದ ಹೇಳಿದಾಗ ಬಂತು ತಣ್ಣಗಿನ ಪ್ರತಿಕ್ರಿಯೆ. 'ಅದಕ್ಕೇನೀಗ? ಅವತ್ತು ಓಡಿದಳು, ಈಗ ಬಂದಿದ್ದಾಳೆ, ಮತ್ತೆ ಇನ್ನು ಯಾವಾಗ ಹೋಗುತ್ತಾಳೆ?'

'ಹಾಗೆಲ್ಲ ಹಗುರವಾಗಿ ಮಾತನಾಡಬೇಡಿ ಅಪ್ಪ' ಎಚ್ಚರಿಸುವಂತೆ ತಟ್ಟನೆ ಹೇಳಿದ ಅರವಿಂದ, ಮತ್ತೆ ಮುಂದುವರಿಸಿದ

'ಅವಳು ಒಮ್ಮೆ ತಪ್ಪಿದ್ದು ನಿಜವೆ. ಆ ಬಗ್ಗೆ ಈಗ ಸಾಕಷ್ಟು ಪಶ್ಚಾತ್ತಾಪವನ್ನೂ ಪಟ್ಟಿದ್ದಾಳೆ. ನೀವೇನೇ ಹೇಳಿ ಅಪ್ಪ, ಪದ್ಮ ನನ್ನ ಧರ್ಮಪತ್ನಿ. ಅಷ್ಟೇಯೆ? ಅವಳಲ್ಲಿ ನನಗೆ ಜನಿಸಿದ ಮಗು ಬೇರೆ ಇದೆ. ಅಂಥವಳು ಆಶ್ರಯ ಬಯಸಿ ಬಂದಾಗ ಇಲ್ಲವೆನ್ನಲಾದೀತೆ? ನ್ಯಾಯವೆ ಅದು? ಆದರೆ ಈಗಿನ ಸಮಸ್ಯೆಯೆಂದರೆ ಒಂದೇ ಮನೆಯಲ್ಲಿ ಪದ್ಮ, ಗೌರಿ ಇಬ್ಬರೂ ಇರುವಂತಿಲ್ಲ.' ಹಾಗನ್ನುತ್ತ ಆತ ಅತ್ತ ತಿರುಗಿದಾಗ ಅದೇ ಬಂದಿದ್ದ ಪಾರ್ತಮ್ಮ, ಗೌರಿ ಇಬ್ಬರೂ ಕಂಡರು. ಮಗನ ಮಾತನ್ನು ಪೂರ್ತಿ ಕೇಳಿಸಿಕೊಂಡಿದ್ದ ಪಾರ್ತಮ್ಮ, ಅವನ ನೋಟ ತಮ್ಮಲ್ಲಿ ನೆಲಸುತ್ತಲೂ, ತುಸುವೂ ಅನುಮಾನಿಸದೆ ಹೇಳಿಬಿಟ್ಟರು.

'ಮೊದಲಿಗೆ ನೀನು ಅವಳನ್ನು ಮತ್ತೆ ಸೇರಿಸಿ ಕೊಳ್ಳುವುದೇ ನಮಗೆ ಇಷ್ಟವಿಲ್ಲ. ಕಾರಣ, ನಿನಗೇ ಗೊತ್ತು. ಗೊತ್ತಿದ್ದೂ ಉಡಿಯಲ್ಲಿ ಕೆಂಡ ಕಟ್ಟಿ ಕೊಳ್ಳುತ್ತೀ ಎಂದಾದರೆ ನಾವೇನು ಮಾಡಲಾ ದೀತು! ಅದೇ ನಿನ್ನ ನಿರ್ಧಾರವಾದರೆ ಗೌರಿ ಇಲ್ಲಿರಲಿ'

'ಅದು ಹಾಗಾಗುವುದಿಲ್ಲ ಅಮ್ಮ. ನಾನು ಸರ್ಕಾರೀ ಕೆಲಸದಲ್ಲಿರುವವ. ಕಾನೂನಿನಂತೆ ಮೊದಲ ಪತ್ನಿ ಬದುಕಿರುವಾಗ, ಎರಡನೆ ವಿವಾಹ ತಪ್ಪು. ನನ್ನ ಕೆಲಸದ ನೆಲೆಯಿಂದ ನೋಡಿದರೆ ನನ್ನ ಮಟ್ಟಿಗೆ ಆ ಕಾನೂನು ಇನ್ನೂ ಬಿಗಿ. ಗೊತ್ತೇನಮ್ಮ ನಿನಗೆ. ಗೌರಿ ಇಲ್ಲಿದ್ದರೂ ಯಾರಾದರೂ ಕುಹಕಿ ಗಳು ಆ ಬಗ್ಗೆ ತಳ್ಳಿ ಅರ್ಜಿಹಾಕಿದರೆ ನನ್ನ ಕೆಲಸ ಹೋದೀತು, ಅಷ್ಟೇಯಾ? ನಾನು ಜೈಲಿಗೂ ಹೋಗಬೇಕಾದೀತು. ಅದಕ್ಕೆ' ಮಾತನಾಡುತ್ತಿದ್ದ ಅರವಿಂದ ಕ್ಷಣಕಾಲ ನಿಲ್ಲಿಸಿದರೂ, ಮತ್ತೆ ಧೈರ್ಯ ದಿಂದ ಹೇಳಿಬಿಟ್ಟ.

'ನಮ್ಮಿಂದ ತಪ್ಪಾಗಿದೆ ನಿಜ. ಹಾಗೆಂದು ಅದನ್ನೇ ನೆನೆದು ಕೂತರೇನೂ ಫಲವಿಲ್ಲ. ಗೌರಿಗೆ ಅಷ್ಟೋ ಇಷ್ಟೋ ಕೊಟ್ಟು ಕಳಿಸಿಬಿಡೋಣ.'

ಆ ಮಾತು ಕೇಳಿದೊಡನೆ ಗೌರಿಯ ಮೋರೆ ಬಿಳುಪೇರಿದರೆ, ಅನಂತಯ್ಯ ತಣ್ಣನೆ ಪ್ರಶ್ನಿಸಿದರು, 'ಅಷ್ಟೋ ಇಷ್ಟೋ ಅಂದರೆ ಎಷ್ಟು?'

ಆತ ನಿಜಕ್ಕೂ ಕೇಳಿದರೋ, ಅಲ್ಲ ಅಣಕವೋ ತಿಳಿಯದೆ ಅರವಿಂದ ಗೊಂದಲಿಸಿದರೆ, ಗೌರಿಗೆ ನಿಂತ ನೆಲವೆ ಕುಸಿದಂತೆನ್ನಿಸಿತು. ತಾನು ನಂಬಿದ್ದ ಮಾವನೇ ಹಾಗೆಂದದ್ದು? ನಿಜಕ್ಕೂ? ಉಕ್ಕುತ್ತಿದ್ದ ಅಳಲಿಗೆ ಕಟ್ಟೆ ಹಾಕದೆ ಬೇಡಿದವಳು ಗೌರಿ, 'ನಾನಿಲ್ಲಿಯೇ ಒಂದು ಮೂಲೆಯಲ್ಲಿರುತ್ತೇನೆ ಮಾವಾ, ನನ್ನನ್ನೆಲ್ಲಿಗೂ ಕಳಿಸಬೇಡಿ' ಕಂಬನಿ ಯಿಂದ ತೊಯ್ದ ಆ ದನಿಗೆ ಅನಂತಯ್ಯನೆದೆ ಮುದುಪಾದರೂ, ಹೊರಗೆ ಏನನ್ನೂ ತೋರಿಸದೇ ಬಿಗುವಾಗಿ ಮತ್ತೆ ಅದೇ ಪ್ರಶ್ನೆಯನ್ನು ಉಚ್ಚರಿಸಿದರಾತ.

ಗೌರಿಯ ಬೇಡಿಕೆಯನ್ನು ಲಕ್ಷ್ಯಕ್ಕೇ ತರದೇ ಅನಂತಯ್ಯ ಮತ್ತೆ ಹಾಗೆ ಕೇಳಿದ್ದನ್ನು ತನ್ನ ಗೆಲುವೆಂದೇ ಭಾವಿಸಿದ ಅರವಿಂದ, ಒಳಗೇ ಖುಷಿ ಯಾಗುತ್ತ ಉತ್ತರಿಸಿದ. ಅವನ ಮಾತನ್ನು ಗಮನ ವಿಟ್ಟು ಆಲಿಸಿದ ಮೇಲೆ ಅನಂತಯ್ಯ ಮತ್ತೆ ಕೇಳಿದರು.

'ಸರಿ, ಆ ಮೊತ್ತ ಅವಳ ಈ ಎರಡು ವರ್ಷಗಳ ದುಡಿಮೆಗಾಯಿತು. ಮತ್ತೆ ನೀನು ಮೊದಲೊಮ್ಮೆ ವಿವಾಹವಾಗಿ ಆ ಸಂಬಂಧದಿಂದ ಸಾಕಷ್ಟು ನೊಂದವನು ಎಂಬುದನ್ನು ಅರ್ಥವಿರಿಸಿಕೊಂಡು ಆ ಬಗ್ಗೆ ಒಂದು ಸಲವೂ ಕೆದಕದೆ ಇದ್ದುದಕ್ಕೆ ಮತ್ತು ನಿನಗಿದು ಎರಡನೆ ಸಂಬಂಧವಾದರೂ, ಅವಳಿಗೆ ಮೊದಲನೆ ವಿವಾಹವೇ ಆಗಿದ್ದು ಹೆಣ್ಣಿಗೆ ಅಂತಹ ಸಂದರ್ಭದಲ್ಲಿ ಸಹಜವಾಗಿರುವ ಯಾವುದೇ ಆಸೆಗಳನ್ನೂ ಪ್ರಕಟಪಡಿಸದೆ ಕೇವಲ ನಿನ್ನ ಮನಃಸ್ಥಿತಿಯನ್ನು ಸುಧಾರಿಸುವತ್ತಲೇ ಲಕ್ಷ್ಯ ನೀಡಿ ನಿನ್ನ ಆರೈಕೆಯಲ್ಲಿ ನಿಸ್ವಾರ್ಥದಿಂದ ಮಾಡಿದುದಕ್ಕೆ ಏನು ಬೆಲೆ ಕಟ್ಟುತ್ತೀಯೆ?'

ಶಾಂತವಾಗಿ ಬಂದರೂ ಆ ಪ್ರಶ್ನೆಯ ಹರಿತಕ್ಕೆ ಅರವಿಂದ ತೀರಾ ಪೆಚ್ಚಾದ, ಜತೆಗೆ ಆ ಅಸಹಾಯಕತೆಯಿಂದಾಗಿ ಸಿಟ್ಟೂ ಬೆನ್ನಿಗೇ ಹುಟ್ಟಿತಾಗಿ ತಟ್ಟನೆ ವಾದಿಸಿದ, 'ಹೀಗೆಲ್ಲ ಸುತ್ತೂ ಬಳಸಿನ ಮಾತೇಕೆ? ನಿಮಗೆ ಮೊದಲಿನಿಂದಲೂ ಪದ್ಮಳನ್ನು ಕಂಡರೆ ಆಗದು. ಈಗಲೂ ಹಾಗೇ ನೇರವಾಗಿ ಅವಳು ನಮಗೆ ಬೇಡವೆನ್ನಬಹುದಲ್ಲ?'

'ಪದ್ಮಳ ವಿಚಾರವನ್ನು ತೀರ್ಮಾನಿಸುವವನು ನೀನೇ. ನಾವಲ್ಲ. ಕಾರಣ ನಮಗಿಂತಲೂ ನಿನಗೇ ಅವಳ ಸಂಗತಿ ಚೆನ್ನಾಗಿ ಗೊತ್ತು. ನೀನಾಗ ಕೇಳಿದೆಯಲ್ಲ? ಆಶ್ರಯ ಬೇಡಿ ಬಂದವಳನ್ನು ನಿರಾಕರಿಸುವುದು ನ್ಯಾಯವೆ ಎಂದು? ಹಾಗಿದ್ದರೆ ಈಗಾಗಲೇ ನಿನ್ನ ಆಶ್ರಯದಲ್ಲಿರುವವಳನ್ನು ಹೊರಗೆ ಕಳಿಸುವುದು ನ್ಯಾಯವೆ ಎಂದು ನಾನೂ ಕೇಳುತ್ತೇನೆ. ಅಷ್ಟೇ ಅಲ್ಲ, ಮಗು ಕೂಡ ಇದೆ ಎಂದಿದ್ದೀ. ಆ ಮಗು ಇದೆಯೆಂದೂ ಅದು ನಿನಗೆ ಜನಿಸಿದ್ದೆಂದೂ ಆವತ್ತು ಹೋಗುವಾಗ ಪದ್ಮಳಿಗೆ ತಿಳಿದಿರಲಿಲ್ಲವೆ?' ಮಗನ ವಾದಕ್ಕೆ ಕೂಡಲೇ ಪ್ರತಿ ಕ್ರಿಯಿಸಿದ ಅನಂತಯ್ಯ, ಆ ವೇಳೆಗೆ ಅಡಿಕೆ ಸುಲಿತ ಒಂದು ಹಂತ ತಲುಪಿದ್ದರಿಂದ ಮೇಲಕ್ಕೇಳುತ್ತ ಮತ್ತೆ ಸಾರಿದರು:

'ಹೋಗಲಿ ಬಿಡು. ಸುಮ್ಮಗೆ ಚರ್ಚೆ ಮಾಡಿ ಏನು ಫಲ? ಪದ್ಮಳಂತೆಯೇ ಗೌರಿ ಕೂಡ ಈ

ಮನೆಯ ಸೊಸೆಯೇ. ಆದ್ದರಿಂದಲೇ ಅವಳು ಇಲ್ಲಿಯೆ ಇರುತ್ತಾಳೆ' ಮಾತು ಮುಗಿಯಿತೆಂಬಂತೆ ಸುಲಿದ ಅಡಿಕೆಗಳಿದ್ದ ಬುಟ್ಟಿಯನ್ನೆತ್ತಿಕೊಂಡ ಅನಂತಯ್ಯ, ಒಳಗೆ ಹೋಗಲಣಿಯಾದಾಗ ಅರವಿಂದ ದನಿಯೇರಿಸಿ ನುಡಿದ.

'ಅದು ಸಾಧ್ಯವಿಲ್ಲ ಎಂದೆನಲ್ಲ ಆಗಲೇ? ಏನೋ, ನನ್ನ ಕಷ್ಟ ಅರ್ಥಮಾಡಿಕೊಳ್ಳುತ್ತೀರಿ ಎಂದುಕೊಂಡಿದ್ದರೆ ಇಲ್ಲಿನ ಕಥೆಯೇ ಬೇರೆ. ಹೆತ್ತ ಮಗನಿಗಿಂತ ಆ ಬಿಕನಾಸಿಯೇ ನಿಮಗೆ ಹೆಚ್ಚಾಗಿ ಹೋದಳಲ್ಲವೆ? ನಾನೂ ನೋಡುತ್ತೇನೆ. ನೀವು ಅವಳನ್ನು ಅದು ಹೇಗೆ ಮನೆಯಲ್ಲಿಟ್ಟುಕೊಳ್ಳುತ್ತೀರೆಂದು?' ಒಳಗೆ ಹೊರಟಿದ್ದ ಅನಂತಯ್ಯ, ಅವನ ಮಾತು ನಿಲ್ಲುತ್ತಲೂ ಗರ್ಜಿಸಿದರು.

'ಓಹೋ? ಹಾಗೋ? ಹಾಗಿದ್ದರೆ ನಾನೂ ನೋಡಿಯೆಬಿಟ್ಟೇನು. ಏನೆಂದುಕೊಂಡಿದ್ದೀ ನೀನು? ಇದು ನನ್ನ ಮನೆ. ಇಲ್ಲಿರುವ ಎಲ್ಲವೂ ನನ್ನ ಸ್ವಯಾರ್ಜಿತ ನೆನಪಿರಲಿ'

ಆ ರೀತಿಯ ಅಬ್ಬರವನ್ನು ನಿರೀಕ್ಷಿಸಿಯೇ ಇರದ ಅರವಿಂದ ದಿಗ್ಭ್ರಾಂತನಾಗಿದ್ದಾಗ, ಈವರೆಗೂ ಸುಮ್ಮಗಿದ್ದ ಪಾರ್ತಮ್ಮ ಮಗನನ್ನೆ ದಿಟ್ಟಿಸಿ ಗೋಗರೆದರು.

'ಯಾಕಪ್ಪ ಅವಳ ಮೇಲೆ ಅಂತಹ ಹಟ? ಆ ರೀತಿ ದ್ವೇಷ? ಅವಳಿಗಾದರೂ ನಮ್ಮನ್ನು ಬಿಟ್ಟರೆ ಯಾರಿದ್ದಾರೆ? ಇಷ್ಟಕ್ಕೂ ಅದು ಕಾನೂನಿನ ಬೆಂಬಲ ಇಲ್ಲದೆ ವಿವಾಹವಾಗಿತ್ತಲ್ಲವೆ? ಅದು ನಡದೇ ಇಲ್ಲವೆಂದುಕೋ. ಆದರೆ ಅವಳಿಗಿಲ್ಲಿ ನೆಲೆಯನ್ನೇ ಕೊಡಬಾರದೆಂದರೆ ಅದು ತೀರಾ ಅನ್ಯಾಯವಲ್ಲವೇನಪ್ಪಾ? ಹೇಳೋ'

'ಅದೆಲ್ಲ ನನಗೆ ತಿಳಿಯದಮ್ಮ. ಅವಳಿಲ್ಲಿ ಇರಬಾರದೆನ್ನುವುದೇ ನನಗೆ ಮುಖ್ಯ. ಯಾವುದೇ ರೀತಿಯಲ್ಲಿ 'ರಿಸ್ಕ್' ತೆಗೆದುಕೊಳ್ಳಲು ನಾನು ಖಂಡಿತ ತಯಾರಿಲ್ಲವೆಂದೆ ಕೇಳುತ್ತಿದ್ದೇನೆ. ನಿಮಗೆ ಬೇಕಾಗಿರುವುದು ನಾನೋ? ಗೌರಿಯೋ? ಬೇಗ ನಿರ್ಧರಿಸಿ'

ತೀರ ವ್ಯಾವಹಾರಿಕವಾಗಿ ಬಂದ ಆ ಪ್ರಶ್ನೆಯಿಂದ ಕಂಗೆಟ್ಟ ಪಾರ್ತಮ್ಮ 'ಅರವಿಂದಾ' ಎನ್ನುತ್ತಿದ್ದಾಗಲೇ ಅನಂತಯ್ಯ ಏರಿದ ದನಿಯಲ್ಲಿ ಕರೆದರು, 'ಪಾರ್ತೀ'. ಆ ಸ್ವರಕ್ಕೆ ಬೆಚ್ಚಿದ ಪಾರ್ತಮ್ಮ ಅವರೆಡೆಗೆ ದಿಟ್ಟಿಸಿದಾಗ ಸ್ಥಿರವಾಗಿ ಹೇಳಿದರಾತ:

'ತಪ್ಪು ನಮ್ಮದೇ ಪಾರ್ತೀ. ಒಬ್ಬನೇ ಮಗನೆಂದು ಕೊಂಗಾಟ ಮಾಡಿ ಅವನನ್ನು ಹೇಗೆ ಬೆಳೆಸಿದೆವೆಂದರೆ ನ್ಯಾಯಾನ್ಯಾಯಗಳ ಪರಿವೆಯನ್ನೇ ಅವನು ಮಾಡದಂತೆ ಆಗಿಬಿಟ್ಟಿತು. ಆ ತಪ್ಪು ತಿಳಿದ ಮೇಲೂ ಅದನ್ನು ತಿದ್ದಿಕೊಳ್ಳದಿದ್ದರೆ ಹೇಗೆ? ಅದಕ್ಕೇ ಇಲ್ಲಿಗೆ ಬರುವುದೂ ಬಿಡುವುದೂ ಅವನಿಷ್ಟ. ಗೌರಿ ಮಾತ್ರ ಇಲ್ಲಿಯೆ ಇರುತ್ತಾಳೆ. ಅರವಿಂದನ ಪತ್ನಿಯಾಗಿ ಅಲ್ಲ, ನಮ್ಮ ಮನೆ ಮಗಳಾಗಿ' ಹಾಗಂದು ಒಳಗೆ ಹೊರಟೇ ಹೋದ ವರತ್ತಲೇ ಒಂದು ಕ್ಷಣ ದಿಟ್ಟಿಸಿದ ಪಾರ್ತಮ್ಮ, ಆ ಮೇಲೆ ತಾವೂ ಒಳಗೆ ಹೋಗುತ್ತ ಕರೆದರು. 'ಬಾಮ್ಮ ಗೌರಿ, ಒಳಗ ಬಾ' ಆ ವೇಳೆಗೆ ಸಂಜೆ ಕರಗಿ ಕತ್ತಲಾವರಿಸತೊಡಗಿತ್ತು. ತಾನು ಸ್ವಲ್ಪವೂ ನಿರೀಕ್ಷಿಸದೆ ಇದ್ದ ರೀತಿಯಲ್ಲಿ ಸಂಭಾಷಣೆಗಳು ನಡೆದು, ಆ ವಿಚಾರದಲ್ಲಿ ತಟ್ಟನೆ ಒಂದು ನಿರ್ಧಾರವೂ ಆಗಿ ಹೋದ ಪರಿಗೆ ದಿಗ್ಭ್ರಮೆಗೊಂಡಿದ್ದ ಅರವಿಂದ, ಕ್ಷಣಕ್ಷಣಕ್ಕೂ ಬೆಳೆಯುತ್ತಿದ್ದ ಕತ್ತಲ ಬಸಿರೊಳಗೆ ಗರಬಡಿದವನಂತೆ ನಿಂತೇ ಇದ್ದ.



[illegible]



[illegible]



ಕೆ. ಪರಪ್ಪಸ್ವಾಮಿ ಉಪ್ಪಾರಶೆಟ್ಟಿ

# ಶ್ರೀಮಠ ಮತ್ತು ಪಾಪಕ್ಕ

ಪಾಪಕ್ಕನಿಗೆ, ಕುಂತಲ್ಲಿ, ನಿಂತಲ್ಲಿ, ಹೋದಲ್ಲಿ ಬಂದಲ್ಲಿ, ಮಲಗಿದಲ್ಲಿ, ಬರೀ ಶ್ರೀಮಠದ ಚಿಂತೆ, ತಲೆಯಲ್ಲಿ ಚಿತೆಯಂತೆ ಉರಿಯ ತೊಡಗಿತ್ತು. ಶ್ರೀಮಠದ ಒಳಗೂ, ಹೊರಗೂ, ಶ್ರೀಮಠದ ಪ್ರಚಲಿತ ವಿದ್ಯಮಾನ ಕಾಡ್ಗಿಚ್ಚಿನಂತೆ ಹರಡಿ, ಜನಸಾಮಾನ್ಯರ, ಶ್ರೀಮಠದ ನಿವಾಸಿಗಳ, ಸದ್ಭಕ್ತರ ಬಾಯಲ್ಲಿ ಹರಟುವ ಸರಕಾಗಿ ಬಿಟ್ಟಿಯ ಮಾತಾಗಿತ್ತು. ಎಲ್ಲಿಂದರಲ್ಲಿ ಶ್ರೀಮಠದ ಬಗ್ಗೆ ಮಾತುಗಳು, ಶ್ರೀಮಠದ ಬಗ್ಗೆ ಟೀಕೆಗಳು ಕೇಳತೊಡಗಿದಾಗ, ಕಿರಿಯ ಸ್ವಾಮೀಜಿಗಳು, ಆಳಿತಾಧಿಕಾರಿಗಳು ಕೆರಳಿ ಕೆಂಡಾಮಂಡಲವಾಗಿದ್ದರು; ಅಂತಹ ಕೆಲವು ಒಕ್ಕಲುಗಳನ್ನು ಶ್ರೀಮಠದಿಂದ ಹೊರಗ್ಹಾಕಿದ್ದರು. ಶ್ರೀಮಠವನ್ನು ತೂರೆಯಲು ಹಿಂದೆಮುಂದೆ ನೋಡಿ ಗುಟರುಹಾಕಿದವರನ್ನು, ಹೊರಗಿನಿಂದ ಜನಗಳ ಕರೆತಂದು ಹೊಡೆಸಿ ಹೊರದಬ್ಬಿದ್ದರು!

ಶ್ರೀಮಠಕ್ಕೆ ನಾನಾ ಮೂಲಗಳಿಂದ ಆದಾಯ ಹರಿದುಬರುತ್ತಿತ್ತು. ಸದ್ಭಕ್ತರಿಂದ, ವ್ಯವಸಾಯ ಸಹಕಾರ ಸಂಘದಿಂದ, ಶಿಕ್ಷಣ ಸಂಸ್ಥೆಗಳಿಂದ, ಹೀಗೆ ಹಣದ ಹೊಳೆ ಶ್ರೀಮಠವನ್ನು ತಲುಪುತ್ತಿತ್ತು. ಹಿರಿಯ ಸ್ವಾಮೀಜಿಗಳಿದ್ದಾಗ, ಪಾಪಕ್ಕನೇ ಮುಂದೆ ನಿಂತು, ಆ ಹಣದಿಂದ ತಪೋವನ, ವಿಹಾರ ವನ, ಶ್ರೀಮಠಕ್ಕೆ ದೂರದಿಂದ ಬರುವ ಸದ್ಭಕ್ತರಿಗೆ ದಾಸೋಹ, ವಿಶ್ರಾಂತಿಗೃಹಗಳು, ದಲಿತ, ಹಿಂದುಳಿದ ಅನಾಥಮಕ್ಕಳಿಗೆ ಪ್ರಸಾದ ಕೇಂದ್ರಗಳು, ವಸತಿಗಳನ್ನು ನಿರ್ಮಿಸಲು ವ್ಯಯ ಮಾಡುತ್ತಿದ್ದಳು, ಪ್ರತಿಯೊಂದು ಯೋಜನೆಗಳಿಗೆ, ಕಾಮಗಾರಿಗಳಿಗೆ ಬಳಸಿದ ಹಣ, ಉಳಿಸಿದ ಹಣ ಎಲ್ಲದಕ್ಕೂ ಪಾಪಕ್ಕ ದಾಖಲೆ ಇಟ್ಟಿರುತ್ತಿದ್ದಳು.

ಆದರೆ ಈಗ ಹಿರಿ ಸ್ವಾಮೀಜಿಗಳಿಲ್ಲ, ಪಾಪಕ್ಕನ ಆಡಳಿತವಿಲ್ಲ, ದಲಿತ, ಹಿಂದುಳಿದ, ಅನಾಥ ಮಕ್ಕಳಿಗೆ ಪ್ರಸಾದವಿಲ್ಲ! ಸದ್ಭಕ್ತರಿಗೆ ದಾಸೋಹವಿಲ್ಲ... ಶ್ರೀಮಠದಲ್ಲಿ ದುಡಿಯುವ, ಪ್ರಾಮಾಣಿಕವಾಗಿ ನಡೆಯುವ ಒಕ್ಕಲುಗಳಿಲ್ಲ, ವಿಹಾರ ವನ, ತಪೋವನ, ಪ್ರಾಣಿ ಸಂಗ್ರಹಾಲಯ ಯಾವುದೂ ಇಲ್ಲ. ಕಿರಿಯ ಸ್ವಾಮಿಗಳು ಯಾವುದಕ್ಕೂ ತಲೆಕೆಡಿಸಿಕೊಳ್ಳುವುದಿಲ್ಲ. ಅವರು ವಿಲಾಸ ಜೀವನಕ್ಕೆ ಮಾರುಹೋಗಿದ್ದಾರೆ. ಆಡಳಿತಾಧಿಕಾರಿಗಳೂ, ಅವರ ಹಿಂಬಾಲಕರೂ ಶ್ರೀಮಠವನ್ನು ಸುಲಿಸುಲಿದು ಮಾರುತ್ತಿದ್ದಾರೆ. ಕಿರಿಯ ಸ್ವಾಮೀಜಿಗಳೂ ಕೂಡ ಅವರು ಹೇಳಿದ ತಾಳಕ್ಕೆ ಕುಣಿಯುವ ಗೊಂಬೆಯಂತಾಗಿದ್ದಾರೆ. ಕಾವಿಯ ಮರೆಯಲ್ಲಿ ಮಾಡಬಾರದ ಕೆಲಸಗಳ ಮಾಡುತ್ತಿದ್ದಾರೆ. ಇದನ್ನೆಲ್ಲವನ್ನು ಕಂಡ ಪಾಪಕ್ಕ. ದಿನ ದಿನವೂ ಕೊರಗುತ್ತಾಳೆ, ಸೊರಗುತ್ತಾಳೆ.

ಇಷ್ಟೆಲ್ಲ ನಡೆಯುತ್ತಿದ್ದರೂ, ಪಾಪಕ್ಕ ಯಾಕೆ? ಎಂದು ಕೇಳಿರಲಿಲ್ಲ. ಶ್ರೀಮಠದ ಪ್ರಾಮಾಣಿಕ ಒಕ್ಕಲುಗಳನ್ನು ಬಲಾತ್ಕಾರವಾಗಿ ಹಿಂಸಿಸಿ, ಅಮಾಯಕರ ತಲೆಯ ಮೇಲೆ ಆಪಾದನೆಗಳ ಹೊರಿಸಿ, ಶ್ರೀಮಠದಿಂದ ಅವರನ್ನು ಬಹಿಷ್ಕರಿಸಿದಾಗ, ಆ ನಿಷ್ಠಾವಂತ ಒಕ್ಕಲುಗಳು ಓಡೋಡಿ ಬಂದು, ಪಾಪಕ್ಕನ ಪಾದದ ಮೇಲೆ ಬಿದ್ದು, ಅವ್ವಾರೇ... ನಾವು ಶ್ರೀಮಠಕ್ಕೆ ದ್ರೋಹಬಗೆದಿ

ದ್ದೇವೆಂದು ನೀವೂ ನಂಬ್ತೀರಾ ತಾಯಿ, ನೀವಾದ್ರೂ ಕರುಣೆ ತೋರ್ರಿ ನಮ್ಮವ್ವಾ.... ಶ್ರೀಮಠವನ್ನು, ನಿಮ್ಮನ್ನು ಅಗಲಿ ನಾವು ಬದುಕಲ್ಲ ಅವ್ವಾರೇ... ಎಂದು ಗೋಗರೆದಾಗ, ಪಾಪಕ್ಕ ಸಂಕಟ ತಾಳಲಾರದೇ, ಒಕ್ಕಲುಗಳ ಅಳಲಿಗೆ ಸಾಂತ್ವನ ಹಿತನುಡಿ ಹೇಳಲಾರದೇ, ಕೋಣೆಯೊಳಗೆ ಹೋಗಿ ಬಾಗಿಲಾಕಿಕೊಂಡು ಹಿರಿಯ ಸ್ವಾಮಿಗಳ ಪಟದೆದುರು ಕುಳಿತು, ಮಗುವಿನಂತೆ ಮುದುಡಿ ಅಳತೊಡಗಿದ್ದಳು. ಪಾಪಕ್ಕನಿಗೀಗ ಅಳುವುದನ್ನು ಬಿಟ್ಟರೆ ಬೇರೆ ಯಾವ ಮಾರ್ಗಗಳೂ ಉಳಿದಿರಲಿಲ್ಲ.

ಈ ಹಿಂದೆ ಆಡಳಿತಾಧಿಕಾರಿಗಳು ದಾಸೋಹವನ್ನೂ, ಬಡಮಕ್ಕಳಿಗೆ ಕೊಡುತ್ತಿದ್ದ ಪ್ರಸಾದ ನಿಲಯವನ್ನೂ ನಿಲ್ಲಿಸಿ, ದಾನದ ರೂಪದಲ್ಲಿ, ವಂತಿಕೆಯ ರೂಪದಲ್ಲಿ, ಶ್ರೀಮಠದ ವ್ಯವಸಾಯ ಸೇವಾಸಂಘದಲ್ಲಿಂದ ಬರುತ್ತಿದ್ದ ಕೃಷಿ ಉತ್ಪನ್ನಗಳನ್ನು, ಭಕ್ತಾಧಿಗಳು ಕೊಡುವ ರಾಗಿ, ಜೋಳ, ತೆಂಗಿನಕಾಯಿ, ಬೇಳೆಕಾಳುಗಳು, ಮೆಣಸಿನಕಾಯಿಗಳನ್ನೆಲ್ಲಾ ಮಾರಾಟಮಾಡ ತೊಡಗಿದ್ದರು. ಆಗ ಪಾಪಕ್ಕ, ಆಡಳಿತಾಧಿ ಕಾರಿಗಳನ್ನು ಕರೆದು ವಿವೇಕ ಹೇಳಿದ್ದಳು. ಕಿರಿಯ ಸ್ವಾಮೀಜಿಗಳ ಎದುರು ಪ್ರಸ್ತಾಪ ಮಾಡಿದ್ದಳು.



ಭಕ್ತಾದಿಗಳು ತುಂಬು ಹೃದಯದಿಂದ ಶ್ರೀಮಠಕ್ಕೆ ಅರ್ಪಿಸುತ್ತಿರುವ ಪ್ರತಿಯೊಂದು ವಸ್ತುವೂ ಕೂಡ ಸದ್ಬಳಕೆ ಆಗಲೇಬೇಕು. ಅದು ದುರ್ಬಳಕೆಯಾದರೆ ಸತ್ತು ಸ್ವರ್ಗದಲ್ಲಿರುವ ಹಿರಿಯ ಸ್ವಾಮೀಜಿಗಳ ಆತ್ಮಕ್ಕೆ ಶಾಂತಿ ಸಿಕ್ಕುವುದಿಲ್ಲ ಎಂದೆಲ್ಲ ಹೇಳಿದ್ದಳು. ಆದರೆ ಕಿರಿಯ ಸ್ವಾಮಿಗಳು, ಪಾಪಕ್ಕನ ಮಾತುಗಳಿಗೆ ಕವಡೆ ಬೆಲೆಯನ್ನೂ ಕೊಡದೆ, ಅವಳ ಸಲಹೆಯ ಮಾತುಗಳನ್ನು ನಿರಾಕರಿಸಿದ್ದರು.

ಕಿರಿಯ ಸ್ವಾಮೀಜಿಗಳಿಗೇನು ಗೊತ್ತು? ಶ್ರೀಮಠದ ಆರಂಭ, ಶ್ರೀಮಠ ಬೆಳೆದುಬಂದ ದಾರಿ, ಶ್ರೀಮಠ ನಡಸಿಕೊಂಡು ಬಂದಂತ ಸಂಸ್ಕಾರಗಳು, ಶ್ರೀಮಠದ ನೀತಿ ನಿಯಮಾವಳಿಗಳು? ಎಲ್ಲಿಯೋ ಓದಿಕೊಂಡು, ತಿಂದುಂಡು ಬೆಳೆದವರಿಗೆ ಶ್ರೀಮಠದ ಆಚಾರ ವಿಚಾರಗಳು ಎಲ್ಲಿ ತಿಳಿಯಬೇಕು? 'ಹುಡುಗ ಬುದ್ಧಿ'ಯ ಅವರಿಗೆ, ಶ್ರೀಮಠದಲ್ಲಿ ದೀಕ್ಷೆ ಕೊಡಿಸಿ, ಹಿರಿಯ ಸ್ವಾಮಿಗಳ ತರುವಾಯ ಪಟ್ಟಾಭಿಷೇಕ ಮಾಡಿದ್ದು ಬಲವಂತದಿಂದಲೇ. ಶ್ರೀಮಠದಲ್ಲಿ ದೊರೆಯುವ ಆದಾಯವನ್ನು ದೋಚುವ ಉದ್ದೇಶದಿಂದಲೇ, ಆಡಳಿತ ಮಂಡಳಿಯವರು, ಹಿರಿಯ ಸ್ವಾಮೀಜಿಗಳ ಹತ್ತಿರ ಹಟಮಾಡಿ, ಅವರೇ ಆಗಬೇಕು ಎಂದು ತೀರ್ಮಾನ ತೆಗೆದುಕೊಂಡು, ಈ ಸ್ವಾಮೀಜಿಗಳಿಗೆ ದೀಕ್ಷೆ ಕೊಡಿಸಿದ್ದರು.

ಶ್ರೀಮಠ ನೊಂದವರಿಗೆ, ಬೆಂದವರಿಗೆ, ಆಶ್ರಯಧಾಮವಾಗಬೇಕು. ಯಾವುದೇ ಜಾತಿ, ಕುಲ, ಮಡಿವಂತಿಕೆಯ ಸೋಗಿನ ನೆರಳು ಅದಕ್ಕೆ ಬೀಳಬಾರದು ಎಂದು ನಂಬಿದ್ದ ಹಿರಿಯ ಸ್ವಾಮೀಜಿಗಳು, . ಹೊರಗಿನಿಂದ ಕಿರಿಯ ಸ್ವಾಮೀಜಿಗಳ ಕರೆತಂದು 'ದೀಕ್ಷೆ' ಕೊಡಬೇಕು ಎಂದು ಆಡಳಿತಮಂಡಳಿ ಕೇಳಿದಾಗ,ಸುತರಾಂ ಒಪ್ಪಿರಲಿಲ್ಲ. ಆಡಳಿತ ಮಂಡಳಿಯ ಕರೆಸಿ, ತನ್ನ ತರುವಾಯ ಶ್ರೀಮಠಕ್ಕೆ 'ಪಟ್ಟದಮರಿ'ಯಾಗಿ ಹೊರಗಿನಿಂದ ಕರೆತರುವುದು ಬೇಡ, ಶ್ರೀಮಠದಲ್ಲಿಯೇ ಅನೇಕ ಪ್ರಾಮಾಣಿಕ ಒಕ್ಕಲುಗಳಿವೆ. ಕಾಯಾ, ವಾಚಾ, ಮನಸಾ, ಸೇವೆ ಸಲ್ಲಿಸುತ್ತಾ ಬಂದ ಭಕ್ತಾದಿಗಳಿದ್ದಾರೆ. ಅಂತಹ ಕುಟುಂಬದಲ್ಲಿ ನಮಗೆ ಅರ್ಹನೆನಿಸಿದ 'ಮರಿ'ಯನ್ನು ಪಡೆದು 'ದೀಕ್ಷೆ' ಕೊಟ್ಟರೆ ಸೂಕ್ತ ಎಂದಿದ್ದರು. ಆದರೆ ಅವರ ಮಾತನ್ನು ಒಪ್ಪದೆ, ಆಡಳಿತಮಂಡಳಿ, ಈ ಸ್ವಾಮೀಜಿಯನ್ನು ಕರೆತಂದು ಕೂಡಿಸಿದ್ದರು. ಅದೇ ಕೊರಗಿನಲ್ಲಿ, ಉಪವಾಸವ್ರತ ಕೈಗೊಂಡು,ಕೊನೆಗೊಂದು ದಿನ ಶ್ರೀಮಠದಿಂದ ಬಹುದೂರ ಸರಿದಿದ್ದ ಹಿರಿಯ ಸ್ವಾಮೀಜಿಗಳು, ಸಾವು-ಬದುಕಿನ ನಡುವೆ ಹೋರಾಡುವಾಗ, ಪಾಪಕ್ಕನದೇ ಆರೈಕೆ. ಅವಳ ಉಪಚಾರ, ಧೈರ್ಯದ ಹಿತನುಡಿಗಳು ಸ್ವಾಮೀಜಿಗೆ ಬೇಕಾಗಿರಲಿಲ್ಲ. ಅದು ಅವರ ಉದ್ದೇಶ ಕೂಡ ಆಗಿರಲಿಲ್ಲ. 'ದುಷ್ಟಕೂಟದಲ್ಲಿ' ನನ್ನಂತವರ ಬದುಕು ತೀರ ಭಯಾನಕ ಎಂಬ ಅಸಹಾಯಕತೆ ಅವರ ಅನುಭವದ ಕಣ್ಣಿಗೆ ಕಂಡಂತಿತ್ತು. ಸ್ವಾಮೀಜಿ ಸಾವು-ಬದುಕಿನ ನಡುವೆ ಹೋರಾಡುತ್ತಲೇ, ಪಾಪಕ್ಕನ ಕೈಹಿಡಿದು, ಕರುಣಾಪೂರಿತ ದೃಷ್ಟಿಯಿಂದ ನೋಡಿದ್ದರು. ಅವರ ನೋಟದಲ್ಲಿ ಅಗಲಿಕೆಯ ಅನಿವಾರ್ಯತೆ ಇತ್ತು. ಪ್ರೀತಿಯಿತ್ತು. ಮಮತೆಯಿತ್ತು. ಈ ದುಷ್ಟರ ಕೂಟದಲ್ಲಿ ನಿಷ್ಕಲ್ಮಷವಾದ ನಿನ್ನನ್ನು ತಳ್ಳಿಹೋಗುತ್ತಿದ್ದೇನೆ. ರಾಕ್ಷಸರ ನಡುವೆ ಇದ್ದು, ಶ್ರೀಮಠವನ್ನು ಹೇಗೆ ಮೇಲೆಕ್ಕೆತ್ತುತ್ತೀಯ ತಾಯೀ... ಎಂಬಂತಹ ಆಂತರಿಕ ವೇದನೆಯಿತ್ತು. ಅವರ ಆ ಕೊನೆಯ ನೋಟಕ್ಕೆ ಪಾಪಕ್ಕ ಕಲ್ಲಾಗಿಹೋದಳು.

ಪಾಪಕ್ಕ ಕೋಣೆಯಲ್ಲಿ ಒಬ್ಬಳೆ ಕುಳಿತು ಹಿರಿಯ ಸ್ವಾಮೀಜಿಗಳ ಚಿತ್ರಪಟವನ್ನೇ ತದೇಕ ಚಿತ್ತದಿಂದ ನೋಡತೊಡಗಿದಳು. ಆಗಲೂ ಪಾಪಕ್ಕನ ಕಣ್ಣನಿಂದ ನೀರು ಧುಮ್ಮಿಕ್ಕುತ್ತಲೇ ಇತ್ತು. ಶ್ರೀಮಠಕ್ಕೆ ಪಾಪಕ್ಕ ಬಂದಂದಿನಿಂದಲೂ ಅವಳು ಕಣ್ಣೀರು ತಂದುಕೊಂಡವಳಲ್ಲ. ಹಳೆಯ



ಸರಕಿನ ಬಗ್ಗೆ ಚಿಂತಿಸಿದವಳಲ್ಲ. ಕಟ್ಟಿಕೊಂಡ ಗಂಡ ಕುಡಿದು ಬಂದು ಹೊಡೆದಾಗಲೂ, ಬಡಿದಾಗಲೂ, ಹೆತ್ತ ತಂದೆತಾಯಿಗಳು ಅವಳನ್ನು ಮದುವೆ ಮಾಡದೆ ಸತ್ತು ಸ್ವರ್ಗ ಸೇರಿದಾಗಲೂ, ಅವಳು ಧೈರ್ಯಗುಂದಿದವಳಲ್ಲ.

ಮದುವೆಯಾಗದಿದ್ದರೂ ಗಂಡಸಿನಂತೆ ದುಡಿದು ಬದುಕುವ ಛಲವಿತ್ತು ಅವಳಲ್ಲಿ. ಓದು ಬರಹದ ಜ್ಞಾನವಿಲ್ಲದಿದ್ದರೂ, ಕೂಲಿಮಾಡಿ ಬದುಕುತ್ತೇನೆ ಎಂಬ ಹಂಬಲವಿತ್ತು ಪಾಪಕ್ಕನಿಗೆ. ಆದರೆ ಅವಳು ವಿಧಿಲೀಲೆ ಮುಂದೆ ಶರಣಾಗಿ, ಮದುವೆಯಾಗಲು ಮುಂದೆ ಬಂದ ಹಳೆಯ ಸಂಬಂಧಿ ರಂಗಪ್ಪನಿಗೆ ಎರಡನೆಯ ಹೆಂಡತಿ ಯಾದಳು. ಆಗ ಪಾಪಕ್ಕನಿಗೆ ಮದುವೆ ಅನಿವಾರ್ಯವಾಗಿತ್ತು. ಪಾಪಕ್ಕ ಮದುವೆಯಾಗಿ, ಸಂಸಾರದ ನೊಗಕ್ಕೆ ಹೆಗಲು ಕೊಟ್ಟರೂ ಅವಳ ರೂಪ ಅವಳಿಗೆ ಶತೃವಾಗಿ ಕಾಡಿದ್ದಂತೂ ಸತ್ಯ. ಸಂಶಯದ ಪ್ರಾಣಿ ರಂಗಪ್ಪ, ಪಾಪಕ್ಕ ಹೋದಲ್ಲಿ ಬಂದಲ್ಲಿ ಅವಳಿಗರಿಯದೇ ಹಿಂಬಾಲಿಸುವುದು ಅವಳ ನಡೆ ನುಡಿಯಲ್ಲಿ, ವರ್ತನೆಯಲ್ಲಿ ತಪ್ಪು ಹುಡುಕಿ ದಿನದಿನವೂ ಬೇತಾಳನಂತೆ ಬೆಂಬಿಡದ ಹಿಂಸಿಸತೊಡಗಿದ.

ಅವಳನ್ನು ನಡತೆಗೆಟ್ಟವಳು, ಸೆರಗ್ಹಾಸು ವವಳು, ಮದುವೆಗ ಮುಂಚೆ ಬಿಟ್ಟ ಬಸವಿಯಂತೆ ಸುತ್ತಿದವಳು ಎಂದು ಪ್ರತಿದಿನ ಕುಡಿದು ಬಂದು ಹೊಡೆಯುತ್ತಿದ್ದ. ಹಾದರವೆಂದರೆ ಏನೆಂದು ತಿಳಿಯದ ಮುಗ್ಧ ಜೀವಿ, ಅವನಾಡುವ ಮಾತಿಗೆ, ಹೊಡೆತಕ್ಕೆ ಸಲುಗಿ ಹೋಗುತ್ತಿದ್ದಳು. ಮದುವೆಯಾದ ತಪ್ಪಿಗೆ ಗಂಡನನ್ನು ತಿದ್ದಲೂ ಹವಣಿಸಿ, ಸೋತು ಸುಣ್ಣವಾದಳು. ಪಾಪಕ್ಕನ ಯಾವ ಸಾಹಸವೂ ಫಲ ಕೊಡದಿದ್ದಾಗ, ಆ ನರಕವನ್ನು ತ್ಯಜಿಸಲು ತಯಾರಾಗಿ, ಒಂದು ದಿನ ನಡುರಾತ್ರಿಯಲ್ಲಿ, 'ಸಿದ್ಧಾರ್ಥನಂತೆ' ಎಲ್ಲ ತ್ಯಜಿಸಿ, ವೈರಾಗಿಣಿಯಂತೆ ಹೊರಬಿದ್ದು ಶ್ರೀಮಠಕ್ಕೆ ಬಂದಿದ್ದಳು.

ಪಾಪಕ್ಕ ಶ್ರೀಮಠಕ್ಕೆ ಬರುವ ಮುನ್ನ ಶ್ರೀಮಠ, ಕತ್ತಲೆಯ ಗರ್ಭದೊಳಡಗಿದ ಗವಿಯಂತಿತ್ತು. ಅಲ್ಲಿ ಹಿರಿಯ ಸ್ವಾಮೀಜಿಗಳು ನೊಂದವರ, ಬೆಂದವರ, ದಿಕ್ಕೆಟ್ಟ ಅನಾಥರ ಕಟ್ಟಿಕೊಂಡು ಬದುಕುತ್ತಿದ್ದರು. ಹತ್ತಾರು ಸ್ತರಗಳಿಂದ ಬಂದು ನೆಲೆಸಿದ್ದ ನಿವಾಸಿಗಳು, ಆತ್ಮಹತ್ಯೆಯೊಂದೇ ಉಳಿದಿರುವ ದಾರಿ ಎಂದುಕೊಂಡವರಾಗಿದ್ದರು. ಹಿರಿಯ ಸ್ವಾಮೀಜಿ ಗಳು ಅಂಥವರಿಗೆಲ್ಲ ಆಧ್ಯಾತ್ಮವನ್ನೂ, ತತ್ವ ಗಳನ್ನೂ, ಭಜನೆ-ಕೀರ್ತನೆಗಳನ್ನೂ, ಜೀವನದ ಹುಟ್ಟು, ಯೌವನ, ಮುಪ್ಪುಗಳನ್ನು ಸರಳ ಭಾಷೆಯಲ್ಲಿ ಹೇಳಿ, ಅವರುಗಳು ಆತ್ಮಹತ್ಯೆ ಯಂತಹ ಕ್ರೂರ ನಿರ್ಧಾರಗಳಿಂದ ಹೊರ ಬರುವಂತೆ ಉಪದೇಶ ಹೇಳಿ, ಪರಿವರ್ತನೆ ಗೊಳಿಸಿ, ನೋಡ್ರೋಯಪ್ಪಾ... ಈ ಜೀವ್ನಾ ಹುಲ್ಲುಬೀಜ ಅಲೋ... ಬದುಕಿ ಸಾಧಿಸ ಬೇಕ್ರೋ, ಸತ್ತು ಮಣ್ಣಾಗೊದೇ ಜೀವ್ನಾ ಅಲ್ರಪ್ಪಾ, ಸಾವು ಸಾಧನೆಯಲ್ಲ ಬದುಕಿ ಸಾಧಿಸೋ ಛಲವಿರಬೇಕ್ರೋ ಎಂದೆಲ್ಲ ಹೇಳಿ, ನೂರಾರು ಜನಗಳಿಗೆ ಬದುಕಿನ ಬುತ್ತಿ ಕಟ್ಟಿ ಕೊಡುತ್ತಿದ್ದರು.

"ನೋಡ್ರೋಯಪ್ಪಾ... ಹುಟ್ಟು ಅನಿರೀಕ್ಷಿತ, ಸಾವು ನಿರೀಕ್ಷಿತ, ಮಾನವ ಜನ್ಮದಲ್ಲಿ ಹುಟ್ಟಿದ ಮ್ಯಾಲಾ, ನಾವುಗಳು ಯಾರಿಗೂ ಹೊರೆಯಾಗ ಬಾರ್ದು, ಯಾರನ್ನೂ ನೋಯಿಸಬಾರ್ದು, ಎಲ್ಲದನ್ನೂ ಬಯಸಬಾರ್ದು, ತಮಗೆ ಸಿಕ್ಕಿದ



ಪ್ರಸಾದವನ್ನೇ ಮಹಾಪ್ರಸಾದ ಎಂದು ಸ್ವೀಕರಿಸಬೇಕು, ಪರರನ್ನು ಒಡಹುಟ್ಟಿದವರೆಂಬಂತೆ ಕಾಣಬೇಕು. ಪ್ರಾಣಿಗಳು, ಪಕ್ಷಿಗಳನ್ನು ಕೂಡ ಸಮಾನವಾಗಿ ಕಾಣಬೇಕು.'' ಸ್ವಾಮೀಜಿಗಳ ಆಶೀರ್ವಚನ ಕೇಳಿ, ಬದುಕಿ ಸಾಧಿಸಿದವರು ಶ್ರೀಮಠದ ಪಟ್ಟ ಶಿಷ್ಯರಾಗಿದ್ದರು.

ಪಾಪಕ್ಕನೂ ತನ್ನ ನೋವಿನ ಮೂಟೆಯನ್ನು ಬೆನ್ನಿಗೆ ನೇತಾಕಿಕೊಂಡು ಬಂದು ಶ್ರೀಮಠದ ಬಾಗಿಲಲ್ಲಿ ನಿಂತಾಗ, ಹಿರಿಯ ಸ್ವಾಮಿಗಳು ಅವಳನ್ನು ಆದರಪೂರ್ವಕವಾಗಿಯೇ ಬರಮಾಡಿಕೊಂಡಿದ್ದರು. ಪಾಪಕ್ಕನನ್ನು ನೋಡುತ್ತಲೇ, ಅವಳ ಮುಖದ ಮೇಲಿದ್ದ ಸಂಕಟವನ್ನೂ, ಜಿಗುಪ್ಸೆಯ ಭಾವನೆಯನ್ನೂ, ತಮ್ಮ ಅನುಭವದ ಸೂಕ್ಷ್ಮ ಸಂವೇದನೆಯಿಂದಲೇ ಮಾಪನ ಮಾಡಿ, ಪ್ರೀತಿಯಿಂದ 'ಬಾ ತಾಯಿ, ಬಾ ಒಳಗೆ' ಎಂದು ಕರುಣಾಪೂರಿತವಾಗಿ ಕರೆದಿದ್ದರು. ಅವರ ಕರೆಯಲ್ಲಿ ಮಮತೆ ಇತ್ತು. ಈ ಕರೆಗೆ, ಪಾಪಕ್ಕಗೆ ದುಃಖ ಒತ್ತರಿಸಿಕೊಂಡು ಬಂದು, ಸ್ವಾಮಿಜೀಯ ಪಾದದ ಮೇಲೆ ಬಿದ್ದು ಗೊಳಗೊಳನೆ ಅತ್ತಿದ್ದಳು. ತನಗೆ ಇಲ್ಲಿರಲು ಆಶ್ರಯ ಕೊಡಿ, ನಿಮ್ಮ ಸೇವೆ ಮಾಡಲು ಅವಕಾಶ ಕೊಡಿ ಎಂದು ಮುಗ್ಧಳಾಗಿ ಪ್ರಾರ್ಥಿಸಿದ್ದಳು.

ಪಾಪಕ್ಕನ ದುಗುಡ ದುಮ್ಮಾನವನ್ನು ಅವಳ ಕೋರಿಕೆಯನ್ನು ಆಲಿಸಿದ ಶ್ರೀಗಳು, 'ಅವ್ವಾ... ನಾನು ಕೂಡ ಜೀವನದ ವ್ಯವಸ್ಥೆಗಳಿಗೆ, ಸಾಮಾಜಿಕ ತುಳಿತಕ್ಕೆ ಜರ್ಜರಿತನಾಗಿ ದೇಶ ಪರ್ಯಟನೆ ಹೊರಟೆ, ಕಾಶಿ, ರಾಮೇಶ್ವರ, ಗಯಾ, ಎಲ್ಲಾ ಸುತ್ತಾಡಿದೆ. ಮನಸ್ಸಿಗೆ ಶಾಂತಿ ಸಿಗಲಿಲ್ಲ. ಉತ್ತರದಿಂದ ದಕ್ಷಿಣಕ್ಕೆ ಭಿಕ್ಷಾಟನೆ ಮಾಡಿಕೊಂಡು ಇಲ್ಲಿಗೆ ಬಂದೆ. ಈ ಪಾಳು ಬಿದ್ದ ಗುಡಿಯನ್ನು ಕಂಡೆ. ಸುತ್ತ ಹಳ್ಳಿಗಳಲ್ಲಿ ಭಿಕ್ಷಾಟನೆ ಮಾಡಿಕೊಂಡು ಬಂದು ಇಲ್ಲಿ ಮಲಗುತ್ತಿದ್ದೆ. ನಿರ್ಜನ ಪ್ರದೇಶದಲ್ಲಿ ಗುಡಿ ಇದ್ದುದ್ದರಿಂದ ಯಾರ ಉಪದ್ರವಗಳಿರಲಿಲ್ಲ. ಅದು ನನಗೆ ಒಂದು ವರವಾಗಿಯೇ ಪರಿಣಮಿಸಿತ್ತು. ಹಾಗಾಗಿ ಇಲ್ಲಿಯೇ ನಿಂತುಬಿಟ್ಟೆ. ಮನಸ್ಸಿಗೆ ಶಾಂತಿ ಸಮಾಧಾನ ಸಿಕ್ಕಿತು, ಹರಿದು ಹಂಚಿ ಚೂರು ಚೂರಾದ ಮನಸ್ಸು ಇಲ್ಲಿ ಸ್ತಿಮಿತಕ್ಕೆ ಬಂತು.

ಈ ಪಾಳು ಗುಡಿ ಮಳೆಗೆ ಸೋರುತ್ತಿತ್ತು. ಚಳಿಗೆ ತಲ್ಲಣಿಸುತ್ತಿತ್ತು. ಬಿಸಿಲಿಗೆ ದಾಹ ತರುತ್ತಿತ್ತು. ಕಾಲದ ವೈಪರಿತ್ಯಗಳಿಗೆ ಅನುಗುಣವಾಗಿ, ಮಣ್ಣು ಕಲ್ಲುಗಳಿಂದ ದುರಸ್ತಿ ಮಾಡಿಕೊಂಡೆ. ಬದುಕಿಗಾಗಿ ಹೋರಾಟಮಾಡಬೇಕಲ್ಲ ತಾಯಿ, ಅದಕ್ಕೆ. ಸಮಾಜದಲ್ಲಿ ನೊಂದವರು, ಬೆಂದವರು, ದೀನರು, ದಲಿತರು, ಶೋಷಿತರು ಆಗಾಗ ಬಂದು ನನ್ನಲ್ಲಿ ಮಾತನಾಡುತ್ತಿದ್ದರು. ಅವರುಗಳಿಗೆ ನನಗೆ ತಿಳಿದ ನಾಲ್ಕು ಮಾತುಗಳ ಹೇಳುತ್ತಿದ್ದೆ. ನನಗೆ ತಿಳಿದ ನಾಟಿ, ಮೂಲಿಕೆಗಳ ಅವರಿಗೆ ಕೊಡುತ್ತಿದ್ದೆ. ನನ್ನ ಮೂಲಿಕೆಗಳಲ್ಲಿ, ನನ್ನ

ಮಾತುಗಳಲ್ಲಿ ಸತ್ಯಾಂಶವಿತ್ತೆಂದು ಕಾಣುತ್ತದೆ. ಜನಗಳು ಬಂದುಹೋಗುವ, ನನ್ನೊಂದಿಗೆ ಬೆರೆಯುವ ರೂಢಿ ಬೆಳೆಸಿಕೊಂಡರು. ನನ್ನನ್ನು ಸ್ವಾಮೀ ಎಂದರು. ನನಗೆ ಬೇಡವಾಗಿದ್ದರೂ ಕಾವಿಬಟ್ಟೆ ತೊಡಿಸಿದರು. ಗುಡಿಯನ್ನು ಅಚ್ಚು ಕಟ್ಟು ಮಾಡಿ, ನನ್ನೊಂದಿಗೆಯೇ ಇರತೊಡ ಗಿದರು. ಈಗ ಹೇಳು ತಾಯಿ, ಇಂತಹ ನಾನು, ನಿನಗೆ ಆಶ್ರಯ ಕೊಟ್ಟು, ನಿನ್ನಿಂದ ಸೇವೆ ಮಾಡಿಸಿಕೊಳ್ಳಲು ಅರ್ಹನೆ? ಏನೋ ಆ ಭಗವಂತ ನಿನ್ನನ್ನು ಇಲ್ಲಿ ಬಿಡಬೇಕೆಂದಿದ್ದರೆ ಬೇಡವೆನ್ನಲು ನಾನಾರು ತಾಯಿ?' ಎಂದಾಗ, ಪಾಪಕ್ಕ ಅಲ್ಲಿಯೇ ಬಿಡಾರಹೂಡಿದಳು.

ಪಾಪಕ್ಕ ಶ್ರೀಮಠಕ್ಕೆ ಬಂದು ಕೈಕಟ್ಟಿ ಕೂರ ಲಿಲ್ಲ. ಶ್ರೀಮಠದ ಒಕ್ಕಲುಗಳನ್ನು ನಿವಾಸಿಗಳನ್ನು ಸಂಘಟಿಸಿ, ಶ್ರೀಮಠಕ್ಕಾಗಿ ದುಡಿಯತೊಡ ಗಿದ್ದಳು. ಉತ್ಸಾಹಕ್ಕೆ, ಪಾಪಕ್ಕನ ನಿಸ್ವಾರ್ಥ ಸೇವೆಗೆ, ಸದ್ಭಕ್ತರು ಧಾರಾಳವಾಗಿ ವಂತಿಗೆಗಳ ಕೊಟ್ಟರು, ಸದ್ಭಕ್ತರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚತೊಡಗಿತು. ಆದಾಯವೂ ಹೆಚ್ಚತೊಡಗಿತು. ಶ್ರೀಮಠದ ಕಟ್ಟಡ, ವಿಹಾರ ವನ, ತಪೋವನ, ಪ್ರಾಣಿ ಸಂಗ್ರಹಾಲಯ, ಭೋಜನಾಲಯ, ವಿದ್ಯಾರ್ಥಿ ನಿಲಯ, ಅನಾಥ ಸೇವಾಶ್ರಮ, ವೃದ್ಧಾಶ್ರಮ, ಭಜನಾ ಮಂಡಳಿಗಳು ಪ್ರಾರಂಭ ವಾದವು. ಶ್ರೀಮಠದ ಕೀರ್ತಿ ನಾಡಿನಾದ್ಯಂತ ಪ್ರಸಾರವಾಯಿತು. ಮಂತ್ರಿಗಳು, ಮಹೋ ದಯರು ಶ್ರೀಮಠಕ್ಕೆ ಬರಲಾರಂಭಿಸಿದರು. ಸ್ವಾಮೀಜಿಗಳ ಆಶೀರ್ವಾದ, ಪಡೆಯಲಾರಂಭಿಸಿ ದರು. ಶ್ರೀಮಠದ ಹೆಸರಿನಲ್ಲಿ ಹತ್ತಾರು ಶಾಲಾ ಕಾಲೇಜುಗಳು, ಐದು ನೂರು ಎಕರೆ ವ್ಯವಸಾಯ ಸಹಕಾರ ಸಂಘಕ್ಕೆ ಆಡಳಿತ ಸರ್ಕಾರ ಮಂಜೂರು ಮಾಡಿತ್ತು. ಶ್ರೀಮಠಕ್ಕೆ ನಾನಾ ಮೂಲಗಳಿಂದ ಆದಾಯ ಹರಿದು ಬರಲಾರಂಭಿಸಿತ್ತು.

ಆದಾಯ ಹೆಚ್ಚಾದಂತೆ, ಶ್ರೀಮಠಕ್ಕೆ ಆಡಳಿತ ಮಂಡಳಿ ಪೋಷಕ ಮಂಡಳಿಗಳು, ಮಹಾ ಪೋಷಕ ಮಂಡಳಿಗಳು ಹುಟ್ಟಿಕೊಂಡವು. ಹಂತಹಂತವಾಗಿ ಶ್ರೀಮಠದ ಅಧಿಕಾರವನ್ನು ಕೈಗೆ ತೆಗೆದುಕೊಂಡವು. ಹಿರಿಯ ಸ್ವಾಮೀಜಿಗಳ ಗಮನಕ್ಕೆ ತರದೆ, ನಾನಾ ಚಟುವಟಿಕೆಗಳ ಹಮ್ಮಿಕೊಂಡವು. ಕ್ರಮೇಣ, ಹಿರಿಯ ಸ್ವಾಮೀಜಿಗಳನ್ನೆ ನಿಯಂತ್ರಿಸಿ, ಆಡಳಿತ ನಡೆಸುವ ಮಟ್ಟಕ್ಕೆ ಬೆಳೆದುನಿಂತವು. ಸ್ವಾಮೀಜಿಗಳ ಒಳ್ಳೆತನವನ್ನೇ ದೌರ್ಬಲ್ಯವೆಂದು ಭ್ರಮಿಸಿ, ಅವರದೇ ಆದ ಆಡಳಿತ ಸೂತ್ರವನ್ನು ರೂಪಿಸಿಕೊಂಡವು. ಶ್ರೀಮಠದ ಹೆಸರಿನಲ್ಲಿ ಬ್ಯಾಂಕಿನ ಖಾತೆಯಲ್ಲಿದ್ದ ಹಣವನ್ನು ಮನ ಬಂದಂತೆ ಖರ್ಚುಮಾಡಿಕೊಂಡು, ಭೋಗ ಜೀವನ ನಡೆಸತೊಡಗಿದವು. ಇದೆಲ್ಲವನ್ನು ಕಂಡಂತಹ ಪಾಪಕ್ಕನಾಗಲೀ, ಹಿರಿಯ ಸ್ವಾಮೀಜಿಗಳಾಗಲಿ ಕಂಡೂಕಾಣದಂತೆ, ತಿಳಿದೂ



ತಿಳಿಯದಂತೆ ಇರತೊಡಗಿದ್ದರು. ಬಂಡಾಯದ ಹೊಗೆ ಎದ್ದು ಶ್ರೀಮಠದ ಹೆಸರು ಕೆಡದಿರಲಿ, ಎಂದು ಉಸಿರು ಬಿಗಿಹಿಡಿದುಕೊಂಡರು.

ಪಾಪಕ್ಕ ಶ್ರೀಮಠದ ಕೋಣೆಯಲ್ಲಿ, ಹಿರಿಯ ಸ್ವಾಮೀಜಿಗಳ ಪಟದೆದುರು ಕುಳಿತು ಹಳೆಯದನ್ನೆಲ್ಲಾ ನೆನೆದುಕೊಂಡಳು. ಅವಳಿಗೆ ಶ್ರೀಮಠವೇ ಬಂಧನದಂತೆ ಕಂಡಿತು. ತಾನೇ ಮುಂದೆ ನಿಂತು ಕಟ್ಟಿ ಬೆಳಸಿದ ಶ್ರೀಮಠದಲ್ಲಿ, ತನ್ನನ್ನೇ ಬಾಯಿ ಮುಚ್ಚಿಸಿ ಕಾರುಬಾರು ನಡೆಸುತ್ತಿದ್ದಾರೆ. ಆಡಳಿತದ ಹೆಸರಿನಲ್ಲಿ ಜೀವ ಬೆದರಿಕೆ ಕೊಡುತ್ತಿದ್ದಾರೆ, ಇಂತಹ ಸ್ಥಿತಿಯಲ್ಲಿ ತಾನಿಲ್ಲಿರಲೇ, ಇಲ್ಲಾ ದೂರ, ಬಹುದೂರ ಹೋಗಿಬಿಡಲೆ...? ಎಂದುಕೊಂಡಾಗ ಅವಳಿಗೆ, ಬದುಕು ಕ್ರೂರವಾಗಿ, ನಿಷ್ಠೂರವಾಗಿ ಕಂಡಿತ್ತು. ಹೇಗಾದರೂ ಮಾಡಿ ಶ್ರೀಮಠಕ್ಕೆ ಹಿಡಿದ ಗ್ರಹಣ ಬಿಡಿಸಬೇಕು, ಎಂದುಕೊಳ್ಳುವಾಗಲೇ ತಿಮ್ಮಕ್ಕ, ಅವ್ವಾರೇ, ಎಂದು ಕರೆಯುತ್ತ ಬಂದಾಗ ಬೆಚ್ಚಿಬಿದ್ದು ನೋಡಿದ್ದಳು.

ತಿಮ್ಮಕ್ಕ ಅವ್ವಾರೇ ಎಂದು ಕರೆದದ್ದು ಪಾಪಕ್ಕನ ಎದೆಯಾಂತರಂಗದಲ್ಲಿ ಮಾರ್ದನಿಸತೊಡಗಿತ್ತು. ಹಿರಿಯ ಸ್ವಾಮೀಜಿಗಳು ಪಾಪಕ್ಕನನ್ನು ಅವ್ವಾ, ಎಂದು ಕರೆಯುತ್ತಿದ್ದರಿಂದ, ಶ್ರೀಮಠದ ಹಿರಿಯರೂ, ಕಿರಿಯರೂ ಅವಳನ್ನು ಅವ್ವಾರೇ ಎಂದು ಕರೆಯುತ್ತಿದ್ದರು. ಆದರೆ ತಿಮ್ಮಕ್ಕ ವಯಸ್ಸಿನಲ್ಲಿ ಪಾಪಕ್ಕನ ತಾಯಿಯಂತಿದ್ದಳು. ಅಂತವಳ ಬಾಯಲ್ಲಿಯೂ 'ಅವ್ವಾರೇ' ಎಂದು ಕರೆಸಿಕೊಳ್ಳಲು ಪಾಪಕ್ಕನಿಗೆ ಮನಸಾಕ್ಷಿ ಒಪ್ಪುತ್ತಿರಲಿಲ್ಲ. ಆದರೂ ಸಂಪ್ರದಾಯದಂತೆ ಕರೆಯಿಸಿಕೊಳ್ಳುತ್ತಿದ್ದಳು. ತಿಮ್ಮಕ್ಕನಲ್ಲಿ ತಾಯಿಯ ಅಕ್ಕರೆ, ಅಭಿಮಾನ, ಸಾಂತ್ವನ, ಆರೈಕೆ ಎಲ್ಲಾ ಅನುಭವಿಸಿದ್ದಳು. ಪಾಪಕ್ಕನಿಗಿಂತ ಮೊದಲೇ ಶ್ರೀಮಠಕ್ಕೆ ಸೇವೆಸಲ್ಲಿಸುತ್ತ ಬಂದ ನಿಷ್ಕಳಂಕ ಮುಗ್ಧಜೀವಿ ತಿಮ್ಮಕ್ಕ.

ತಿಮ್ಮಕ್ಕನ ಕರೆಗೆ ಬೆದರುಗಣ್ಣಿನಿಂದ ನೋಡಿದ ಪಾಪಕ್ಕನಿಗೆ, ತಿಮ್ಮಕ್ಕ ಕಿವಿಮಾತಿನಲ್ಲಿ ಹೇಳಿದ್ದಳು, 'ಅವ್ವಾರೇ, ಹಳೆಯ ಒಕ್ಕಲುಗಳು ನಿಮ್ಮ ದರ್ಶನಕ್ಕೆ ಬಂದಿದ್ದಾರೆ ತಾಯಿ, ಅವ್ವಾರಿಗೆ ಸ್ವಾಸ್ಥ್ಯವಿಲ್ಲ, ಅವರು ಮಾತನಾಡುವುದಿಲ್ಲ ಎಂದರೂ ಕೇಳಲೊಲ್ಲರು ಅವರು' ಎಂದು ಮಾತು ನಿಲ್ಲಿಸಿದಾಗ, ಪಾಪಕ್ಕ ಅವರನ್ನು ಒಳಗೆ ಕಳಿಸುವಂತೆ ಸಂಜ್ಞೆ ಮಾಡಿದ್ದಳು. ಒಳಗೆ ಬಂದು, ಪಾದಕ್ಕೆ ಬಿದ್ದು, ವಿನಯದಿಂದ ಕೈಕಟ್ಟಿ ನಿಂತ ಒಕ್ಕಲುಗಳನ್ನು ನೋಡಿ ಎದೆತುಂಬಿ ಬಂದಿತ್ತು ಪಾಪಕ್ಕನಿಗೆ.

'ಅವ್ವಾರೇ... ನೀವು ಅಳೋದು ಬ್ಯಾಡ ತಾಯಿ, ನೀವು ಅತ್ರೆ ನಮ್ಮ ನೆತ್ರೆಲ್ಲಾ ಕುದಿತದೆ, ನಿಮ್ಮ ನೋವು ಸಂಗಟ ಏನೊಂತ ನಮಗೆ ಗೊತ್ತೈತ್ರವ್ವ. ಕೊಬ್ಬಿದ ಕೋಣಗಳ ಸೆರ್ಬೀಸುಲಿಯೋ ಕಾಲ ಹತ್ರ ಬಂದೈತ್ರವ್ವಾ, ನಾವು ಮಾಡೋ ಕಾರ್ಯದಾಗ ನಮಗೆ ಜಯ ದೊರಿಲೀ ಅಂತ ಆಶೀರ್ವಾದ ಪಡೆದು, ನಿಮ್ಮೊಪ್ಪಿಗೆ ಪಡೆಯೋಕೆ ಬಂದೀವಿ' ಎಂದು ನೊಂದು ಬೆಂದ ಒಕ್ಕಲುಗಳು ಬಿರುನುಡಿಗಳ ಉಲಿದಾಗ, ಪಾಪಕ್ಕ ಸಂಕಟದಿಂದಲೇ, ಒಪ್ಪಿಗೆ ನೀಡಿದಂತೆ ತಲೆ, ಕೈಯಾಡಿಸಿ ಬೀಳ್ಕೊಟ್ಟಳು. ಎಲ್ಲರೂ ಹೋದದ್ದೇ, ತಿಮ್ಮಕ್ಕನನ್ನು ತಬ್ಬಿಹಿಡಿದು ಮಗುವಿನಂತೆ ಅತ್ತಳು. ತಿಮ್ಮಕ್ಕ ''ಅವ್ವಾ, ಇಷ್ಟು ದಿನಕ್ಕೆ ಒಳ್ಳೆಯ ನಿರ್ಧಾರ ತೆಗೆದುಕೊಂಡೆ ತಾಯಿ'' ಎಂದಳು.

ಇದಾಗಿ ವಾರ ಕಳೆಯಲಿಲ್ಲ; ಬಂಡಾಯದ ಕಪ್ಪು ಬಾವುಟ ತಲೆ ಎತ್ತಿತ್ತು. ಈ ಬಂಡಾಯದಲ್ಲಿ ಶ್ರೀಮಠದ ಸದ್ಭಕ್ತರು, ಶ್ರೀಮಠದ ಒಕ್ಕಲುಗಳು, ಅಕ್ಕಪಕ್ಕದ ಹಳ್ಳಿಗಳ ರೈತರೂ ಪಾಲ್ಗೊಂಡರು. ಚಳವಳಿಗಾರರ ಕ್ಷಿಪ್ರ ನೇತಾರ ಹಂಡಿಸಿದ್ದಯ್ಯ ವಸ್ತುಸ್ಥಿತಿಯನ್ನು, ಆಡಳಿತ ವ್ಯವಸ್ಥೆಯನ್ನು, ಶ್ರೀಮಠದಲ್ಲಿ ಕಿರಿಯ ಸ್ವಾಮೀಜಿಗಳು ನಡೆಸುವ ವ್ಯಭಿಚಾರಗಳನ್ನು ಸಂಘಸಂಸ್ಥೆಯವರಿಗೆ

ನಿರೂಪಿಸಿ, ಈ ದುರಾಡಳಿತವಿರುವ ಶ್ರೀಗಳ ವಿರುದ್ಧ ಹಮ್ಮಿಕೊಂಡ ಕ್ರಾಂತಿಗೆ ನಮಗೆ ಬೆಂಬಲ ಕೊಡಿ ಎಂದು ಕೇಳಿಕೊಂಡ. ಹಂಡಿಸಿದ್ದಯ್ಯನ ಸಿದ್ಧಾಂತಕ್ಕೆ ರೈತಸಂಘಗಳೂ, ಭಜನಾ ಮಂಡಳಿಗಳೂ, ದಲಿತ ಸಂಘಗಳೂ ಯುವಕ-ಯುವತಿ ಸಂಘಗಳು ಸಂಪೂರ್ಣ ಬೆಂಬಲ ಸೂಚಿಸಿದವು. ಶ್ರೀಗಳ ಕೀಳು ಪ್ರವೃತ್ತಿಯನ್ನು, ಆಡಳಿತ ಮಂಡಳಿಯ ತಲೆಹಿಡುಕತನವನ್ನು ಕರ್ಣ ಕಠೋರ ಮಾತುಗಳಿಂದ ಕೂಗಿದರು. ಅವ ಹೇಳನಕಾರಿಯಾಗಿ ನಿಂದಿಸಿದರು. ಧಿಕ್ಕಾರವನ್ನು ಕೂಗುತ್ತ, ತಾಲ್ಲೋಕ್ ಕಛೇರಿಗೆ ಮನವಿ ಸಲ್ಲಿಸಿದರು. ರಕ್ಷಣೆಗೆ ಪೊಲೀಸ್ ಕೊಡುವಂತೆ ಆಗ್ರಹಿಸಿದರು.

ಹಂಡಿಸಿದ್ದಯ್ಯ, ಸಂಘಸಂಸ್ಥೆಯರ ನೆರವಿನಿಂದ, ಆಡಳಿತಾಧಿಕಾರಿಗಳನ್ನೂ, ಕಿರಿಯ ಸ್ವಾಮೀಜಿಗಳನ್ನೂ ಶ್ರೀಮಠದಲ್ಲಿ ಕೂಡಿ, ಬೀಗ ಜಡಿದನು. ಈ ಸುದ್ದಿ ಹಳ್ಳಿಹಳ್ಳಿಗಳಿಗೆ, ತಾಲ್ಲೋಕು, ಜಿಲ್ಲೆ, ರಾಜ್ಯದಾದ್ಯಂತ ಬೆಳಗಾಗುವುದರೊಳಗೆ ಹರಡಿತು, ಪೊಲೀಸರು ಆಡಳಿತಾಧಿಕಾರಿಯನ್ನು, ಕಿರಿಯ ಸ್ವಾಮಿಗಳನ್ನು ಬಂಧಿಸಿದರು. ಶ್ರೀಮಠದಲ್ಲಿ ನಡೆದ ವ್ಯಭಿಚಾರಗಳನ್ನು ವಿಚಾರಣೆ ನಡೆಸಿ, ಶ್ರೀಮಠದ ಆಡಳಿತಕ್ಕೆ ಸಂಬಂಧಪಟ್ಟ ದಾಖಲೆ ಪತ್ರಗಳನ್ನು, ಆಯವ್ಯಯದ ಕಡತಗಳನ್ನು ಸರ್ಕಾರ ವಶಪಡಿಸಿಕೊಂಡು ತನಿಖೆ ಆರಂಭಿಸಿತು. ನ್ಯಾಯಾಲಯಕ್ಕೆ ಹಂಡಿಸಿದ್ದಯ್ಯ, ಕುಂದೂರು ಮಲ್ಲಪ್ಪ, ಕರ್‍ಯಾಂಗಜ್ಜರ ಕರಿಯಣ್ಣ, ಬಂಗಿತಿಮ್ಮಣ್ಣ, ಕುರಿನೀಲಪ್ಪ ಇವರು ಸಾಕ್ಷಿ, ಆಧಾರಗಳನ್ನು ಒದಗಿಸಿದರು. ಪ್ರತಿಯೊಂದು ಪುರಾವೆಯನ್ನೂ ಕೂಲಂಕಷವಾಗಿ ಪರಿಶೀಲಿಸಿದ ನ್ಯಾಯಾಲಯ, ಪೀಠಾಧೀಶರು ಎಸಗಿದ ಅತ್ಯಾಚಾರಕ್ಕೆ ಜೀವಾವಧಿ ಶಿಕ್ಷೆ ವಿಧಿಸಿತು. ಆಡಳಿತಾಧಿಕಾರಿಗೆ ಹತ್ತು ಸಾವಿರ ದಂಡ, ಹತ್ತು ವರ್ಷ ಜೈಲುವಾಸ ಎಂದು ತೀರ್ಪಿಟ್ಟಿತು. ಶ್ರೀಮಠದ ಉಸ್ತುವಾರಿಯನ್ನು ಉತ್ತರಾಧಿಕಾರಿಯ ನೇಮಿಸುವವರೆಗೆ ಪಾಪಕ್ಕನೇ ನೋಡಿಕೊಳ್ಳುವಂತೆ, ಮನವಿದಾರರ ಕೋರಿಕೆ ಮೇರೆಗೆ ಆದೇಶಿಸಿತ್ತು.

ಶ್ರೀಮಠಕ್ಕೆ ವಕ್ಕರಿಸಿಕೊಂಡ ಗ್ರಹಣ ಬಿಡುಗಡೆಯಾದ ಈ ಘಟನೆಯನ್ನು, ಕೋರ್ಟಿನ ತೀರ್ಪನ್ನು ಪಾಪಕ್ಕ ಒಂದು ಕನಸಿನಂತೆ ಕಂಡಳು. ಹಿರಿಯ ಸ್ವಾಮೀಜಿಗಳ ಚಿತ್ರಪಟದೆದುರು ಕುಳಿತು, ಮುಂದೆ ಶ್ರೀಮಠಕ್ಕೆ ಸನ್ಮಾರ್ಗವನ್ನು ತೋರಿಸು ಎಂದು ಕಣ್ಮುಚ್ಚಿ ಹಾಗೆಯೇ ಕುಳಿತಳು. ಅವಳ ಮುಖದಲ್ಲಿ ಚೈತನ್ಯದ ಭಾವನೆಗಳು ಪಡಿಮೂಡಿದಂತಿದ್ದವು.



ಆಗಲೂ ಪಾಪಕ್ಕನ ಕಣ್ಣಿನಿಂದ
ನೀರು ಧುಮ್ಮಿಕ್ಕುತ್ತಲೇ ಇತ್ತು.

ಕೆ. ಶರಪ್ಪಸ್ವಾಮಿ ಬಪ್ಪರಶೆಟ್ಟಿ







ಕುಂ. ವೀರಭದ್ರಪ್ಪ

## ಭಲಾರೇ ವಿಚಿತ್ರಂ

# ಸಂತವಿಟ್ಟನು ಜಠರದಲಿ

ನೋಡಿದರೆ ಸಾಕು, ಎದೆ ಧಸಕ್ ಎನ್ನುವಂಥ ಮನುಷ್ಯನನ್ನು ಇಲ್ಲಿ ಪ್ರಸ್ತಾಪಿಸುತ್ತಿರುವೆನು. ಪಂಪನ ಹಿಡಿಂಬ, ರಾಘವಾಂಕನ ವೀರಬಾಹುಕ, ಕುಮಾರವ್ಯಾಸನ ಬಕಾಸುರ, ಇವರೇ ಮೊದಲಾದ ಪುರಾಣ ಪ್ರಸಿದ್ಧ ರಕ್ಕಸರನ್ನು ಈತನ ಮುಂದೆ ನೀವಾಳಿಸಿ ಎಸೆಯಬೇಕು. ಭೀಭತ್ಸ ವರ್ಣನೆಗೂ ನಿಲುಕದ ಪರ್ಸನಾಲಿಟಿ. ಆ ಹಳ್ಳಿಯಲ್ಲಿ ಮಾಸ್ತರಿಕೆ ಆರಂಭಿಸಿದ ಕೆಲವೇ ದಿನಗಳಲ್ಲಿ, ನಾನಾತನನ್ನು ದೂರದಿಂದ ನೋಡಿದೆ. ಕೊಡಚಾದ್ರಿ ಬೆಟ್ಟದ ಮಾದರಿಯೊಂದು ಹಿಂಗ ಬಂದ ಹಂಗ ಹೋದಂತೆ ಭಾಸವಾಯಿತು. ತೀರ ಹತ್ತಿರದಿಂದ ನೋಡಬೇಕು, ಆ ಪುರುಷ ಸೂಕ್ತನನ್ನು ಪರಿಚಯ ಮಾಡಿಕೊಳ್ಳಬೇಕೆಂದು ಅನೇಕ ವಿಧವಾಗಿ ಪ್ರಯತ್ನಿಸಿದೆ. ಯಾರನ್ನಾದರೂ ಕೇಳಿದರೆ, 'ಓಹ್ ಅವ್ನಾ' ಎಂದು ನಗುತ್ತಿದ್ದರು. 'ಅವ್ನ ಪರಿಚಯ ಮಾಡ್ಕೊಳ್ಳೋದು ಒಂದೆ, ಬಕಾಸೂರ್‍ನೊಂದಿಗೆ ನಂಟಸ್ತನ ಬೈಳಸೋದು ಒಂದೆ' ಎಂದೋ, 'ನೀವ್ ಹಾಳಾಗಬೇಕನ್ನಂಗಿದ್ರೆ ಆ ಸಣಮುಂಡೇದ್ನ ಹತ್ರ ಬುಟ್ಕಳಿ' ಎಂದೋ ಅಂದುಬಿಡುತ್ತಿದ್ದರು. ನನ್ನೆದೆಯೊಳಗೆ ರೊಮಾಂಟಿಕ್ ಭಾವನೆಗಳನ್ನು ಹೊಡೆದೋಡಿಸಿ ಆತನ ನೆನಪನ್ನು ಸ್ಥಿರಗೊಳಿಸಿದೆ. ಆತನ ಕೂಳು, ನೀರು ಕುರಿತು, ಕೊಲೆಗಿಲೆ ಇತ್ಯಾದಿ ಕುರಿತು ಟಿನ್‌ಗಟ್ಟಲೆ ಯೋಚಿಸಿ ಯೋಚಿಸೀ ಸುಸ್ತಾದೆ. ನನ್ನ ಒದ್ದಾಟ ಗಮನಿಸಿ, ರವುಡೆಮನೆ ಲಚುಮಿರೆಡ್ಡಿಯೇ ಆತನ ಕುರಿತು ವಿವರ ಸರಬರಾಜು ಮಾಡಿದ.

ಇಷ್ಟಗಲ, ಅಷ್ಟುದ್ದ ಇರುವ ಆತನ ಹೆಸರು ಕೂಳುಬಾಕ ಬಾಷಾಸಾಬು, ಗಿದ್ದುನಗಟ್ಟಲೆ ಉಂಬುತ್ತಿದ್ದ ಮಾಬಿನ ಏಕಮಾತ್ರ ಪುತ್ರನಾದ ಆತನಿಗೋ ಎಂಟೊಂಬತ್ತು ಗಂಡುಮಕ್ಕಳು, ಏಳೆಂಟು ಮಂದಿ ಹೆಣ್ಣುಮಕ್ಕಳು. ಕ್ಯಾಲಿಕುಲೇಟರ್ ತಲೆ ತಿರುಗಿಸುವಷ್ಟು ಮೊಮ್ಮಕ್ಕು, ಮರಿ, ಗಿರಿ ಮೊಮ್ಮಕ್ಕು... ಆತಗೆ ಕೂಳು ಬೇಯಿಸಿ ಹಾಕಲು ರೋಸಿಯೇ, ಬಿಟ್ಟು ಓಡಿರುವ ಮುವ್ವರು ಹೆಂಡರು ಈಗೆಲ್ಲಿಹರೋ ತಿಳಿಯದು! ಈಗ, ಹತ್ತಿರ ಹತ್ತಿರ ಎಪ್ಪತ್ತು ವರ್ಷದ ಆತನನ್ನು ಮಕ್ಕಳು ಸೇರಿದರೆ, ಸೊಸೆಯಂದಿರು ಸೇರುವುದಿಲ್ಲ, ಸೊಸೆಯಂದಿರು ಸೇರಿದರೆ ಮಕ್ಕಳು ಸೇರುತ್ತಿಲ್ಲ. ನೂರಾರು ಮಾತುಗಳನ್ನು ಅಂದರೂ

ಅನ್ನಿಸಿಕೋತಾ, ಎಂಟು ಹತ್ತು ಮನೆಗಳಲ್ಲಿ ಒಮ್ಮೆಗೆ ಊಟ ಮಾಡುತ್ತ, ತನ್ನ ಜಠರವೆಂಬ ಮಾಯಾಲೋಕ ಕುರಿತು ವ್ಯಸನಮಾಡುತ್ತ, ಪ್ರತಿಯೋರ್ವರನ್ನೂ ತಿಂಡಿ ತಿನಿಸುಗಳೆಂಬಂತೆ ನೋಡುತ್ತ, ವಿಸ್ಮಯಕರ ರೀತಿಯಲ್ಲಿ ಬದುಕುತ್ತಿರುವ ಬಾಷಾ, ಬದುಕಿರುವಾಗಲೇ ದಂತಕಥೆಯಾಗಿರುವನು. ಸವಾರೆವ್ವ ಎಂಬ ಮುದುಕಿಯು ಆತನ ಊಟೋಪಚಾರ ಕುರಿತು ಹಾಡುಗಳನ್ನು ಕಟ್ಟಿದ್ದರೆ, ಗಾದೆ ಗುರುಪ್ಪನು ಹತ್ತಾರು ಕಥೆಗಳನ್ನು ಹೇಳುವನು. ಇನ್ನು ಸಣ್ಣಪುಟ್ಟ ಬಚ್ಚಲು ಕಟ್ಟೆ ಮಾತುಗಳು ಸಹಸ್ರ... ಸಹಸ್ರ...

ಒಮ್ಮೆ ಮೋಟಾರು ಬೈಕೊಂದು ಆತಗೆ ಡಿಕ್ಕಿ ಹೊಡೆದು ಗ್ಯಾರೇಜು ಸೇರಿತಂತೆ. ಒಮ್ಮೆ ಇಡೀ ಮಾಳಿಗೆ ಕವುಚಿಕೊಂಡು ಬಿದ್ದರೂ ಆತಗೆ ಏನೂ ಆಗಲಿಲ್ಲವಂತೆ. ಒಮ್ಮೆ ಬಾಷ ಮಸೀದಿಯೊಳಗೆ ಅಂಗಾತ ಮಲಗಿಕೊಂಡಿರಲು, ಆತನ ಅಂಗಾಲ ಬಿರುಕು ಕೊರಕಲುಗಳಿಂದ ಏಳೆಂಟು ಚೇಳುಗಳು ತಂತಮ್ಮ ಹೆಂಡರು ಮಕ್ಕಳನ್ನು ಕಟ್ಟಿಕೊಂಡು ಹೊರಬಂದವಂತೆ. ಆತ ಹೆಜ್ಜೆ ಇಟ್ಟರೆ ಅರ್ಧ ಅಡಿ ತಗ್ಗು ಬೀಳುವುದಂತೆ.

ತನ್ನ ಗಿರಿಮೊಮ್ಮಗ ಜಾಫರನನ್ನು ರವದೆಯಂತೆ ಕಂಕುಳಲ್ಲಿ ಇಟ್ಟುಕೊಂಡು, ಶಾಲೆಗೆ ಸೇರಿಸಲೆಂದು ಬರಲು, ಶಾಲೆಯ ಮೂರು ಗೋಡೆಗಳು ಹೊಯ್ದಾಡಿದವು. ಮಾಡಿನಿಂದ ಐದಾರು ಪುಟ್ಟಿ ಮಣ್ಣು ಸುರಿಯಿತು. ಇಡೀ ತರಗತಿಯನ್ನೇ ಆತನ ಅಂಡುಗಳು ಆಪೋಶನ ತೆಗೆದುಕೊಂಡುಬಿಟ್ಟಿದ್ದವು. ಏಳು ಸೆಲ್ಲಿನ ಬ್ಯಾಟರಿಯಂಥ ಕಣ್ಣುಗಳಿಂದ, ಪ್ರತಿಯೋರ್ವ ಶಿಕ್ಷಕನನ್ನು, ಚಿಕನ್ ಕಬಾಬೆಂಬಂತೆ ನೋಡುತ್ತಲೂ, ಜೋಗಾದ ಗುಂಡಿಯಂಥ ಬಾಯಿತೆರೆದು ಮಾತಾಡುತ್ತಲೂ ಚಾಹೊತ್ತಿದ್ದು, ಆತ ಹೊರಡಲು, ಭೂದೇವಿಯು ಅಮ್ಮಾ, ಅಯ್ಯೋ ಎಂದು ನರಳಿದಳು.

ಗೋರುಮೆಂಟುಪ್ಪಿಟ್ಟಿನಿಂದಾಗಿಯೇ ಆತ ನನಗೆ ಹತ್ತಿರಾದದ್ದು. ಆತನಾದರೋ ವಿಶಾಲವಾದ ಅಂಗೈಯಂತೆಯೂ, ನಾನಾದರೋ ಅಂಥ ಅಂಗೈಯೊಳಗಿನ ಧನರೇಖೆಯಂತೆಯೂ; ಇಂಥ ಒಬ್ಬ ಬಾಡಿ ಗಾರ್ಡಿಟ್ಟುಕೊಂಡರೆ ಹೇಗೆ ಎಂದು ನಾನು ಯೋಚಿಸಿದ್ದೂ ಉಂಟು.

ಆ ಅಭೇದ್ಯ ಮಾನವಾಕೃತಿ ನಮ್ಮ ಮನೆಗೆ ಬರುವುದು, ಒಂದು ಪುಟ್ಟಿ ಮಣ್ಣು ಉದುರಿಸು ವುದು, ಹೋಗುವುದು ಮಾಡತೊಡಗಿತು. ಒಮ್ಮೆ ಗುರಪ್ಪ, ''ನೀವೇನಾದ್ರು ಆ ಸಾಬನನ್ನೂಟಕ್ಕೆ ಕರೆದಿರಂದ್ರೆ...'' ಎಂದು ಪಿಸುಗುಟ್ಟಿದ. ನಾನಾದರೋ ಹೇಳಿ ಕೇಳಿ ಸಿಂಗಲ್ಲು... ನಾನ್ಯಾಕೆ ಕರೆದೇನು!. ಆತ ಕವಳ ಕತ್ತರಿಸುವ ನವರಸ ಭರಿತ ದೃಶ್ಯವನ್ನು ಸವಿಯುವ ಹೆಬ್ಬಯಕೆ ನನಗಿಲ್ಲದಿರಲಿಲ್ಲ.

ಎರಡು ಮೂರು ಹಂತದ ಮಾತುಕತೆಯಿಂದ, ಆತ ಹೊಟ್ಟೆತುಂಬ ಊಟಮಾಡದೆ ಎರಡು ದಶಕಗಳೇ ಕಳೆದಿವೆ ಎಂಬ ಘೋರ ಸತ್ಯದ



ಹೆರಿಗೆಯಾಯಿತು. ಆತನ ಕ್ಷುದ್ಬಾಧೆ ತೀರಿಸುವಂಥ ಐತಿಹಾಸಿಕ ಘಟನೆ ರಾಜಕೀಯವಾಗಿ, ಸಾಮಾಜಿಕವಾಗಿ ನಡೆಯಲಿಲ್ಲವೆ! ನಡೆದಿವೆ, ಆದರೆ ಆತನನ್ನು ದೂರ ಇಟ್ಟು. ಮಗು ಸ್ವಭಾವದ ಆ ದೇದಿಪ್ಯಮಾನ ವ್ಯಕ್ತಿಯ, ತನಗೆ ಯಾರಾದರೂ ಫುಲ್ಲೂಟ ಹಾಕುವರೆ ಎಂಬ ನಿರೀಕ್ಷಣಾ ಬಂಗಲೆಯ ಬಾಗಿಲನ್ನು ಯಾರೂ ತಟ್ಟರಲೇ ಇಲ್ಲವೆಂಬುದೇ ಆಶ್ಚರ್ಯದ ಸಂಗತಿ.

ಒಂದುದಿನ ಸಂಜೆ ಬಾಷ, ವಾಯುವೇಗದಿಂದ ಬಂದು, ಆವೇವೇಗದಲ್ಲಿ ಕೇಳಿದ, ''ಸಾರೂ ಲಿಂಗಂಪಲ್ಲಿಧಣೇರ ಮನ್ಯಾಗ ಮದುವೆ ಐತಂತೆ... ನಿಮ್ಗೆ ಲಗ್ಗನ ಪತ್ರಿಕೆ ಕೊಟ್ಟಾರಂತೆ.'' ಹೌದೆಂದು ತಲೆ ಅಲ್ಲಾಡಿಸಿದೆ. ಆತನ ಮನದಿಂಗಿತ ಅರ್ಥಮಾಡಿಕೊಂಡು, ''ಹೋಗುವಾಗ ನಿನ್ನೂ ಕರಕೊಂಡು ಹೋಗ್ತೀನಂತ್ತೇಳು'' ಎಂದು ಮಾತುಕೊಟ್ಟೆ. ಆತನ ಮುಖವೆಂಬ ಮಾನಸ ಸರೋವರದಾದ್ಯಂತ ಸಂತಸದ ತಾವರೆಗಳು ಸಹಸ್ರ ಸಂಖ್ಯೆಯಲ್ಲಿ ಅರಳಿದವು.

ಅದು ಮೊದಲೇ ಒಬ್ಬರು ಹೂಸುಬಿಟ್ಟರೆ ಎಲ್ಲರೂ ಮೂಗು ಮುಚ್ಚಿಕೊಳ್ಳುತ್ತಿದ್ದಂಥ ಊರು. ಇದು ದೊಡ್ಡ ಸುದ್ದಿಯಾಯಿತು. ಯಂಟ್ರಾಮು, ''ಮೇಸ್ಟ್ರೇ, ನೀವು ಖರೇಮದ್ರು, ಲಿಂಗಂಪಲ್ಲಿ ಧಣೇರ ನಿಷ್ಠುರ ಕಟ್ಕೊಂತೀರಿ'' ಎಂದು ಎಚ್ಚರಿಕೆ ನೀಡಿದರೆ, ಸೂಲಗಿತ್ತಿ ಈರವ್ವ, ''ನಮ್ಮಪ್ನೇ... ಹೆಂಗಾರಮಾಡಿ ಕರ್ಕೊಂಡೋಗಿ ಹೊಟ್ಟುಂಬ ಉಂಬಕ್ಕಿಡಂಗ ಮಾಡಿ ಪುಣ್ಯ ಕಟ್ಟಿಕ್ಯಾ. ಆ ಸಾಬು ವಿಲವಿಲಾಂತ ಒದ್ದಾಡೋದ್ನ ನೋಡೋಕಾಗಲ್ಲ'' ಎಂದು ಸಮಾಧಾನದ ಲಟ್ಟಿಗೆ ಮುರಿದಳು. ಹೀಗೆ ಮಿಶ್ರ ಪ್ರತಿಕ್ರಿಯೆ ವ್ಯಕ್ತವಾಯಿತು. ಜಮೀನ್ದಾರರ ನಿಷ್ಠುರಕ್ಕೆ ಪಾತ್ರನಾದರೂ ಚಿಂತೆಯಿಲ್ಲ, ಆತನನ್ನು ಸಂಗಡ ಕರೆದೊಯ್ಯಬೇಕೆಂದು ಕೃತುನಿಶ್ಚಯವಂ ಮಾಡಿದೆನು.

ಮುಹೂರ್ತದ ದಿನ. ಪಿಲಾಗಿನ್ ಗುಳಿಗೆಯ ನಾತ ಹೊಡೆಯುತ್ತಿದ್ದ ಇಪ್ಪತ್ತಾರು ಮೊಳದ ದೋತರ ಉಟ್ಟು, ಕೈಕಪ್ಪಿನ ನಿಲುವಂಗಿ ತೊಟ್ಟು, ಕೆಂಪು ಬಿಳಿ ಪಟ್ಟೆಯ ಭಾರೀ ರುಮಾಲದ ಕಿರೀಟ ಧರಿಸಿ, ಆತ ಚಾವಡಿ ಸನೀಕೆ ಬರಲು, ಇಡೀ ಊರೆಂಬೋ ಊರು, ಮೂಲೆ ಮೂರುಕಟ್ಟನಲ್ಲಿ ನೂರೆನೂರೆ ನೆರೆತು, ಕಣ್ತುಂಬ ದರ್ಶನ ಭಾಗ್ಯ ಪಡೆಯಿತು. ನಾನು ಮುಂದೆ ಮುಂದೆ, ಆತ ಘನ ಘೋರ ಪ್ರಭಾವಳಿಯಂತೆ ಹಿಂದೆ ಹಿಂದೆ.

ಹೊತ್ತು ತಂಪಿರುವಾಗಲೇ ಎರಡು ಧಮ್ ನಡಿಗೆ ದೂರದ ಲಿಂಗಂಪಲ್ಲಿ ತಲುಪಿದೆವೋ... ಎಲ್ಲಾರ ಕಣ್ಣು ನಮ್ಮ ಮೇಲೆ. ಎಷ್ಟೋ ಹಸುಳೆಗಳು ಕಿಟಾರನೆ ಕಿರುಚಿ, ಸೀರೆ ಮರೆ ಅವಿತಿಟ್ಟುಕೊಂಡವು. ಎಲ್ಲರೂ ಮನದಣಿಯೆ ನೋಡಿ ಕೃತಾರ್ಥರಾದರು. ನಿಜ ಹೇಳಬೇಕೆಂದರೆ, ಧಣೇರ ಖೂನಿಕೋರ ಬಾಡಿಗಾರ್ಡುಗಳೇ ತಂತಮ್ಮ ಧೋತರ ತಣ್ಣಗೆ ಮಾಡಿಕೊಂಡರು. ನನ್ನ ಡಿಗ್ನಿಟಿಯೂ ಸಾಕಷ್ಟು ಹೆಚ್ಚಿತು.

ಹತ್ತಿದುವಲ್ಲಿ ನೂರು ಮುಯ್ಯಿ ಇಟ್ಟೆ. ಊಟ ಮಾಡುವಾಗ ಬಾಷಾನನ್ನು ಪಕ್ಕದಲ್ಲೇ ಕುಂಡ್ರಿಸಿಕೊಂಡೆ. ನಾಲ್ಕು ಪತ್ರೋಳಿ ಹರಡಿಕೊಂಡ. ಎಲ್ಲರೂ ನೋಡುತ್ತಿರಲು, ಎರಡು ಪುಟ್ಟಿ ಲಡ್ಡೂ, ಒಂದು ತಂಬಿಗೆ ತುಪ್ಪ, ಒಂದು ಬೋಗುಣಿ ಬದನೆಕಾಯಿ ಪಲ್ಯ, ಎರಡೂವರೆ ಪುಟ್ಟಿ ಅನ್ನ, ಒಂದು ಬಕೆಟ್ ಸಾರೂ, ಇಷ್ಟೆಲ್ಲವನ್ನು ಕ್ಷಣಾರ್ಧದಲ್ಲಿ ಉಂಡು, ಗಾವುದ ದೂರಕ್ಕೆ ಕೇಳಿಸುವಂತೆ ಡೇಗಿದನು. ನಂತರ ಒಂದೂವರೆ ಡಜನ್ನು ಬಾಳೆಹಣ್ಣು ಇತ್ಯಾದಿ.

ಇಷ್ಟೆಲ್ಲ ಉಂಡಿದ್ದನ್ನು ನೋಡಿ ತೃಪ್ತಿಪಟ್ಟ ಧಣೇರು, ಐವತ್ತು ರೂಪಾಯಿಗಳನ್ನು ಬಾಷಾನಿಗೆ ನೀಡಿ ಶಹಭಾಷ್ ಎಂದು ಬೆನ್ನತಟ್ಟ ಬೀಳ್ಕೊಟ್ಟರು.

''ಇದೆಲ್ಲಿ ಯ್ಯೋನು ಮಹಾ ಸಾರೂ ಹಂಗಾಮಿನಲ್ಲಿ...'' ಎಂದು ದಾರಿ ಉದ್ದಕ್ಕೂ ಬಾಷಾ...

■

ಒಂದಾಣೆ ಮಾಲೆ

ಎಂ.ಆರ್. ಭಟ್

# ಮೌನದ ಮೌಲ್ಯ




ಒಂದು ಮನೆಯಲ್ಲಿ ಸ್ತ್ರೀ ಪುರುಷರಿಬ್ಬರೇ ವಾಸಿಸಿದ್ದರು. ಒಂದು ದಿನ ಆ ಸ್ತ್ರೀಯು ನೆರೆಮನೆಯವಳೊಡನೆ ಹೀಗಂದಳು: ''ಭಗಿನೀ! ನನ್ನ ಪತಿಯ ಸ್ವಭಾವವು ಬಹು ಸಿಟ್ಟಿನದ್ದಾಗಿದೆ. ಆಗಾಗ್ಗೆ ಅವನು ನನ್ನೊಡನೆ ಜಗಳಾಡುತ್ತಿರುವನು, ಮತ್ತು ಆ ರೀತಿಯಲ್ಲಿ ನಮ್ಮ ಸಿದ್ಧವಾದ ಅಡಿಗೆಯು ವ್ಯರ್ಥವಾಗುತ್ತಿರುವುದು.''

ನೆರೆಮನೆಯವಳು ಹೀಗಂದಳು: ''ಇದರಲ್ಲಿ ವಿಶೇಷವೇನಿದೆ? ಚಿಂತಿಸಬೇಡ. ನನ್ನೊಡನೆ ಒಂದು ಅಮೂಲ್ಯ ಹಾಗೂ ಪ್ರಶಸ್ತ ಔಷಧಿಯಿದೆ. ನಿನ್ನ ಪತಿಯು ನಿನ್ನೊಡನೆ ಜಗಳಾಡುವಾಗ, ನೀನು ಈ ಔಷಧಿಯನ್ನು ಬಾಯಿಗೆ ಹಾಕಿಕೊ. ಅದರಿಂದ ಅವನು ಸುಮ್ಮನಾಗುವನು.''

ನೆರೆಮನೆಯವಳು, ಮದ್ದಿನ ಬಾಟಲಿಯನ್ನು ತುಂಬಿಸಿ, ತಂದುಕೊಟ್ಟಳು.

ಆ ಸ್ತ್ರೀಯು, ಎರಡು ಮೂರು ಸಲ ಪತಿಯ ಕ್ರೋಧ ಸಮಯದಲ್ಲಿ ಔಷಧಿಯ ಪರೀಕ್ಷೆ ನಡೆಸಿದಳು ಮತ್ತು ಅವಳಿಗೆ ಒಳ್ಳೇ ಫಲವು ಲಭಿಸಿತು. ಆಗ ಅವಳು ನೆರೆಮನೆಯವಳೊಡನೆ ಹೀಗಂದಳು: ''ಭಗಿನೀ! ನಿನ್ನ ಔಷಧಿಯು ಅತ್ಯಮೂಲ್ಯವಾದುದು. ಅದರಲ್ಲಿ ಜಾದೂ ತುಂಬಿದೆ. ಯಾವ ಯಾವ ಅದ್ಭುತ ಶಕ್ತಿಯ ಮೂಲಿಕೆ ಅಥವಾ ದ್ರವಗಳ ಮಿಶ್ರಣದಿಂದ ಅದನ್ನು ತಯಾರಿಸುತ್ತಾರೆ, ಹೇಳುವಿಯಾ? ನಾನೂ ಅದನ್ನು ತಯಾರಿಸಲು ಶಕ್ತಳಾದೇನೇ?''

ನೆರೆಮನೆಯವಳು ಹಸನ್ಮುಖಳಾಗಿ ಹೇಳಿದಳು: ''ಭಗಿನೀ! ಬಾಟಲಿಯೊಳಗೆ ಶುದ್ಧ ನೀರು ಮಾತ್ರ ಇತ್ತು. ಬೇರೇನೂ ಇರಲಿಲ್ಲ. ನಿನ್ನ ಮೌನವೇ ಕೆಲಸವನ್ನು ಸಾಧಿಸಿತು. ಬಾಯೊಳಗೆ ನೀನು ನೀರು ತುಂಬಿದ್ದರಿಂದ ನಿನ್ನ ಪತಿಯ ಕ್ರೋಧದ ನುಡಿಗಳಿಗೆ ಪ್ರತ್ಯುತ್ತರ ಕೊಡಲಾಗಲಿಲ್ಲ. ನೀನು ಆ ರೀತಿ ಶಾಂತಳಾಗಿದ್ದುದರಿಂದ ಅವನ ಕ್ರೋಧವು ಸಹ ನಾಶವಾಯಿತು. ಒಂದು ಮೌನವು ಸಕಲ ದುಃಖಗಳನ್ನು ನಿವಾರಿಸುತ್ತದೆ. ಎದುರಾಳಿಯು ಮಾತಾಡುವುದಿಲ್ಲವಾದರೆ, ಕೋಪವು ತನ್ನಷ್ಟಕ್ಕೆ ಮಾಯವಾಗುತ್ತದೆ.''








ಶಾರದಾ ರಜಪೂತ

# ಆ ಒಂದು ಕ್ಷಣ

ಅಯ್ಯೋ! ಅಮ್ಮಾ ಎಂದು ನರಳುತ್ತ ಸುಷಮಾ, ತನ್ನ ನೋಯುತ್ತಿರುವ ದವಡೆಯ ಹಲ್ಲನ್ನು ಒತ್ತಿ ಹಿಡಿದಳು.

''ಪ್ಲೀಸ್, ಸ್ವಲ್ಪ ಮೆತ್ತಗೆ ನರಳು ಸುಷಮಾ, ಈ ದವಾಖಾನೆಯಲ್ಲಿ ಎಷ್ಟು ಜನರಿದ್ದಾರೆ ನೋಡು, ಎಲ್ಲರೂ ನಿನ್ನ ಕಡೆಗೇ ನೋಡುತ್ತಿದ್ದಾರೆ'', ಗಂಡ ಗದರಿದ.

''ಠಸ್ ಠಸ್ ಎಂದು ಹಲ್ಲು ತುಂಬಾ ಹೊಡೆಯುತ್ತದರೀ, ಇನ್ನೂ ಡಾಕ್ಟರರು ಯಾವಾಗ ಬರುತ್ತಾರೋ'', ನರಳುತ್ತಲೇ ಸುಷಮಾ ಹೇಳಿದಳು.

''ಹಾಗಾದರೆ ಹೊರಗೆ ಹೋಗಿ ಗಾಳಿಗೆ ನಿಲ್ಲು. ಅದರಿಂದ ನೋವು ಸ್ವಲ್ಪ ಕಡಿಮೆಯಾಗಬಹುದು. ಡಾಕ್ಟರರು ಬಂದನಂತರ ಕರೆಯುತ್ತೇನೆ'' ಎಂದು ಮುಂದೆ ಬಗ್ಗಿ, ಡಾಕ್ಟರರ ಮೇಜಿನ ಮೇಲೆ ಇದ್ದ ಒಂದು ಇಂಗ್ಲಿಷ್ ಪೇಪರನ್ನು ಎತ್ತಿಕೊಂಡು, ಅದರಲ್ಲಿ ಮುಖ ಹುದುಗಿಸಿದ, ಸುಷಮಾಳ ಗಂಡ.

''ಅದು ಸರಿಯೆ! ಇನ್ನೂ ಸ್ವಲ್ಪ ಹೊತ್ತು ಆತನ ಹತ್ತಿರ ಕುಳಿತಿದ್ದರೆ, ಹಾಗೇಕೆ ಕುಳಿತೆ, ಹೀಗೇಕೆ ಕುಳಿತೆ, ಗದ್ದವನ್ನು ಹಾಗೇಕೆ ಒತ್ತಿಹಿಡಿಯುತ್ತಿ, ಮುಖ ಹಾಗೇಕೆ ಕಿವುಚುತ್ತಿ'' ಎಂದೇನೋ ವಟಗುಡುತ್ತಿದ್ದ. ಅವನು ಯಾವಾಗಲೂ ಹಾಗೆಯೇ, ಮನೆಯಲ್ಲಿಯೇ ಆಗಲಿ, ಮನೆಯ ಹೊರಗೆ ಆತನೊಂದಿಗೆ ಎಲ್ಲಿಯಾದರೂ ಹೋಗುತ್ತಿರಲಿ, ಯಾವುದಾದರೊಂದು ತಪ್ಪನ್ನು ಕಂಡುಹಿಡಿದು ವಟಗುಟ್ಟುತ್ತಲೇ ಇರುತ್ತಾನೆ. ತನಗೆ ಅದು ರೂಢಿಯಾಗಿಹೋಗಿದೆ. ಅದು ಅವನ ಹುಟ್ಟು ಸ್ವಭಾವ ಎಂದು ತಾನು ಅದನ್ನು ಲಕ್ಷ್ಯಕ್ಕೇ

ತೆಗೆದುಕೊಳ್ಳುವುದಿಲ್ಲ. ಅದೊಂದನ್ನು ಹೊರತು ಪಡಿಸಿ ಉಳಿದೆಲ್ಲ ವಿಷಯಕ್ಕೆ ಆತ ಸಿದ್ಧಹಸ್ತನೇ.

ಯೋಚಿಸುತ್ತಲೇ ಹೊರಬಂದ ಸುಷಮಾ, ದವಾಖಾನೆಯ ಕಟ್ಟೆಯ ಮೇಲೆ ನಿಂತಳು. ಆದರೆ ಹಲ್ಲುನೋವೇನೂ ಕಡಿಮೆಯಾಗಲಿಲ್ಲ. ಸುಷಮಾ ರಸ್ತೆಯ ಕಡೆ ನೋಡಿದಳು. ಉದ್ದಕ್ಕೂ ಮಲಗಿದ್ದ ರಸ್ತೆ ನಿರ್ಜನವಾಗಿತ್ತು. ಆಕಾಶ ನೀಲಿಯಾಗಿತ್ತು. ಬೀಸುವ ಗಾಳಿ ತಣ್ಣಗಿರಲಿಲ್ಲ. ಅಷ್ಟರಲ್ಲಿ ಆ ನಿರ್ಜನ ರಸ್ತೆಯ ಮೇಲೆ ಕಪ್ಪು ಕಾರೊಂದು ಹರಿದುಬಂದಿತು. 'ಸದ್ಯ ಡಾಕ್ಟರರು ಬಂದರಪ್ಪಾ' ಎಂದು ನಿಟ್ಟುಸಿರುಬಿಟ್ಟ ಸುಷಮಾ, ಅದು ಹತ್ತಿರ ಬರುತ್ತಲೇ ಬಗ್ಗಿ ನೋಡಿದಳು.

ಅದು ಡಾಕ್ಟರರ ಕಾರಾಗಿರಲಿಲ್ಲ. ಅದನ್ನೊಬ್ಬ ಯುವಕ ನಡೆಸುತ್ತಿದ್ದ. ಹಿಂದಿನ ಸೀಟಿನಲ್ಲಿ ಸುಮಾರು ಐವತ್ತು-ಐವತ್ತೆರಡು ವರುಷಗಳ ವ್ಯಕ್ತಿಯೊಬ್ಬ ಕುಳಿತಿದ್ದ. ಆತ ಸಹಜವಾಗಿಯೇ ಸುಷಮಾಳತ್ತ ನೋಡಿದ. ಸುಷಮಳೂ ಹಾಂ! ಎನ್ನುತ್ತಿರುವಂತೆಯೇ ಸ್ವಲ್ಪ ಮುಂದೆ ಚಲಿಸಿದ ಕಾರು ಗಕ್ಕನೇ ನಿಂತಿತು. ಅದರಿಂದ ಆ ವ್ಯಕ್ತಿ ಕೆಳಗಿಳಿದು ಸುಷಮಾಳ ಹತ್ತಿರ ಬರಹತ್ತಿದ. ಕಾರು ಮುಂದೆ ಚಲಿಸಿತು. ಆತ ತನ್ನತ್ತ ಬರುತ್ತಿರುವುದನ್ನು ಕಂಡ ಸುಷಮಾಳ ಸಂತೋಷ ಮೇರೆ ಮೀರಿತು. ಅವಳ ಹೃದಯ ಜೇನುಗೂಡಾಯಿತು. ಅವಳ ಹಲ್ಲುನೋವು ನಿಂತು ಹೋಯಿತು. ಆಕೆ ಇಪ್ಪತ್ತೈದು ವರುಷ ಹಿಂದಕ್ಕೆ ಓಡಿದಳು. ಅಲ್ಲಿಯೇ ಇಪ್ಪತ್ತರ ಯುವತಿಯಾಗಿ ನಿಂತ ಆಕೆ, ದುಡುದುಡನೇ ಮೆಟ್ಟಿಲುಗಳನ್ನಿಳಿದು ರಸ್ತೆಗೆ ಬಂದಳು. ಆತ ಅವಳ ಶೇಖರನಾಗಿದ್ದ.

''ಓ! ಸುಷಮಾ, ನೀನು ಈ ಊರಲ್ಲಿ'' ಎಂದ ಆತ. ಆಕೆಯನ್ನು ಕಂಡು ಅವನಿಗೆ ಬಹಳ ಸಂತೋಷವಾಗಿತ್ತು.

ಸುಷಮಾ ಅವನನ್ನು ನಿಟ್ಟಿಸಿದಳು. ಆತನ ದೇಹ ಸ್ವಲ್ಪ ದಪ್ಪಗಾಗಿದೆ. ತಲೆಯಲ್ಲಿಯ ಕೂದಲುಗಳು ಬಿಳಿ ಮಿಶ್ರಿತವಾಗಿವೆ. ನಕ್ಕರೆ ಸುಂದರವಾಗಿ ಹೊಳೆಯುವ ಹಲ್ಲುಗಳು ಸ್ವಲ್ಪ ಹಿಂದುಮುಂದಾಗಿವೆ. ನಡಿಗೆ ಸ್ವಲ್ಪ ನಿಧಾನವಾಗಿದೆ. ಆತನ ಮುಖದ ಮೇಲೆ ಕಂಡೂ ಕಾಣದಂತೆ ವಯಸ್ಸಿನ ತೆಳುಪರದೆ ಹರಡಿದೆ. ಆದರೆ ಆ ಕಣ್ಣುಗಳಲ್ಲಿ ತನ್ನ ಬಗ್ಗೆ ಇದ್ದ ಪ್ರೀತಿ-ಸ್ನೇಹ, ಧ್ವನಿಯಲ್ಲಿ ಅದೇ ಮಾರ್ದವತೆ ಸ್ವಲ್ಪೂ ಕಡಿಮೆಯಾಗಿಲ್ಲ. ಶೇಖರ ಪುನಃ ತನಗೆ ಸಿಗುತ್ತಾನೆ ಎಂಬ ಆಸೆಯನ್ನು ಅವಳು ಬಿಟ್ಟಿದ್ದಳು. ಹಾಗಾದರೆ ಶೇಖರ ಅವಳ ಪಾಲಿಗೆ ಏನಾಗಿದ್ದ?

ಶೇಖರ ಅವಳಿಗೆ ಏನೂ ಆಗಿರಲಿಲ್ಲ. ಆದರೆ ಎಲ್ಲವೂ ಆಗಿದ್ದ. ಆತ ಅವರ ಪಕ್ಕದ ಮನೆಯವನಾದ. ಅಣ್ಣನ ಸ್ನೇಹಿತನಾದ. ತಮ್ಮ ಮನೆಯಲ್ಲಿ ಎಲ್ಲರಿಗೂ ಬೇಕಾದ ಒಳ್ಳೆಯ ಹುಡುಗನಾಗಿದ್ದ. ಎಲ್ಲರಿಗೂ ಬೇಕಾದವನಾದ... ಅವಳ ಸ್ಮೃತಿ ಹಿಂದಕ್ಕೆ ತಿರುಗಿತು. ಆತನ ತಂದೆ ತಾವಿದ್ದ ಊರಿಗೆ ವರ್ಗವಾಗಿ, ತಮ್ಮ ಪಕ್ಕದ ಮನೆಯಲ್ಲಿ ವಾಸಿಸಲು ಬಂದಾಗ ತಾನಿನ್ನೂ ಪ್ರೈಮರಿ ಸ್ಕೂಲಿಗೆ ಹೋಗುತ್ತಿದ್ದೆ. ಆತ ತನಗಿಂತಲೂ ಆರೇಳು ವರುಷ ದೊಡ್ಡವನಾಗಿದ್ದ. ತಾವೆಲ್ಲರೂ ಕೂಡಿ ಆಡಿ, ಹಾಡಿ, ಓದಿ, ಬೆಳೆದು ದೊಡ್ಡವರಾದಂತೆ ತಮ್ಮಲ್ಲಿ ಏನೋ ಒಂದು ಸೆಳೆತ ಆರಂಭವಾಗಿದೆ ಎಂದು ತಿಳಿಯುವ ಹೊತ್ತಿಗೆ, ತಾವು ಯೌವನದ ಚೌಕಟ್ಟಿಗೆ ಒರಗಿ ನಿಂತಿದ್ದೆವು. ಕಣ್ಣುಗಳು ಪರಸ್ಪರ ಪ್ರೀತಿಯ ಭಾಷೆ ಕಲಿತಿದ್ದವು. ಮನಸ್ಸುಗಳು ಕಲ್ಪನೆಯ ರಾಜ್ಯದಲ್ಲಿ ವಿಹರಿಸುವುದರಲ್ಲಿ ಪರಿಣತಿ ಹೊಂದಿದ್ದವು.

ಒಂದು ದಿನ ಎರಡೂ ಮನೆಯವರು, ಓಣಿಯ ಕೆಲ ಜನ ಕೂಡಿ ತಮ್ಮ ಮಾಳಿಗೆಯ ಮೇಲೆ ಬೆಳದಿಂಗಳೂಟ ಮಾಡುವಾಗ, ತನ್ನ ಹತ್ತಿರವೇ ಕುಳಿತಿದ್ದ ಆತ, ಮೃದುವಾಗಿ ತನ್ನ ಕೈಯನ್ನೊತ್ತಿ, ''ಸುಷಮಾ, ಆ ಚಂದ್ರಮನ ಸಾಕ್ಷಿಯಾಗಿ ನೀನು ಎಂದೆಂದಿಗೂ ನನ್ನವಳೇ'' ಎಂದ. ಊಟ, ಮಾತು, ಚೇಷ್ಟೆಗಳ ಮಧ್ಯದಲ್ಲಿ ತಮ್ಮತ್ತ ಯಾರೂ ಗಮನಿಸುವುದಿಲ್ಲವೆಂದು ತಿಳಿದು ಆತ, ತನ್ನ ಗಲ್ಲಕ್ಕೊಂದು ಹೂಮುತ್ತನ್ನಿತ್ತ. ತಾನು ರೋಮಾಂಚನಗೊಂಡೆ. ತನ್ನ ಮನಸ್ಸು ಹಾಲಿನ



ಕಡಲಾಯಿತು. ಆ ಕಡಲಿನಿಂದ ತಂಪಿನ ಚಂದ್ರ ಎದ್ದು ತನ್ನೆಡೆಗೆ ಬಂದ. ತಾನು ಚಂದ್ರನ ಮೇಲೆ ಸವಾರಿ ಮಾಡಿದೆ. ಆಕಾಶದಿಂದ ಚುಕ್ಕಿಗಳು ಕೆಳಗಿಳಿದು ಬಂದು ತನ್ನ ಸುತ್ತಲೂ ತಿರುಗಿ, ಹಾಡಿ, ಕುಣಿದು ನರ್ತಿಸಿದವು.

ಸ್ವಲ್ಪದಿನಗಳಲ್ಲಿಯೇ ಅವನ ತಂದೆಗೆ ಹೆಚ್ಚಿನ ಹುದ್ದೆ ಸಿಕ್ಕು, ಬೇರೆ ಊರಿಗೆ ವರ್ಗವಾಯಿತು. ತಂದೆಯೊಂದಿಗೆ ಅವನೂ ಹೋದ. ಆಮೇಲೆ ಅಣ್ಣನಿಗೆ ಮೇಲಿಂದಮೇಲೆ ಪತ್ರಗಳು ಬರುತ್ತಿದ್ದವು. ಅವೆಲ್ಲ ಪರೋಕ್ಷವಾಗಿ ತನ್ನನ್ನು ಕುರಿತೇ ಇರುತ್ತಿದ್ದವು. ತಂದೆ-ತಾಯಿಗಳ ಹೆದರಿಕೆಯೋ, ಜಾತಿಮತಗಳ ಅಂತರವೋ ಅಥವಾ ಅಪ್ರಬುದ್ಧ ವಯಸ್ಸೋ, ತಮ್ಮ ಪ್ರೇಮ ಮುಂದುವರಿಯಲೇ ಇಲ್ಲ. ತಾವು ಒಂದಾಗಲಿಲ್ಲ. ಆದರೆ ಆತನನ್ನು ತಾನು ಮರೆಯಲಿಲ್ಲ. ತಮ್ಮ ಪ್ರೇಮ ಮೊಗ್ಗಾಗಿಯೇ ಉಳಿಯಿತು. ಅದು ಅರಳಲಿಲ್ಲ. ಹೂವಾಗಲಿಲ್ಲ. ಅದು ಒಳ್ಳೆಯದೆ! ಒಂದು ವೇಳೆ ಅರಳಿದ್ದರೆ ಬಾಡಿ ಹೋಗುತ್ತಿತ್ತಲ್ಲಾ! ಅದಕ್ಕಾಗಿಯೇ ಆ ಪ್ರೇಮ ಮೊಗ್ಗೆಯನ್ನು, ಜಾನಪದ ಕಥೆಗಳಲ್ಲಿ ಹೇಳುವಂತೆ, ಸಪ್ತಸಮುದ್ರಗಳನ್ನು ದಾಟಿ, ದಟ್ಟವಾದ ಅರಣ್ಯದೊಳಗೆ, ದೊಡ್ಡದಾದ ಗುಹೆಯಲ್ಲಿ, ಚಿಕ್ಕದಾದ ಹೃದಯದ ಕತ್ತಲೆಯ ಕೋಣೆಯಲ್ಲಿ, ಮನಸ್ಸಿನ ಅಂತರಾಳದಲ್ಲಿ ಮುಚ್ಚಿಟ್ಟುಬಿಟ್ಟೆ. ಸಾಮೀಪ್ಯ ದೂರವಾಗಿ ಹೋದಂತೆ ವೇದನೆ ಹೆಪ್ಪುಗಟ್ಟುತ್ತ ಹೋಯಿತು. ಆದರಲ್ಲಿ ಅವನ ನೆನಪು ಸಿಕ್ಕಿ ಹಾಕಿಕೊಂಡಿತು.

ಮುಂದೆ ತನಗೆ ಮದುವೆಯಾಯಿತು. ಆತನಿಗೂ ಆಯಿತೆಂದೂ, ಆತ ಅಮೆರಿಕೆಗೆ ಹೋದನೆಂದೂ ಅಣ್ಣನಿಂದ ತಿಳಿಯಿತು. ಆತನನ್ನು ಪುನಃ ಕಾಣುವೆನೆಂದು ತನಗನಿಸಿರಲಿಲ್ಲ. ಆದರೆ ಜಗತ್ತು ದುಂಡಗಿದೆ ಎಂದು ಇಂದೇ ತಿಳಿಯಿತು. ಸುಷಮಾ ನಿಟ್ಟುಸಿರುಬಿಟ್ಟಳು. ''ಏಕೆ! ಸುಷಮಾ, ಹಾಗೇಕೆ ಸುಮ್ಮನೇ ನಿಂತಿರುವಿ, ಏನನ್ನು ಯೋಚಿಸುತ್ತಿದ್ದೀ?'' ಎಂದ ಶೇಖರ.

''ಯೋಚಿಸುವದು ಏನಿದೆ? ಶೇಖರ, ನಾವು ಯೋಚಿಸಿದ್ದು ಆಗಲಿಲ್ಲವಲ್ಲಾ''

''ಸುಷಮಾ, ಈಗ ನೀನು ಇಲ್ಲೇ ಇದ್ದೀಯಾ? ಗಂಡ ಏನು ಮಾಡುತ್ತಿದ್ದಾರೆ? ಮಕ್ಕಳು ಎಷ್ಟು?'', ಶೇಖರನೂ ತನ್ನ ಮನಸ್ಸಿನ ವೇದನೆ ಮುಚ್ಚಿಟ್ಟು ಕೇಳಿದ. 'ಶ್!', ಸುಷಮಾ ಬಾಯಿಯ ಮೇಲೆ ಬೆರಳನ್ನಿಟ್ಟುಕೊಂಡಳು.

''ಸಾರಿ ಮೇಡಂ'', ಶೇಖರ ನಕ್ಕ. ಆತನ ನಗು ಅಂದೂ ಚೆಂದ, ಇಂದೂ ಸಹ. ಹಿಂದೊಮ್ಮೆ ಆಕೆ ಅವನಿಗೆ ಹೇಳಿದ್ದಳು, ''ಶೇಖರ, ಈ ಅಪ್ಯಾಯಮಾನವಾದ ನಗುವೊಂದಿದ್ದರೆ ಸಾಕು. ನಾನು ನಿನ್ನೊಂದಿಗೆ ಜೀವನದಲ್ಲಿ ಬರುವ ಯಾವ ಕಷ್ಟವನ್ನೂ ಸಹಿಸಬಲ್ಲೆ.'' ''ಶೇಖರ, ನೀನು ನನ್ನನ್ನು ನೆನೆಸುತ್ತಿರುತ್ತೀಯಾ?'', ಆರ್ದ್ರತೆ ತುಂಬಿದ ಧ್ವನಿಯಲ್ಲಿ ಆಕೆ ಕೇಳಿದಳು.

ಶೇಖರ ಅವಳ ಕಣ್ಣುಗಳಲ್ಲಿ ಕಣ್ಣನಿಟ್ಟು ಹೇಳಿದ, ''ಶ್ರೀಕೃಷ್ಣ ಬೃಂದಾವನ ಬಿಟ್ಟು ಮಥುರೆಗೆ ಬರುವಾಗ, ದಾರಿಯಲ್ಲಿ ಬಲರಾಮ ಕೇಳಿದನಂತೆ, 'ಕೃಷ್ಣ, ನೀನು ರಾಧೆಯನ್ನು ಬಿಟ್ಟು ಬಂದೆಯಲ್ಲಾ ನಿನಗೇನೂ ವೇದನೆಯಾಗುವದಿಲ್ಲವೇ?' ಎಂದು. 'ಅಣ್ಣಾ, ರಾಧೆ ನನ್ನನ್ನಗಲಿ ಎಲ್ಲಿ ಹೋಗಿದ್ದಾಳೆ. ಅವಳು ನನ್ನೊಂದಿಗೇ ಬರುತ್ತಿದ್ದಾಳಲ್ಲಾ, ನನ್ನ ಜೀವನದ ಕೊನೆಯವರೆಗೂ ಬರುತ್ತಾಳೆ ಎಂದನಂತೆ ಕೃಷ್ಣ.' ಆಗ ಸುಷಮಾಳ ಕಣ್ಣುಗಳಲ್ಲಿ ನೀರಿನ ಮುತ್ತುಗಳು ಮೂಡಿಬಂದವು. ಅವಳಿಗೆ ಅತ್ಯಂತ ವ್ಯಥೆ

ಯಾಯಿತು. ತಾವಿಬ್ಬರೂ ಈಗ ಇಷ್ಟು ಸಮೀಪ ವಿದ್ದರೂ ಎಷ್ಟು ದೂರವಿದ್ದೇವೆ. ಗಾವುದ ಗಾವುದ ದೂರವಿದ್ದರೂ ಎಷ್ಟು ಸಮೀಪ ಇದ್ದೇವೆ.

ಆಕೆ ತನ್ನ ಕಣ್ಣುಗಳಲ್ಲಿ ಹರಡಿದ ಕಣ್ಣೀರಿನ ತೆಳುಪರದೆಯಿಂದ ಆತನನ್ನು ನೋಡಿದಳು. ಆತನ ಮುಖ ಅವಳಿಗೆ ಮಸುಕು ಮಸುಕಾಗಿ ಕಂಡಿತು. ''ಹಾಗಾದರೆ ಶೇಖರ, ನಾವಿಬ್ಬರೇ ಇದ್ದಾಗ ನೀನು ನನ್ನನ್ನು ಕರೆಯುತ್ತಿದ್ದೀಯಲ್ಲಾ, ಹಾಗೊಮ್ಮೆ ಕರೆ ನೋಡೋಣ.''

ಶೇಖರ, 'ಚು...' ಎಂದು ಬಾಯ್ದೆರೆದ.

ಯುಗಯುಗಗಳಿಂದ ಶೇಖರಿಸಿಟ್ಟದ್ದ ಅಮೃತದ ಕಲಶವನ್ನೆತ್ತಿ ಕುಡಿದಷ್ಟು ಸಂತೋಷದಿಂದ ನಗಲು ಸುಷಮಾ ಇಷ್ಟಗಲ ಬಾಯ್ತೆರೆದಳು.

''ಸುಷಮಾsss'', ಗಾಳಿಯಲ್ಲಿ ತೇಲಿಬಂದ ಧ್ವನಿಯೊಂದು ಅವಳ ಕಿವಿಗಪ್ಪಳಿಸಿತು. ಆದರದು ಶೇಖರನ ಧ್ವನಿಯಾಗಿರಲಿಲ್ಲ. ತನಗೆ ಚಿರಪರಿಚಿತ ವಾದ ಗಂಡನ ಧ್ವನಿಯಾಗಿತ್ತು. ತಕ್ಷಣ ಸುಷಮಾ ಎಚ್ಚರಗೊಂಡಳು. ಧರೆಗಿಳಿದಳು. ಅಲ್ಲಿಯವರೆಗೆ ಆಕೆಯ ಮಟ್ಟಿಗೆ ಬಾಹ್ಯ ಜಗತ್ತು ಸ್ತಬ್ಧವಾಗಿತ್ತು. ಕಾಲ ಚಲನೆ ಕಳೆದುಕೊಂಡಿತ್ತು. ಭೂವ್ಯೋಮ ವನ್ನು ಆವರಿಸಿನಿಂತ ಆ ಶೂನ್ಯತೆಯಲ್ಲಿ, ಕೇವಲ ತಾವಿಬ್ಬರೇ ಪ್ರೇಮಸಾಗರದಲ್ಲಿ ಈಜಾಡುತ್ತಿದ್ದರು.

ಸುಷಮಾ ವಾಸ್ತವ ಜಗತ್ತಿಗೆ ಬಂದಳು. ನಿರಭ್ರವಾಗಿದ್ದ ಆಕಾಶದಲ್ಲಿ ಮೋಡಗಳ ಮೇಳ ನಡೆದಿತ್ತು. ನಿರ್ಜನವಾಗಿ ಅಷ್ಟುದ್ದಕ್ಕೂ ಮಲಗಿದ್ದ ರಸ್ತೆಯಲ್ಲಿ ಜನಸಂಚಾರ ದಟ್ಟವಾಗುತ್ತಿತ್ತು. ನಿಯಾನ್ ದೀಪಗಳು ಹತ್ತುತ್ತಿದ್ದವು.

ಅವಳೀಗ ಶೇಖರನ ಚುಮಿಯಾಗಿರಲಿಲ್ಲ. ಸುಷಮಾ ಆದಳು. ಗಂಡನ ಹೆಂಡತಿಯಾದಳು. ಮಗಳ ತಾಯಿಯಾದಳು. ಸದ್ಗೃಹಿಣಿಯಾದಳು. ಗಂಭೀರೆಯಾದಳು. ಶೇಖರ ಅವಳಿಗೆ ಅಪರಿಚಿತ ನಾದ. ಅವಳ ಹಲ್ಲು ಮೊದಲಿಗಿಂತಲೂ ಜೋರಾಗಿ ನೋಯತೊಡಗಿತು. ಅಯ್ಯೋ! ಅಮ್ಮಾ ಎಂದು ಗದ್ದವನ್ನು ಒತ್ತಿಹಿಡಿದು ನರಳುತ್ತ, ಹಿಂದಕ್ಕೆ ಹೊರಳಿ, ಸರಸರನೇ ದವಾಖಾನೆಯ ಮೆಟ್ಟಲನ್ನು ಹತ್ತ ತೊಡಗಿದಳು. ಶೇಖರನಿಗೆ ಏನೂ ಹೇಳಲಿಲ್ಲ.

ಆಕೆ ಯಾವಾಗಲೂ ಹಾಗೆಯೇ, ಮಾತಿನ ಮಧ್ಯದಲ್ಲಿಯೇ ಒಮ್ಮಿಂದೊಮ್ಮೆಗೇ ಎದ್ದು ಹೊರಟು ಹೋಗುತ್ತಿದ್ದಳು. ಹುಚ್ಚುಹುಡುಗಿ ಅವಳ ಸ್ವಭಾವ ದಲ್ಲಿ ಒಂಚೂರೂ ಬದಲಾವಣೆಯಿಲ್ಲ. ಶೇಖರ ನಕ್ಕ.

ಕಾರಿಗೆ ಪೆಟ್ರೋಲ್ ಹಾಕಿಸಿಕೊಂಡು ಬಂದ ಮಗ ತಂದೆಯ ಹತ್ತಿರ ಬಂದು, ''ಪಪ್ಪಾ, ಕಾರಿಗೆ ಪೆಟ್ರೋಲ್ ಹಾಕಿಸಿಯಾಯ್ತು ಬನ್ನಿರಿ'' ಎಂದ.

ತಂದೆ ಮಾತನಾಡಲಿಲ್ಲ. ತಂದೆಯ ಮುಖದ ಕಡೆ ನೋಡಿದ. ಆತ ಏನನ್ನೊ ತದೇಕಚಿತ್ತದಿಂದ ನೋಡುತ್ತಿದ್ದರು. ಅವರ ಮುಖದ ಮೇಲೆ ಹಿಂದೆಂದೂ ಕಾಣದ ಪ್ರಸನ್ನತೆ ಹರಡಿತ್ತು. ಆತ ಈ ಜಗತ್ತಿನಲ್ಲಿ ಇದ್ದಂತಿರಲಿಲ್ಲ.

ತಂದೆ ನೋಡುತ್ತಿದ್ದ ಕಡೆಗೇ ಮಗ ನೋಡಿದ. ತನ್ನ ತಾಯಿಯ ವಯಸ್ಸಿನ ಸ್ತ್ರೀಯೊಬ್ಬಳು ದವಾ ಖಾನೆಯ ಮೆಟ್ಟಲು ಹತ್ತಿ ಹೋಗುತ್ತಿದ್ದುದನ್ನು ಕಂಡ ಸಂದರ್ಭವನ್ನು ಅರ್ಥ ಮಾಡಿಕೊಳ್ಳುವ ವಯಸ್ಸಿಗೆ ಬರುತ್ತಿದ್ದ ಮಗನಿಗೆ, ಯಾವಾಗಲೂ ಗಂಭೀರನಾಗಿರುತ್ತಿದ್ದ ತನ್ನ ಅಪ್ಪನಿಗೂ ಇಂತಹ ಒಂದು ವೈಯಕ್ತಿಕ ಜೀವನವಿರುವದು ಕಂಡು ಆಶ್ಚರ್ಯವಾದರೂ, ತಂದೆಯ ಕೈಯನ್ನು ಹಿಡಿದು ಮೃದುವಾಗಿ ಕೇಳಿದ, ''ಪಪ್ಪಾ ಕಾರು ಹತ್ತುತ್ತೀರಾ?''



ಸಮೀಪವಿದ್ದರೂ ಎಷ್ಟು ದೂರವಿದ್ದೇವೆ.

ಶಾಂತಾ ಕುಲಕರ್ಣಿ



# ರಾಮನಾಥ ಜೋಶಿ

# ತಡೆ

ಬರಲಿರುವ ಅಡಿಕೆ ಬೆಳೆಯ ಲೆಕ್ಕದಲ್ಲಿ ಅಡಿಕೆ ಮಂಡಿಯವರಿಂದ ಮುಂಗಡ ಎಬ್ಬಿಸಿದ ಸುಬ್ರಾಯ ಹೆಗ್ಡೆ, ರಸ್ತೆ ಅಂಚಿನಲ್ಲಿ ನೋಟಿನ ಕಟ್ಟು ಜೇಬಿನಲ್ಲಿ ಒಪ್ಪವಾಗಿದೆಯೋ ಎಂದು ಮುಟ್ಟಿಕೊಳ್ಳುತ್ತ ಖುಷಿಯಿಂದ ನಡೆಯುತ್ತಿದ್ದಾಗ, ಎದುರಿಗೇ ಇದ್ದ 'ಲಕ್ಷ್ಮೀ ಥಿಯೇಟರಿ'ನ ಬಳಿಯ 'ದಿಲ್‌ಬಹಾರ್' ಹೋಟೆಲಿನತ್ತ ಸಹಜವಾಗಿ ಕಣ್ಣು ಹಾಯಿಸಿದವನಿಗೆ, ದ್ವಾಪರದಲ್ಲಿ ತಾನು ಒಂದು ವರ್ಷ ಹುಬ್ಬಳ್ಳಿಯಲ್ಲಿ ಕಾಲೇಜಿಗೆ ಮಣ್ಣು ಹೊತ್ತಿದ್ದ ಅವಧಿಯಲ್ಲಿ ಗೆಳೆಯನಾಗಿದ್ದ ಚಂದ್ರು ಅಮ್ಲಾನಿ, ಸಿಗರೇಟಿನ ಹೊಗೆ ಬಿಡುತ್ತ ಅಲ್ಲಿ ಕುಳಿತದ್ದು ಕಾಣಿಸಿತು. ಕಿಸೆಯಲ್ಲಿ ನೋಟಿನ ಬಂಡಲು ಇದ್ದದ್ದರಿಂದ ಹಳೆಯ ಗೆಳೆಯನನ್ನು ಕರೆದು ಮಾತಾಡಿಸುವುದಕ್ಕೆ ತುಸು ಪುಕ್ಕಾದರೂ, ತನ್ನ ಊರಿಗೆ ಬಂದ ದೋಸ್ತನನ್ನು ಕಡೆಗಣಿಸುವುದಕ್ಕೆ ಅವನ ಸಂಭಾವಿತ ಮನಸ್ಸು ಸುತರಾಂ ಒಪ್ಪಲಿಲ್ಲ. ದಿಲ್‌ಬಹಾರ್‌ನತ್ತ ನಾಲ್ಕು ಹೆಜ್ಜೆ ಹಾಕಿ, ಆಗಷ್ಟೇ ಅಮ್ಲಾನಿಯನ್ನು ಕಂಡು ಹಿಗ್ಗಿದಂತೆ ಸೋಗು ಹಾಕಿಕೊಂಡು, ''ಹೋಹೋ, ದೋಸ್ತಿ, ಅಪರೂಪದ ಅಮ್ಲಾನಿ ಸಾಹೇಬರು ಯಾವಾಗ ನಮ್ಮ ಕಡೆ ಬಂದದ್ದು?'' ಎಂದು ಗೋಗರೆದು ಸ್ವಾಗತ ಬಯಸಿದ. ''ಹಿಂದಕ್ಕೆ ನಾವು ಕಲೀತಿದ್ದ ಕಾಲಕ್ಕೆ ಇದ್ದ ಹುಬ್ಬಳ್ಳಿಯಲ್ಲಿ ಬಿಡಾರ ಮಾಡಿದ್ದೇನೆ. ನಿನಗೇನೂ ಗೊತ್ತಿಲ್ಲದ್ದಲ್ಲ. ನಮ್ಮ ಸಿಂಧೀ ಜನಗಳಲ್ಲಿ ಶಾದಿ ಆಗೋದು ತಡವಾಗಿ, ಹಾಗಾಗಿ ಇತ್ತೀಚೆಗಷ್ಟೇ ಕುಂಟೆ ಕಟ್ಟಿಕೊಂಡಿದ್ದೇನೆ. ಮಕ್ಕಳು-ಮರಿ ತಾಪತ್ರಯ ಸದ್ಯಕ್ಕಿಲ್ಲ. ನನಗೇನು ನಿನ್ನಂತೆ ಸುಪಾರಿ ಬಂಚೇ? ಗದ್ದೆ ತೋಟಗಳೆ? ಹಿಂದಕ್ಕೆ ನಾವಿಬ್ಬರೂ ಕಾಲೇಜಿಗೆ ಚಕ್ಕರ್ ಹೊಡೆದು ಮನೆಯವರು ಬುಕ್ಸ್‌ಗೆಂದು ಕೊಟ್ಟ ಕಾಸನ್ನು ಸಿನಿಮಾಕ್ಕೆ ಸುರೀತಿದ್ವಲ್ಲ, ಈಗ ಅದೇ ಫಿಲ್ಮ್ ಲೈನಿನಲ್ಲಿದ್ದೇನೆ. ಪುಕ್ಕಟೆ ನೋಡೋ ಅವಕಾಶ ಇದ್ದರೂ, ಅದರ ಮೊದಲಿನ ಗೀಳೇ ಇಲ್ಲ. ಫಿಲ್ಮ್‌ಕ್ಯಾನ್ ಹೊತ್ತುಕೊಂಡು ಅಲೆದಾಡಬೇಕು. ಸಿನಿಮಾ ಅಂದ್ರೆ, ಈಗ ವಾಕರಿಕೆ ಬರ್ತದೆ. ಇವತ್ತು ಶಿರ್ಶಿಯಾದರೆ ನಾಳೆ ಬಾಗಲಕೋಟೆ, ನಾಡದು ಸವದತ್ತಿ, ಆಮೇಲೆ ಹಿರೇಕೇರೂರು, ಒಟ್ಟಿನ ಮೇಲೆ ಒದ್ದಾಡೋದು ತಪ್ಪಿದ್ದಲ್ಲ. ನಿನ್ನ ಹಾಗೆ ಊರಲ್ಲೇ ದರ್ಬಾರು ಮಾಡುವ ನಸೀಬು ನಮ್ಮಂಥ ಪರದೇಶಿಗಳಿಗೆಲ್ಲಿ? ನಿನಗಾದರೆ ಸುಪಾರಿ ಬಂಚೇ ಇವೆ- ಅಂದ್ರೆ, ದುಡ್ಡಿನ ಸುರಿಮಳೆ. ನಿಮ್ಮ ಸುಪಾರಿ ಮಂದಿ ದುಡ್ಡು ಚೆಲ್ಲೋದಕ್ಕೆ ಲೆಕ್ಕವಿಲ್ಲ. ಯಾವ ಪಿಕ್ಚರೇ ಬರಲಿ, ನಿಮ್ಮ ಜನ ಮುಕುರುತ್ತಾರೆ. ನನಗೂ ನಿನ್ನ ಸಹವಾಸದಿಂದಾಗಿ ಅಷ್ಟಿಷ್ಟು ನಿಮ್ಮ ಒಳಭಾಷೆ ಗೊತ್ತಲ್ಲ! 'ಮಂಗಳ ಮನೆ ಮಾಣಿ' ಎಂತಲೋ, 'ಕೊಂಬ್ಲೆ, ಉಂಬ್ಲೆ, ಅಂಬೇಕೊಂಬು ತಂಬಿ' ಅನ್ನೋ ಮಾತು ಬಾಲ್ಕನಿಯಲ್ಲಿ ಕೇಳಿ ಬರ್ತಿರ್ತದೆ. ಈ ಥೇಟ್ರನ ಮಾಲಕ ಆಗೀಗ ಹೇಳತ್ಲೇ ಇರ್ತಾನೆ: 'ಈ



ಕುಸನೂರ್

ಅಡಿಕೆ. ಭಟ್ರಂದಾಗ್ಯೆ ಮೇಲಿನ ಕ್ಲಾಸಿನ ಸೀಟು ಭರ್ತಿಯಾಗೋದು.' ಮಜಾ ಮಾಡೋದನ್ನು ಈ ಜನಗಳಿಂದ ಕಲೀಬೇಕು. 'ಜೈ ಸಂತೋಷಿ ಮಾ' ನಮ್ಮ ಫಿಲ್ಮ್ ಸರ್ಕೀಟಿನಲ್ಲಿ ಇಲ್ಲೇ ರಿಕಾರ್ಡ್ ಕಲೆಕ್ಷನ್ ಮಾಡಿರೋದು, ದಾಖಲೆ ಅನ್ನಬೋದು. ಮಾರಿ ಜಾತ್ರೆ ಹೊತ್ನಲ್ಲಿ ತಂದು ಹಾಕೋ ನಾಟ್ಕವಾಗಲೀ, ಸರ್ಕಸ್ಸಾಗಲೀ ಜನ್ವಾರದ ಈ ಜನರಿದ್ರೇ ನಡೆಯೋದು. ನಾನೂ ನೋಡ್ತೀನಲ್ಲ. ಕಿಸೆ ಭಾರವಾದ ತೋಟದ ಕುಳಗಳು, ದಿಲ್‌ಬಹಾರ್ ಹೋಟೆಲಿನಲ್ಲಿ, ದುಡ್ಡಿನ ಸೊಕ್ಕಿನಿಂದ ಮೂಳೆ ಜಗಿಯುವಷ್ಟು ಸುಧಾರಿಸಿದ್ದಾರೆ ಈಗೀಗ. ವ್ಯಾಜ್ಯ-ವ್ಯವಹಾರ, ಕೋರ್ಟು-ಕಟ್ಟೆ ಹೆಸರಿನಲ್ಲಿ ವಕೀಲರ ಬೆನ್ನು ಹಿಡಿದು ಅಲೆಯೋ ಜನಕ್ಕೆ ಧಾಡಿಯೆಲ್ಲಿ? ನನ್ನ ಹಾಗೆ ಸಂತೆ ಸುತ್ತ ಬೇಕಿಲ್ಲವಲ್ಲ!''

ಸುಬ್ರಾಯ ಹೆಗ್ಡೆ ಕೃತಕ ನಿಟ್ಟುಸಿರುಬಿಟ್ಟು ಬಡಬಡಿಸಿದ: ''ಅಡಿಕೆ ರೇಟಿನ ರಂಗು ರಂಗಿನ ಮಾತು ಕೇಳೋದಕ್ಕೆ ಚಂದ. ಒಳಗುಟ್ಟು ಶಿವನೇ ಬಲ್ಲ! ಕೊಳೆರೋಗ ಬಡಿದು ಅಡಿಕೆ ಚಿಗರನ್ನೇ ಕೊಚ್ಚಿ ಹಾಕ್ತದೆ. ಇನ್ನು ಕೂಲಿಗೆ ಜನಾ ಸಿಗೋದಂದ್ರೆ... ಈ ವರ್ಷ

ಬಂದೋನು ಮರು ವರ್ಷ ಬರ್ಬೇಕಾದ್ರೆ ಸೇರೇಗಾರನಿಗೆ ಅಡ್ವಾನ್ಸ್ ತಳಬೇಕು. ಆಮೇಲೆ ಆ ವಗಲ್ಬಾಜಿಯ ಮುಸುಡು ಕಾಣ್ಬೇಕಾದರೆ, ಹಸಿ ಓಲಿ ಸೂಡಿ ಹಚ್ಚಿ ಅರಸಬೇಕು. ಇನ್ನು ಕೊಳೆ ರೋಗ, ಕಟ್ಟೆ ರೋಗಕ್ಕೆ ಮದ್ದು, ಸೀಮೆಗೊಬ್ಬರ ಎಲ್ಲದಕ್ಕೂ ಬಂಗಾರದ ಬೆಲೆ. ನಮ್ಮಂಥ ಜುಜ್ಬಿ ತೋಟಗಾರರೆಲ್ಲ ಮಣ್ಣುಕಚ್ಚುತ್ತಿದ್ದಾರೆ. ಮಂಡೀ, ಅಡಿಕೆ ಮಂಡಿ ಮಾಲಕರಿಂದ ಮುಂಗೈಯ್ಯೊಡ್ಡಿ ಅಡ್ವಾನ್ಸ್ ಗೆದ್ದು, ವಾಯ್ದೆಗೆ ಸರಿಯಾಗಿ ಮಾಲು ಮುಟ್ಟಿಸೋ ಗೋಳೋ, ಶಿವನಿಗೇ ತೃಪ್ತಿ. ಅಕಸ್ಮಾತ್ ಬೆಳೆ ಕೈಕೊಟ್ಟಿತೋ, ಹೆಂಡ್ತಿ ಬಳೆ ಬ್ಯಾಂಕಿನಲ್ಲಿ ಒತ್ತೆ ಇಟ್ಟರೆ ಸರಿ!''

''ಎಂಥ ಬುರುಡೆ ಬಿಡ್ತೀ, ಸುಬ್ರಾವ್. ಸುಪಾರಿ ಕಿಮ್ಮತ್ತು ಬೇಕಾಬಿಟ್ಟಿ ಏರಿದ್ದನ್ನು ನೀನು ಮುಚ್ಚಿಡ್ತಿ. ನಾನೇನು ನಿನ್ನತ್ರ ಸಾಲ ಕೇಳಿದೆನೆ? ಏನೋ ಪುರಾನೀ ದೋಸ್ತ ಆರಾಮಾಗಿದ್ದಾನೆಂದು ಖುಷಿ ಪಡೋ ವಿಷ್ಯಾ ಎತ್ತಿದರೆ, ನೀನು ಕಣ್ಣೀರು ಹಾಕೋದನ್ನ ಬಿಡೋದಿಲ್ಲ.''

''ಇನ್ನು ಅಡಿಕೆ ಕಳ್ಳರ ಹಾವಳಿಂದ ಪಾರಾಗೋದಂದ್ರೆ...'' ಎನ್ನುತ್ತ ಸುಬ್ರಾಯ ಹೆಗ್ಡೆ ಇನ್ನೊಂದು ಹೊಸ ಸೊಲ್ಲನ್ನೆತ್ತಿಕೊಂಡ. ಹಾಗೆಯೇ ಕಿಸೆಯಲ್ಲಿ ಹಣ ಜೋಪಾನವಾಗಿದೆಯೇ ಎಂದು ಮುಟ್ಟಿ ನೋಡಿಕೊಂಡ.

''ಸುಬ್ರಾವ್, ನನಗೆಲ್ಲ ಗೊತ್ತಿದೆ ಮಾರಾಯಾ. ಚೋರಿ ಯಾವ ಬೆಳೆಗಿಲ್ಲ, ಹೇಳು, ನೆಲದ ಬೆಳೆ, ಅದು ಏನೇ ಇರಲಿ, ಅದಕ್ಕೆ ಕಾಡು ಪ್ರಾಣಿಗಳ ಕಾಟ ಇದೆ ಅನ್ನೋಣ, ಅಡಿಕೆ ಬೆಳೆ ಹಾಗಲ್ಲವಲ್ಲ. ತೆಂಗಿನ ಮರವನ್ನು ಹೇಗೋ ಹತ್ತಬಹುದು. ಆದರೆ ಬಳಕಾಡುವ ಸುಪಾರಿ ಮರ ರಾತ್ರಿ ಹತ್ತೋನು ಮೊದಲು ಇನ್ಶೂರು ಮಾಡಿರಬೇಕು, ಇಲ್ಲವೇ ಸರ್ಕಸ್ಸಿನಲ್ಲಿ ತರಬೇತಿ ಪಡೆದವನಿರಬೇಕು. ಸೂಜಿಮೊನೆಯಷ್ಟು ಅತ್ತಿತ್ತಾದರೆ, ಕೆಳಗೆ ಬಿದ್ದು ಮಣ್ಣುಕಚ್ಚುತ್ತಾನಲ್ಲ! ಎಲ್ಲೋ ಸಾವಿರಕ್ಕೊಬ್ಬ, ಜೀವ ಕೊಡಲು ತಯಾರಿದ್ದೋನೋ, ಗ್ರಹಚಾರ ಕೆಟ್ಟೋನೋ ಸುಪಾರಿ ಗಿಡ ಏರೋದಕ್ಕೆ ಟ್ರೈ ಮಾಡಿರಬೋದು... ಈಗ ಕೆಲಸಕ್ಕೆ ಬಾರದ ಮಾತು ಬೇಡ, ಫಾಯ್ದೆ ಮಾಡೋ ಐಟೆಮ್ಮಿಗೆ ಬರೋಣ. ಮುಖ್ಯ ವಿಷಯ ಅಂದ್ರೆ, ಸೊಪ್ಪುಸದೆ ತಿನ್ನೋ ನಿಮ್ಮ ಜನ ಅಂಜುಬುರುಕರು. ಅದೇ ಹಿಂದಿನಂತೆ ಜೋಗುಳ ಹಾಡಿದರೆ ಹೇಗೆ? ಪ್ರಪಂಚ ಹೇಗೆ ಮುಂದಕ್ಕೆ ಸರಿಯುತ್ತದೆ ಎಂಬುದು ನಿಮ್ಮ ಹಳ್ಳಿಗಾಡು ಜನಕ್ಕೆ ತಿಳ್ಯೋದಿಲ್ಲ. ಕಾಲ ಕಾಲಕ್ಕೆ ಬದಲಾಗುವ ಪ್ರಪಂಚಕ್ಕೆ ತಕ್ಕ ಹಾಗೆ ನಾವೂ ಬದಲಾಗಿ, ಅದಕ್ಕೆ ತಕ್ಕ ಹಾಗೆ ಹೆಜ್ಜೆ ಹಾಕಬೇಕು. ಅದೇ ಸುಪಾರಿ, ಎಲ್ಚಿ... ಅಂತ ತಿಣಿಕಿದರೆ?''

''ಅಮ್ಲಾನಿ, ನೀನು ಹೇಳಿ ಕೇಳಿ ರಂಗು ರಂಗಿನ ಚಿತ್ರ ಮಾಡೋನು. ಕಣ್ಣಿಗೆ ಬಣ್ಣ ಕಟ್ಟೋದಕ್ಕೆ ನಿನ್ನನ್ನು ಬಿಡಬೇಕು. ಕೆರೆಮನೆ ಶಿವರಾಮ ಹೆಗ್ಡೆ ನಿನ್ನ ಮುಂದೆಲ್ಲಿ? ಅಡಿಕೆ ಬಿಟ್ಟು ಹೊಸ ದಂಧೆ ಯಾವುದು ಅಂತ ಸೀದಾ ಬೊಗಳೋದನ್ನು ಬಿಟ್ಟು...''

''ನೋಡು ಸುಬ್ರಾವ್. ಹೊಸತು ಅನ್ನೋ ಮಾತೆತ್ತಿದರೆ ನಿನ್ನ ಮೈ ಮೇಲೆ ಬರೆ ಎಳೆದಂತಾಗುತ್ತದೆ. ನಿನ್ನೆ-ಮೊನ್ನೆ ಬೀದಿಯಲ್ಲಿ ಸುತ್ತಾಡುತ್ತ ಬಿದ್ದವರೆಲ್ಲ, ಇವತ್ತು ಕಂಪ್ಯೂಟರ್, ಐಟಿ ನೆಪದಲ್ಲಿ ಡಾಲರನ್ನು ಚೀಲ ತುಂಬಿಸುತ್ತಿದ್ದಾರೆ. ಕಾಸಿಗೆ ಗತಿಯಿಲ್ಲದವರೆಲ್ಲ ಅಮೆರಿಕಾಕ್ಕೆ ಜಿಗಿದು ಕೋಟಿಯ ಕಥೆ ಹೇಳುತ್ತಾರೆ. ಆದರೆ ನಿಮ್ಮ ಜನ ಮಾತ್ರ ಪಾನ್‌ತಿಂದು ಬೀದಿಯಲ್ಲಿ 'ಪಿಚಕ್' ಅಂತ ಉಗುಳೋ ಚಟ ಬಿಡೋದಿಲ್ಲ. ಹೋಗಲಿ. ನಿಮ್ಮ ಸುಪಾರಿ ಮಾತಿಗೇ ಬರ್ತೀನಿ. ನೀವು ಕತ್ತೆ ರೀತಿ ಹಗಲು, ರಾತ್ರಿ ಬೆವರು ಸುರಿಸಿ ಸುಪಾರಿ ಬೆಳೀತೀರಿ. ಅಡ್ವಾನ್ಸ್ ಗಿಟ್ಟಿಸಿಕೊಂಡ ಹಂಗಿನಲ್ಲಿ, ಮಂಡಿಯವರು ಕೇಳಿದ ದರಕ್ಕೆ ಒಪ್ಪಿ, ಅವರಿಂದ ತಿರುಪತಿ ಮಾಡ್ಸಿಕೊಂಡು ಬರ್ತೀರಿ. ಏನೇ ಹೇಳ್ಬೇಕೂಂದ್ರೆ, ಈ ತೋಟದ ಕೆನೆ ನುಂಗಿ ಹೊಟ್ಟೆ ಬೆಳ್ಸಿಕೊಳ್ಳೋರು, ಸುಪಾರೀನ ಪುಡಿ ಮಾಡಿ, ಅಚ್ಚುಕಟ್ಟಾಗಿ ಪ್ಯಾಕ್ ಮಾಡಿ ಮಾರೋ

ಕದೀಮರು. ಕೈಮೈ ಕೆಸರು ಮಾಡಿಕೊಳ್ಳೋರು ನೀವು. ಹೊಟ್ಟೆ ಬಿರಿಯೋವಷ್ಟು ಕಾಸು ಮಾಡೋರು, ಕಾರ್ಖಾನೆಯಿಟ್ಟು ಸುಗಂಧದ ಅಡಿಕೆ ಪುಡಿ ತಯಾರು ಮಾಡೋರು. ಈ ಹುಂಬತನ ನಿಮ್ಮ ಜಾತಿಗೇ ಕೇಡು. ಕೊಳೆರೋಗ ಅಂಟೋದು ಸುಪಾರಿಗಲ್ಲ. ನಿಮ್ಮಂಥ ಬೊಡ್ಡು ತಲೆಯ ಬೆಳೆಗಾರರಿಗೆ. ನಾವು ಹಿಂದುಸ್ಥಾನಕ್ಕೆ ಭಿಕಾರಿಗಳಾಗಿ ಸಿಂಧದಿಂದ ಬಂದವರು. ನಮ್ಮವರು ಫಿಲ್ಮ್, ಬಿಲ್ಡಿಂಗ್ ಕನ್‌ಸ್ಟ್ರಕ್ಷನ್ ಲೈನ್ ಹಿಡಿದು ಬಿಲಿಯ ಗಟ್ಟೆ ಕೂಡಿಹಾಕಿದ್ದಾರೆ. ಅಕ್ಕಲ್‌ಕು ಪೈಸಾ!''

ಮುಂದುವರಿಯುತ್ತ, ತಿಳಿಹೇಳಿದ ಚಂದ್ರು ಅಮ್ಲಾನಿ, ದೂರ ಹೋಗೋದು ಬೇಡ. ಆಸುಪಾಸಿನಲ್ಲಿ ಸುಪಾರಿ ಬೆಳೆಯುವ ಶಿರ್ಶಿಯನ್ನೇ ಎತ್ತಿಕೊಳ್ಳೋಣ. ಇಲ್ಲೇ, ಬೀಡಾ, ಬೀಡಿ ಅಂಗಡಿಯವರು ಸಹ ಈ ಸುಪಾರಿ ಕಟ್ಟಿನ ಮಾಲೆಯನ್ನೇ ತೂಗಿಹಾಕಿರೋದನ್ನು ಕಂಡೂ ನೀವು ತೆಪ್ಪಗೆ ಕೂತಿರುತ್ತೀರಲ್ಲ! ನನಗೆ ವ್ಯಸನವಾಗುತ್ತದೆ. ಇಷ್ಟಾಗಿಯೂ, ನಿಮ್ಮ ಜಡ್ಡು ಹಿಡಿದ ಮಂಡೆಗೆ, ಇಂತಹ ಹೊಸ ವ್ಯವಹಾರ ಸಾಧ್ಯ ಎನ್ನುವುದೂ ಹೊಳೆಯಲಿಲ್ಲವಲ್ಲ! ರಕ್ತ ಸುರಿಸಿ ನೀವು ಬೆಳೆದ ಸುಪಾರಿಯ ಫಾಯ್ದೆ, ಕಾರ್ಖಾನೆ ಇಟ್ಟು ನೋಟಿನ ಮಾಲೆ ಕೊರಳಿಗೆ ಹಾಕಿಕೊಳ್ಳುವ ಅದರ ಮಾಲಕನಿಗೆ.''

''ನಾನೇನೂ ಅಂಥ ಶುಂಠಿಕೊಂಬಲ್ಲ. ಸ್ವಲ್ಪದರಲ್ಲಿ ಸೂಚನೆ ಕೊಡು. ಅದನ್ನು ಶುರುಮಾಡಿ ಬಡಾಯಿಸದಿದ್ದರೆ ಈ ಸಂಪೇಕಟ್ಟೆ ಸುಬ್ರಾಯ ಅಪ್ಪನಿಗೆ ಹುಟ್ಟಿದೋನಲ್ಲ ಅನ್ನು.''

''ನೋಡು ಹೆಗ್ಡೆ, ವ್ಯಾಲ್ಯೂ ಆಡೆಡ್ ಸರಕು ಅನ್ನೋದು ಇವತ್ತಿನ ಸೊಲ್ಲು. ಅದು ದುಡ್ಡಿನ ಗನಿ. ನಮಕ್, ಅಂದರೆ ಉಪ್ಪು, ಅದಕ್ಕಿಂತ ಕನಿಷ್ಠ ವಸ್ತು ಉಂಟೆ? ಅದೇ ಬಡ ಉಪ್ಪನ್ನು ಛೇಷಾಗಿ ಪ್ಯಾಕ್ ಮಾಡಿ ಮಾರುತ್ತಾರಲ್ಲ ಮಾರಾಯಾ. ಅದಕ್ಕೆ ವಿಟಾಮಿನ್, ಮಣ್ಣಾಂಗಟ್ಟಿ ಎಲ್ಲ ಸೇರಿಸಿದ್ದಾರೆಂದು ಪ್ರಚಾರ ಮಾಡುತ್ತಾರಲ್ಲ. ಬಡವರಿಗೆ ಅಗ್ಗವಾಗಿ ಉಪ್ಪು ಸಿಗಲಿ ಎಂಬ ಆಶಯದಿಂದ ಗಾಂಧೀಜಿ ಸಾಲ್ಟ್ ಸತ್ಯಾಗ್ರಹ ಮಾಡಿದರು. ಅದೇ ವಿಟಾಮಿನ್‌ಯುಕ್ತ ಅಂದುಕೊಂಡ ಉಪ್ಪಿನ ಲಾಭ ಬಂಡವಾಳುದಾರರ ಖಜಾನೆ ಸೇರುತ್ತದಲ್ಲ. ತಮಾಷೆಯ ವಿಚಾರವೆಂದರೆ ಅದೇ ಸುಡುಗಾಡು ಅಯೋಡೈಡ್ ಉಪ್ಪು, ದೇಹಕ್ಕೆ ಒಳಿತೇ, ಕೆಡುಕೆ ಎಂಬಲ್ಲಿ ಇಂದಿಗೂ ವಾದ-ವಿವಾದ ನಡೆಯುತ್ತದೆ. ಈ ಭಿನ್ನಾಭಿಪ್ರಾಯದ ನಡುವೆ ಬಂಡವಾಳದಾರ ಕನೆಯನ್ನು ಕಬಳಿಸುತ್ತಾನೆ. ಹೋಗಲಿ, ನಿಮ್ಮ ಅಡಿಕೆ, ತೆಂಗು ಸಹ ಈ ಪಟ್ಟಭದ್ರರ ಮುಷ್ಟಿಯಲ್ಲಿದೆಯಲ್ಲ. ತೆಂಗಿನೆಣ್ಣೆಗೆ ಆಮ್ಲ ಎಂದರ ನೆಲ್ಲಿಕಾಯಿ- ಅದೂ ಇರಲಿಕ್ಕಿಲ್ಲ- ಅದರ ಬಣ್ಣ ಸೇರಿಸಿ, ಅಮೃತ ವರ್ಷಿಣಿ ಅಂತೆಲ್ಲ ಜನಾನ್ನ ಮರುಳು ಮಾಡುವ ಹೆಸರಿಟ್ಟು ಮಾರಾಟ ಮಾಡುತ್ತಾರಲ್ಲ. ಇನ್ನು ಕಸ್ತೂರಿ, ಕೇಸರಿ ದುಡ್ಡಿಗೆ ಪಂಥೇರು ಸಿಗುತ್ತದೆ ಅನ್ನೋ ಹಾಗೆ, ಇಪ್ಪತ್ತು ರೂಪಾಯಿಯಲ್ಲಿ ಸಿಗೋ ಸೋಪಿನಲ್ಲಿ ಇವು ಧಾರಾಳವಾಗಿ ಸೇರಿವೆ ಅಂತ ಜಾಹೀರಾತು ಮಾಡುತ್ತಾರಲ್ಲ! ಜನ ಮರುಳೋ, ಜಾತ್ರೆ ಮರುಳೋ! ನೀನು ನನ್ನ ಮಾತಿನಂತೆ ಸೆಂಟೆಂಡ್ ಸುಪಾರಿ ತಯಾರಿಮಾಡಿ ಮಾರೋದಾದರೆ, ನಾನು, ಕನಿಷ್ಠ ನನ್ನ ಪ್ರಾಂತದ ಸಿನಿಮಾ ಥೇಟ್ರುಗಳಲ್ಲಿ ಅವುಗಳ ಸ್ಲೈಡ್ ಪುಕ್ಕಟೆ ತೋರಿಸುವಂತೆ ನೋಡಿಕೊಳ್ಳುತ್ತೇನೆ. ನಿನ್ನ ದಂಥೆಗೆ ಹೀಗೆ ನನ್ನ ಅಳಿಲು ಸೇವೆ.''

ಸುಬ್ರಾಯ ಹೆಗ್ಡೆ ಹಣದ ಮುಗ್ಗಟ್ಟಿನಿಂದ ಬಗ್ಗಿಹೋಗಿದ್ದ. ಅವನಿಗೆ ಮಂಡಿಯವರ ಕಪಿಮುಷ್ಟಿಯಿಂದ ಪಾರಾಗುವುದು ಬೇಕಿತ್ತು. ಕೂಲಿನಾಲಿಯವರ ಪಡಪೋಶಿ ವಿದ್ಯೆ ಕೂಡ



ಅವನನ್ನು ಹಣ್ಣುಮಾಡಿತ್ತು. ಹಾಗೆ ನೋಡಿದರೆ ಬತ್ತದ ಬೇಸಾಯಕ್ಕೆ ಹೊಂದಿಕೊಂಡಿದ್ದ ಹೆಗ್ಡೆ, ಆ ಬೆಳೆಗೆ ಹೆಚ್ಚಿನ ಕೆಲಸಗಾರರು ಬೇಕೆಂದು, ಗದ್ದೆಗಳಲ್ಲಿ ಅಡಿಕೆ ಸಸಿಯನ್ನಿಟ್ಟು ಅದನ್ನು ತೋಟವಾಗಿ ಪರಿವರ್ತಿಸಿ ಕ್ರಮೇಣವಾಗಿ ವಿಸ್ತಾರಕ್ಕೆ ಬೆಳೆಸಿಕೊಂಡು ಬಂದವನು. ಆರಂಭದಲ್ಲಿ ತಾನೇ ಮರ ಹತ್ತಿ, ಅಡಿಕೆ ಗೊನೆ ಇಳಿಸಬಹುದು ಎಂದುಕೊಂಡ ಹೆಗ್ಡೆಗೆ, ಅದನ್ನು ಕಾರ್ಯಗತ ಮಾಡುವುದಕ್ಕೆ ಪುರುಸೊತ್ತು ಸಿಗಲಿಲ್ಲ.

ಸುಬ್ರಾಯ ಹೆಗ್ಡೆ ಲಗ್ನವಾಗಿ ಮೂರು ವರ್ಷ ಕಳೆದರೂ ಮಕ್ಕಳಾಗದಿದ್ದನ್ನು ಕಂಡು, ಅವನ ಸಮೀಪದ ಗೆಳೆಯರು ಕುಚೋದ್ಯ ಮಾಡುವುದಿತ್ತು. ಅಡಿಕೆ ತೋಟ ಹಚ್ಚಿಕೊಂಡು ತಲೆಕೆಡಿಸಿಕೊಳ್ಳುವ ನಮ್ಮ ಸುಬ್ರಾಯನಿಗೆ ಹೆಂಡತಿಯನ್ನು ಮೂಸುವುದಕ್ಕೂ ಟೈಮ್ ಇಲ್ಲ ಅಂತ ಕಾಣ್ತದೆ. ಇಲ್ಲದೇ ಹೋದರೆ ದುಂಡುಕಲ್ಲಿನಂಥ ಹೆಂಡತೀ ಕೈ ಹಿಡಿದು ಈ ಪಾಟಿ ಕಾಲವಾದರೂ ಅವಳು ಚೊಂಬು ಹಿಡಿದು ಹೊರಗೆ ಕೂತುಕೊಳ್ಳುವುದೆಂದರೇನು?

ಅಮ್ಲಾನಿಯ ಸಲಹೆಯಂತೆ ಸುಬ್ರಾಯ ಹೆಗ್ಡೆ, ತನ್ನ ಕನಸಿನ ಹೊಸ ಉದ್ಯಮದ ಎಲ್ಲ ಅಂಗಗಳ ಕುರಿತಾದ ಮಾಹಿತಿ ಪಡೆಯಲು, ಅವನಿರುವ ಹುಬ್ಬಳ್ಳಿಗೆ ಹೋದ. ಹಾಗೆಯೇ ಹುಬ್ಬಳ್ಳಿಯಲ್ಲಿರಬಹುದಾದ ವಿಶೇಷಜ್ಞರಿಂದ ಸಂತಾನ ಪ್ರಾಪ್ತಿಯಾಗದ ತನ್ನ ಪತ್ನಿ ಹಾಗೂ ಸ್ವತಃ ತನ್ನನ್ನು ತಪಾಸಣೆ ಹಾಗೂ ಚಿಕಿತ್ಸೆ ಮಾಡಿಸಿಕೊಳ್ಳಬೇಕೆಂಬ ಇನ್ನೊಂದು ವಿಚಾರವೂ ಅವನ ತಲೆಯಲ್ಲಿ ಸುಳಿಯುತ್ತಿತ್ತು. ಹುಬ್ಬಳ್ಳಿಯಲ್ಲಿ ಡಾಕ್ಟರರಿಗೇನೂ ಬರವಿಲ್ಲವೆಂಬುದನ್ನು ತನ್ನ ವಿದ್ಯಾರ್ಥಿ ದಿನಗಳಿಂದ ಬಲ್ಲ ಆತನಿಗೆ, ಯಾವ ಡಾಕ್ಟರು ಸೂಕ್ತ ಎಂಬುದನ್ನು ತಿಳಿಯಬೇಕಿತ್ತಲ್ಲ. ಆ ಸಂಬಂಧವಾಗಿಯೂ ಅಮ್ಲಾನಿಯ ಆಪ್ತ ಸಲಹೆ ನೆರವಿಗೆ ಬಂದೀತೆಂದುಕೊಂಡ.

ಸುಬ್ರಾಯ ಹೆಗ್ಡೆ ತನ್ನ ಆಗಮನದ ವಿಷಯವಾಗಿ ಅಮ್ಲಾನಿಗೆ ಮುಂದಾಗಿ ತಿಳಿಸಿದ್ದರಿಂದ ಆತ ಮನೆಯಲ್ಲೇ ಪುಣಗಿನ ಬೆಕ್ಕಿನಂತೆ ಸುತ್ತು ಹಾಕುತ್ತಿದ್ದ. ಹೆಗ್ಡೆ, ತಾನು ಪ್ರೀತಿಯಿಂದ ತಂದ ಬಾಳೆಗೊನೆ, ಯಾಲಕ್ಕಿ, ಕರಿಮೆಣಸಿನ ಪೊಟ್ಟಣಗಳನ್ನು ಅಮ್ಲಾನಿಗೆ ಕಾಣಿಕೆಯಾಗಿ ಒಪ್ಪಿಸಿದಾಗ, ಮನೆಯ ಯಜಮಾನಿಯ ಮುಖ ಹಿಗ್ಗಿ ಹರವಾಯಿತು. ಅವಳು ಬಾಗಿಲ ಮರೆಯಲ್ಲಿ ಇಣುಕಿ ಹಾಕಿ ಕಿರುನಗೆಯನ್ನು ಬೀರಿದಾಗ, ಸುಬ್ರಾಯ ಹೆಗ್ಡೆಗೆ ಒಂದು ಬಗೆಯ ಆಪ್ಯಾಯಮಾನವಾದ ಹರುಷ ತನ್ನಷ್ಟಕ್ಕೆ ಸುಳಿದಾಡಿತು. ಆಕೆ ಚಹದೊಂದಿಗೆ ಬಿಸ್ಕೀಟನ್ನು ಮುಂದಿರಿಸುವ ವೇಳೆಯಲ್ಲಿ, ಅವಳ ಮೈಮಾಟವನ್ನು ಕಂಡು ಸುಖಪಟ್ಟ. ಹೆಗ್ಡೆಯ ವರ್ತನೆಯನ್ನು ಕಂಡ ಅಮ್ಲಾನಿ, ಹಳ್ಳಿಯ ಗೊಡ್ಡುಗಳ ಸಂಸ್ಕಾರವೇ ಹೀಗೆ ಎಂದುಕೊಂಡ.

"ನಿನಗೆ ಹಿತವಾದರೆ ನೀನು ನನ್ನ ಮನೆಯಲ್ಲೇ ಖಾನಾ ತೀರಿಸಬಹುದು. ನಿನ್ನಲ್ಲಿ ಮುಚ್ಚುಮರೆ ಯಾಕೆ? ನಾವು ಮಚ್ಚಿ ಮಾಂಸ ತಿನ್ನೋರು. ಆದರೆ ದಿನಾ ಆ ಸಮಾರಾಧನೆ ನಡೆಯೋದಿಲ್ಲ. ಅದು ಪೂರೈಸೋ ಬಾಬ್ತೂ ಅಲ್ಲ. ನೀನಿರುವಷ್ಟು ದಿನ ಶುದ್ಧ ಬಮ್ಮನ್ ಕಾ ಖಾನಾ ತಯಾರಿಸೋಣ. ನನ್ನ ಮಿಸೆಸ್ ಬೈಂಗಣ್ ಕಾ ಬರ್ತಾ ಪಕಾವಿನಲ್ಲಿ ಎತ್ತಿದ ಕೈ. ನೀನು ಬೆರಳು ಚೀಪುತ್ತ... ಊಟದ ವಿಷಯ ನಿನಗೆ ಬಿಟ್ಟಿದ್ದು. ನಿನಗೆ ಅದು ಹಿಡಿಸದಿದ್ದರೆ ನಿನ್ನ ಉಡುಪಿ ಮಾಮಾ ಎಂತೂ ಇದ್ದಾನಲ್ಲ. ಇಲ್ಲಿ ನಮ್ಮಲ್ಲಿ ಎಕ್‌ಸ್ಟ್ರಾ ಕೋಣೆ ಇದೆಯಲ್ಲ. ಸ್ನಾನ, ನಿದ್ದೆ ಇಲ್ಲೇ ಪೂರೈಸಬಹುದು. ಖಾಲಿ ಪೀಲಿ ಹೋಟೆಲಿನವರ ಹೊಟ್ಟೆ ತುಂಬಿಸುವ ಕಯಾಲಿ ಯಾಕೆ?... ಇನ್ನು ನನ್ನ ಪಾದದ ಮೇಲೆ ಶನಿಕರೇಖೆ ಇದೆ ತಾನೆ? ಹೊಟ್ಟೆಪಾಡಿಗಾಗಿ ಶುಕ್ರವಾರದಿಂದ ನನ್ನ ಸಂಚಾರ ಚಾಲೂ. ಬೆಳಗಾವಿಗೆ ಫಿಲ್ಮ್ ಡಬ್ಬಾ ಸಾಗಿಸಬೇಕು. ನಾನು ಮನೆಯಲ್ಲಿಲ್ಲದಾಗ ನಿನಗೆ ಬಿಲ್‌ಕುಲ್

ಸಂಕೋಚ ಬೇಡ. ನನ್ನ ಲೈನೇ ಅಂಥಾದ್ದು. ಎಲ್ಲೆಲ್ಲಿಯ ಥೇಟರ್ ಮ್ಯಾನೇಜರ್ಸ್ ಒಮ್ಮೊಮ್ಮೆ ಮಾಲಕರು ಕೂಡ, ನಮ್ಮ ಮನೆಯಲ್ಲೇ ಝಾಂಡು ಹೊಡೀತಾರೆ. ನಿನಗೆ ನಮ್ಮ ಮೇಲೆ ಭಾರ ಬೀಳಬಾರದು ಅಂತ ಅನಿಸಿದರೆ ಬೇಕಾದ ಸಾಮಾನು ತಂದುಹಾಕು. ಅದೂ ನಾನು ಪರವೂರಿನಲ್ಲಿದ್ದಾಗ ಮಾತ್ರ. ನಾನು ಡಬ್ಬಾ ಸಹಿತ ಬರೋದು ಮುಂದಿನ ಶನಿವಾರ. ಸಂತಾನ ಪ್ರಾಪ್ತಿಯ ಮಟ್ಟಿಗೆ ಹುಬ್ಬಳ್ಳಿಗಿಂತ ಬೆಳಗಾವಿಯ ಡಾಕ್ಟರಿಗೆ ಒಳ್ಳೇ ಹೆಸರಿದೆ. ಅವರಿಂದ ಎಲ್ಲ ವಿವರಗಳನ್ನು ಕೇಳಿ ಬರುತ್ತೇನೆ.''

ಶುಕ್ರವಾರ ನಸುಕಿನಲ್ಲಿ ಅಮ್ಲಾನಿ, ಡಬ್ಬಾಗಳನ್ನು ರಿಕ್ಷಾಕ್ಕೇರಿಸಿ, ತನ್ನ ತೀರ್ಥಯಾತ್ರೆಯನ್ನು ಕೈಕೊಂಡ.

ಮೊದಲಿಗೆ ಒಂದೆರಡು ದಿನ ಹೆಗ್ಡೆಗೆ ಹೆಂಗಳೆಯೊಬ್ಬಳೇ ಇರುವ ಬಿಡಾರದಲ್ಲಿ, ಖಾಲಿ ಕೂತು ಹೊತ್ತು ಸವೆಸುವುದಕ್ಕೆ ಇರಿಸುಮುರಿ ಸಾಯಿತು. ತಲೆಮಾರಿನಿಂದ ನಡೆಸಿಕೊಂಡು ಬಂದ ತೋಟ-ಗದ್ದೆಗಳನ್ನು ಮರೆತು, ಇಲ್ಲಿ ಯಾವನೋ ಪರಜಾತಿಯವನ, ಅನ್ಯ ಸಂಸ್ಕೃತಿಯವನ ಮನೆಯಲ್ಲಿ ಕುಂಡೆ ಸವೆಸುವುದಕ್ಕೆ ಅಳುಕಾಯಿತು. ಎಲ್ಲಿ ಮಂಗನ ಹಿಂಡು ಬಂದು ಅಡಿಕೆ-ತೆಂಗುಗಳ ಮೇಲೆ ಕಿಷ್ಕಿಂಧಾಕಾಂಡ ನಡೆಸಿದೆಯೋ, ಅಡಿಕೆ ಸೊಸೈಟಿಗೆ ಕೊಳೆರೋಗದ ಮದ್ದು ಬಂದಿದೆಯೋ... ಅಡಿಕೆ ಸೊಸೈಟಿ ಮೆಂಬರನಾಗಿ, ಬೆಳೆಯನ್ನು ಮಂಡಿ ಸಾಹುಕಾರನಿಗೆ ಕೊಡುವುದು ಸರಿಯೇ ಎಂಬ ವಿಚಾರಗಳು ಹೆಗ್ಡೆಯನ್ನು ಕಾಡಿದವು. ಸದ್ಯ ಶಿರ್ಶಿ ಮಾರಿಜಾತ್ರೆಗೆ ವಕ್ಕರಿಸುವ ನೆಂಟರ ಊಟ-ಉಪಚಾರಗಳಿಗಾಗಿ ತಯಾರಿ ಮಾಡಬೇಕಾದ ಪ್ರಸಂಗವೂ ಅವನ ಮಸ್ತಿಷ್ಕವನ್ನು ಕೆದಕಿತು. ಆದರೆ ಅಮ್ಲಾನಿ ಬಣ್ಣಿಸಿದ ಭವಿಷ್ಯದ ಭವ್ಯ ಚಿತ್ರ, ಆ ಎಲ್ಲ ನೆನಪುಗಳನ್ನು ಮರೆಸಿಬಿಟ್ಟಿತು. ಮುಂದಕ್ಕೆ ತಾನು ಸುಗಂಧ ಅಡಿಕೆ ಪುಡಿಯ ಪೊಟ್ಟಣಗಳು ತುಂಬಿದ ಸ್ವಂತ ವ್ಯಾನಿನಲ್ಲಿ ಭರಮ್ಮಿನಿಂದ ಓಡಾಡುವ ಸಂಭವ ಅವನನ್ನು ರೋಮಾಂಚನಗೊಳಿಸಿತು. ಆ ಹಗಲುಗನಸಿನ ತಂಪು ಅವನಲ್ಲಿ ನಗೆಯನ್ನು ಹೊಮ್ಮಿಸಿತು. ಈ ಅಡಿಕೆ ಪುಡಿಯ





ವ್ಯವಹಾರ ಸುರಳೀತವಾಗಿ ನಡೆದು, ಈ ಮಂಡಿ ಯಮ ಕಿಂಕರರ ಪಾಕದಿಂದ ತಪ್ಪಿಸಿಕೊಳ್ಳುವಂತಾಗಲಿ ಎಂದು ಆತ, ಕಣ್ಣು ಮುಚ್ಚಿ ಇಡಗುಂಜಿ ಗಣಪತಿ ದೇವರಿಗೆ ಕೈ ಮುಗಿದ.

ಸುಬ್ರಾಯ ಹೆಗ್ಡೆ ಮುಂಜಾನೆ, ಅಮ್ಲಾನಿಯ ಪತ್ನಿ ತಂದು ಕೈಗೆ ಹಿಡಿದ ಚಹವನ್ನು ಗುಟುಕರಿಸಿದವನೆ, 'ಸಂಯುಕ್ತ ಕರ್ನಾಟಕ' ಕೊಳ್ಳಲು ಪೇಟೆಯತ್ತ ಹೋಗುತ್ತಿದ್ದ. ಅಲ್ಲಿ ಗೂಡಂಗಡಿಗಳಿಂದ ಹಿಡಿದು ಕಿರಾಣಿ ದುಕಾನಿನವರ ತನಕ ಅಡಿಕೆಪುಡಿ-ಗುಟ್ಕಾ ಪುಡಿಕೆಗಳ ಸರಮಾಲೆ ನೋಡಿ, ತನ್ನ ಭವಿತವ್ಯದ ವ್ಯವಹಾರದ ವ್ಯಾಪಕತೆಯನ್ನು ನೆನೆದು ಹರ್ಷ ಭರಿತನಾದ. ಬಹು ಮಾಳಿಗೆಯ ಇಮಾರತಿನ ಕಟ್ಟಡಗಳಿಗೆ ತೂಗುಬಿಟ್ಟ ದಿಗ್ಗಜ ಡಾಕ್ಟರುಗಳ ಬೋರ್ಡುಗಳನ್ನು ಕಂಡು ದಿಗಿಲಾದ. ಇಲ್ಲಿ ಕೇವಲ ಒಂದೇ ಒಂದು ಜಿಲ್ಲೆಗೆ ನೇತುಕೊಂಡ ಡಾಕ್ಟರುಗಳಷ್ಟು ತಮ್ಮ ಇಡೀ ಶಿರ್ಸಿಪೇಟೆಯಲ್ಲಿದ್ದಾರೆಯೆ? ತಾನು ಇಲ್ಲಿ ಕಾಲೇಜಿಗೆ ಹೋಗುತ್ತಿದ್ದ ದಿನಗಳಲ್ಲಿ ಈ ಡಾಕ್ಟರುಗಳ ಮಹಾಪಡೆಯೇ ಇರಲಿಲ್ಲವೋ ಏನೋ ಎಂದು ಅನುಮಾನಪಟ್ಟ. ಇಲ್ಲಿಗಿಂತ, ಅಮ್ಲಾನಿ ಹೇಳುವಂತೆ ಬೆಳಗಾವಿಯಲ್ಲಿ ಇರುವುದಾದರೆ ವಿಶೇಷಜ್ಞರ ಚಿಕಿತ್ಸೆಯಿಂದ ಮಕ್ಕಳಾಗುವುದು ನಿಶ್ಚಯವೆಂದು ಹೆಗ್ಡೆ ಆಶಾವಾದಿಯಾದ. ತನ್ನ ಮುದ್ದಿನ ಮಡದಿ ಜೋಗುಳವನ್ನು ಉಲಿಯುತ್ತ, ತೊಟ್ಟಿಲು ತೂಗುವ ಸತ್‌ಪ್ರತೀಕ್ಷೆ ಅವನನ್ನು ಪುಳಕಿತವಾಗಿಸಿತು. ಈ ಯೋಚನಾಲಹರಿ ಅವನಲ್ಲಿ ತನ್ನ ಪ್ರಿಯ ಪತ್ನಿಯ ಸವಿನೆನಪನ್ನು ಮರುಕಳಿಸಿತು. ಹೆಂಡತಿಯನ್ನು ಅಗಲಿ ಒಂದು ವಾರ ಕಳೆಯಲಾರದ ದುರ್ಬಲ ಮನಸ್ಕನೇ ತಾನು?' ಎನ್ನುತ್ತ ಹೆಗ್ಡೆ ತನ್ನ ಚಂಚಲ ಮನಸ್ಸನ್ನು ಹದ್ದು ಬಸ್ತಿನಲ್ಲಿಡುವ ಯತ್ನ ಮಾಡಿದ.

''ಇದೇನು ಸಾಹೇಬರು! ಝೋಲಿ ಬಿಟ್ಟರೆ ಪೇಪರ್ ಅಂಗ್ಡಿ, ಅದನ್ನು ಬಿಟ್ಟರೆ ಕಾನಡೀ ಪೇಪರ್! ಅಂಥ ವಿಶೇಷ ಸಮಾಚಾರ ಪೇಪರಿನಲ್ಲಿ ದಿನಾ ಏನು ಮಣ್ಣು ಬರುತ್ತದೆ? ನಮ್ಮ ಸಿಂಧೀ ಪತ್ರಿಕೇಲಿ ಕಾಶ್ಮೀರ, ಸಿಟಿಬಿಟಿ ಲಂಕಾದಹನ, ದಿಲ್ಲೀದರ್ಬಾರ್ ಬಿಟ್ಟರೆ ಮಣ್ಣು ಸಹ ಇರೋದಿಲ್ಲ. ನನಗೇನೋ ದಿನಾ ಓದಿದ್ದನ್ನೇ ಓದಿ ವಾಕರಿಕೆ ಬರುತ್ತದೆ. ಅಂಥದರಲ್ಲಿ ನೀವು ಪೇಪರನ್ನು ಕೆಳಗಿಡೋದೇ ಇಲ್ಲ. ಇಲ್ಲಿ ಕೂತು ಬೋರಾದರೆ ಡ್ರಾಯಿಂಗ್ ರೂಮಿನಲ್ಲಿ ಟೀವಿ ನೋಡಬಹುದಲ್ಲ. ನಿಮಗೂ ಚೇಂಜ್. ನನಗೂ ಕಂಪನಿ. ಬಾಕಿ ಮನೆಗಳಲ್ಲಾದರೆ ಟೀವಿ ಮುಂದೆ ಮಕ್ಕಳ ಸಂತೆ, ಗಲಾಟೆ. ನಮ್ಮಲ್ಲಿ ಈ ರಗಳೆ ಎಲ್ಲಿ? ಈ ಭಾಗಕ್ಕೆ ಕೇಬಲ್ ಟೀವಿ ನಡೆಸೋನು ನಮ್ಮ ಸಿಂಧಿಯೆ-ದೂರದಲ್ಲಿ ನನಗೆ ಸಂಬಂಧ. ಅವನಿಗೆ ಟೆಲಿಫೋನ್ ಮಾಡಿದ ಕ್ಷಣ ಹೊಚ್ಚ ಹೊಸ ಫಿಲ್ಮ್ ಹಾಕ್ತಾನೆ. ಸಿಂಧಿಗಳಾದ ನಮ್ಮಲ್ಲಿ ಈ ಮಟ್ಟಿಗೆ ಒಗ್ಗಟ್ಟಿದೆ. ಥೇಟ್ರಲ್ಲಿ ಸಿನಿಮಾ ಪುಕ್ಕಟೆ. ಯಜಮಾನ್ರು ಆ ಲೈನಿನಲ್ಲಿದ್ದಾರೆ ಅಂತ ಮಾತ್ರವಲ್ಲ. ಈ ಸಿನಿಮಾ ಜಾಲ ನಮ್ಮ ಜನಗಳ ಮುಷ್ಟಿಯಲ್ಲಿದೆ. ಎಲ್ಲ ಥಿಯೇಟ್ರಿಗೂ ಫ್ರೀಪಾಸ್ ಇದೆ-ಸುದರ್ಶನ ಟಾಕೀಜೊಂದು ಬಿಟ್ಟು.''

ನಾಚಿಕೆಮಿಶ್ರಿತ ಸಂಕೋಚದಿಂದ ಹೆಗ್ಡೆ ಡ್ರಾಯಿಂಗ್‌ರೂಮಿಗೆ ಪ್ರವೇಶಿಸಿದ. ಒಳ ಹೊಕ್ಕು, ಗಲೀಜಾದ ಸೋಫಾ, ಕಿಟಕಿ ಪರದೆಗಳನ್ನು ಕಂಡು ಹೇಸಿಕೆಯಾದರೂ ತನ್ನ ಖೋಲಿಗೆ ಹಿಂದಿರುಗುವುದು ಸರಿಯೆನಿಸಲಿಲ್ಲ. ಮಿಸೆಸ್ ಅಮ್ಲಾನಿ ಟೀವಿ ಚಾಲೂ ಮಾಡಿದಳು. ಹೆಗ್ಡೆ ಅವಳೆದುರಿಗೆ ಕೊಳೆಯಾದ ಸೋಫಾದ ಮೇಲೆ ಕುಕ್ಕರಿಸಿದ. ಟೀವಿಯಲ್ಲಿ ಇಂಗ್ಲಿಷ್ ಮೂವಿ ಶುರುವಾಗಿತ್ತು. ಅವನು ಆ ಬಗೆಯ ಚಲನ ಚಿತ್ರವನ್ನು ತನ್ನ ಆಯುಷ್ಯದಲ್ಲೇ ನೋಡಿರಲಿಲ್ಲ. ಭಾಷೆಯನ್ನು ಅನುಸರಿಸುವುದಕ್ಕೆ ಆಗದಿದ್ದರೂ ಚಲನವಲನ ಅವನ ಮೈಮರೆಸಿತು. ಉರಿಯಾದರೂ ಕಾರವಾದ ತಿಂಡಿಯನ್ನು ಮೆಲ್ಲುವಾಗ ಸಿಗುವ ಸುಖದಂತೆ, ಚಿತ್ರ ಸದಭಿರುಚಿಯದಲ್ಲ ಎನಿಸಿದರೂ ಅವನ ಮೈಮನವನ್ನದು ತಣಿಸಿತ್ತು. ಅರ್ಧ ಗಂಟೆ ಕಳೆಯುವುದರೊಳಗೆ ಆತ ತನ್ನನ್ನು ತಾನು ಸಂಪೂರ್ಣ ಟೀವಿಗೆ ಅರ್ಪಿಸಿಕೊಂಡ. ಅದು ಮೋಹಕವಾಗಿ ಅವನನ್ನು ಸೆರೆಹಿಡಿದಿತ್ತು.

"ನನ್ನ ಕಸಿನ್, ಕೇಬಲ್‌ವಾಲಾ ಗಿಡೂಮಲ್‌ಗೆ ಹೇಳಿ ಕಳಿಸಿ ಈ ಸ್ಪೆಶಲ್ ಇಂಗ್ಲಿಷ್ ಚಿತ್ರ ಹಾಕಿಸಿದ್ದೆ. ಇಂಥದನ್ನು ನೀವು ಈ ಮೊದಲು ನೋಡಿರಲಿಕ್ಕಿಲ್ಲ. ಇದನ್ನು ಸಾರ್ವಜನಿಕವಾಗಿ ನೋಡಲಿಕ್ಕೆ ಬರೋದಿಲ್ಲ. ಇದಕ್ಕೆ 'ಬ್ಲೂಫಿಲ್ಮ್' ಎನ್ನುತ್ತಾರೆ. ಹೇಗಿದೆ ಚಿತ್ರ?", ಮಿಸೆಸ್ ಅಮ್ಲಾನಿ ಕೇಳಿದಳು.

"ಬ್ಲೂಫಿಲ್ಮ್ ಇರಬಹುದು. ನನ್ನ ಮಟ್ಟಿಗೆ ಅದು ರೆಡ್‌ಫಿಲ್ಮ್ ಆಗಿ ಪರಿಣಮಿಸಿತು. ಯಾಕೆಂದರೆ ನೆತ್ತರು ಪುಟಿಯುವಂತೆ ಮಾಡಿತು."

ಹೆಗ್ಡೆ, ಪುಂಗಿಯ ಚಲನೆಗೆ ಹೆಡೆಯಾಡಿಸುವ ನಾಗನಂತಾಗಿದ್ದ. ಹೆಗ್ಡೆ ತನ್ನ ವಶೀಕರಣಕ್ಕೆ ಬದ್ಧನಾಗಿದ್ದಾನೆಂಬುದನ್ನು ಅರಿತ ಮಿಸೆಸ್ ಅಮ್ಲಾನಿ, ಅವನನ್ನು ನೇರವಾಗಿ ತನ್ನ ಶಯ್ಯಾಗೃಹಕ್ಕೆ ಕರೆದೊಯ್ದಳು. ಕೋಲೇಬಸವನಂತೆ ತಲೆ ತಗ್ಗಿಸಿ ಹೆಗ್ಡೆ ಅವಳನ್ನು ಹಿಂಬಾಲಿಸಿದ. ಅಲ್ಲಿಗೆ ಹೋದವಳೇ ಒಂದು ನಿಮಿಷದ ಮಾತಿಗೆ ನೈಟ್ ಲ್ಯಾಂಪ್ ಹೊತ್ತಿಸಿ, ಅದು ಸೂಸುವ ಮಂದ ಬೆಳಕಿನಲ್ಲಿ ತನ್ನ ಅರೆ ನಗ್ನ ರೂಪವನ್ನು ತೋರಿಸಿ, ಅನಂತರ ಬೆಳಕನ್ನು ಆರಿಸಿಬಿಟ್ಟಳು. ನಿಸರ್ಗ ತನ್ನ ಯಕ್ಷಿಣಿ ಪ್ರವಾಹವನ್ನು ಹರಿಸಿದಾಗ ಅವರಿಬ್ಬರೂ ಬೆಸೆದುಕೊಂಡರು.

ಮರುದಿನದಿಂದ ಮಿಸೆಸ್ ಅಮ್ಲಾನಿ ಅಡುಗೆ ಮಾಡುವ ಶ್ರಮ ಕೈಬಿಟ್ಟಳು. ಬೆಳಗ್ಗೆ ಸ್ನಾನ ಇತ್ಯಾದಿ ಪೂರೈಸಿ, ಜೋಡಿಯಾಗಿ ಹೊರಬಿದ್ದ ಅವರು, ರೆಸ್ಟೋರೆಂಟ್, ಬಾರ್, ಸಿನಿಮಾ ಎಂದು ಹೊರಗೇ ಮೋಜಿನಿಂದ ಹೊತ್ತು ಕಳೆದರು. ಹೊಸ ಜೀವನ ಶೈಲಿಯೊಂದಕ್ಕೆ ಹೊಂದಿಕೊಂಡ ಅನುಭವ ಹೆಗ್ಡೆಗೆ ಆದಾಗ ಅದರ ಸರಿ ತಪ್ಪುಗಳನ್ನು ಸೋಸುವ ವ್ಯವಧಾನ ಅವನಲ್ಲಿ ಕಿಂಚಿತ್ತಾದರೂ ಉಳಿದರಲ್ಲವೆ? ಮಲಗುವುದಕ್ಕೆ ಮನೆಗೆ ಬರುತ್ತಿದ್ದರು. ಬದಲಾವಣೆಗೆಂದು 'ಮೋಹಿನಿ ವಿಲಾಸ'ದಲ್ಲಿ ಒಂದು ರಾತ್ರಿ ರಮಿಸಿಯೂ ಬಂದರು.

ಹೇಳಿದಂತೆ ಅಮ್ಲಾನಿ ಶನಿವಾರ ಮನೆಗೆ ಹಿಂದಿರುಗಿದ. ಹೆಗ್ಡೆಯ ಸಂತೃಪ್ತ ಭಾವವನ್ನು ಗ್ರಹಿಸಿದ ಅವನು, ತಾನು ತಿರುಗಾಡಿದ ಶಹರಗಳಲ್ಲಿ ಅಡಿಕೆ ಪುಡಿಯ ಮಾರುಕಟ್ಟೆಯ ವಿಸ್ತಾರ ವ್ಯಾಪ್ತಿಯನ್ನು ಹೆಗ್ಡೆಗೆ ಕಣ್ಣುಕಟ್ಟುವಂತೆ ಬಿಂಬಿಸಿದ. ಸುಗಂಧ ಸುಪಾರಿಯ ಉತ್ಪಾದನೆಗೆ ಬೇಕಾದ ತಾಂತ್ರಿಕ ಮಾಹಿತಿಯನ್ನೂ, ಅವಶ್ಯ ಬೀಳುವ ಯಂತ್ರಸಾಮಗ್ರಿಗಳ ವಿವರಗಳನ್ನೂ ಸಂಪಾದಿಸಿಕೊಂಡು ಬಂದಿರುವುದಾಗಿ ಅಮ್ಲಾನಿ ಹೆಗ್ಡೆಯ ಕಿವಿಯಲ್ಲಿ ಉಸುರಿದ. ಇಂಥ ಟ್ರೇಡ್ ಸೀಕ್ರೆಟ್‌ನ್ನು ಯಾರೊಡನೆಯೂ ಬಾಯಿ ಬಿಡಬಾರದಾಗಿ ಎಚ್ಚರಿಕೆಯನ್ನು ನೀಡಿದ ಅಮ್ಲಾನಿ, "ಯಂತ್ರೋಪಕರಣ ಕೊಳ್ಳಲು ಮುಂಬಯಿಯೇ ಸಮರ್ಪಕ. ನಿನಗೂ ಆ ಮಹಾನಗರದ ದರ್ಶನವಾದಂತಾಯಿತು. ನಾನಿರೋವಾಗ ಭಾಷಾ ಸಮಸ್ಯೆ ಇರೋದಿಲ್ಲ. ಇದಕ್ಕೂ ಮಹತ್ತ್ವದ್ದೆಂದರೆ, ನಿನ್ನ ಪತ್ನಿಯ

ಗರ್ಭಧಾರಣೆಯ ವಿಷಯದಲ್ಲಿ ಅಲ್ಲಿಯ ತಜ್ಞರ ಸಲಹೆಯನ್ನು ಪಡೆಯಬಹುದು. ಬೆಳಗಾವಿ ಡಾಕ್ಟರರಿಂದ ಅಲ್ಲಿಯ ತಜ್ಞರಿಗೆ ಪರಿಚಯ ಪತ್ರ ತಂದಿದ್ದೇನೆ. ಬೆಳಗಾವಿಯ ಡಾಕ್ಟರು ಮುಂಬಯಿ ತಜ್ಞರ ತಪಾಸಣೆ ಹಾಗೂ ಚಿಕಿತ್ಸೆಯೇ ಠೀಕ್ ಅಂತ ಅಭಿಪ್ರಾಯಪಟ್ಟರು. ಒಂದೇ ಸುತ್ತಾಟದಲ್ಲಿ ಎರಡು ಮಹತ್ತ್ವದ ಕಾರ್ಯವನ್ನು ಪೂರೈಸಿಯಾಗಿದೆ. ಸ್ವರ್ಗಕ್ಕಿನ್ನು ಮೂರೇ ಗೇಣು ಎಂದು ಹೆಗ್ಡೆ ಮನದೊಳಗೆ ಕುಣದಾಡಿದ. ''ಊರಿಗೆ ಹೋಗಿ, ಮುಂಬಯಿ ಟ್ರಿಪ್ಪಿಗೆ ಬೇಕಾಗುವಷ್ಟು ನಗದಿ ಹಿಡಿದುಕೊಂಡು ಬಾ'' ಎಂದು ಹೆಗ್ಡೆಗೆ ಅಮ್ಲಾನಿ ಆದೇಶವಿತ್ತ.

ಈ ಎಲ್ಲ ವಿಚಾರ, ಸಂಭ್ರಮದ ನಡುವೆ ಹೆಗ್ಗೆಗೆ ಸಹಜವಾಗಿ ಹುಟ್ಟೂರಿನ ಜ್ಞಾಪಕವಾಗುತ್ತಿತ್ತು. ಎಲ್ಲ ವಿಚಾರ ಸರಣಿಗಳನ್ನು ಮಥಿಸಿದ ಮೇಲೆ, ಇತ್ಯರ್ಥಕ್ಕೆ ಮುಟ್ಟಿದ ಅವನ ತಾತ್ಪರ್ಯ ಹೀಗೆ: ''ಅಡಿಕೆ ಬೆಳೆದರೆ ಅಡಿಕೆ ಪುಡಿ ಅಲ್ಲವೇ? ಬೆಳೆಯನ್ನೇ ಕಡೆಗಾಣಿಸಿದರೆ! ಎರಡು ದೋಣಿಗಳ ಮೇಲೆ ಕಾಲಿಟ್ಟಂತಲ್ಲವೇ?''

ಅಮ್ಲಾನಿ ದಂಪತಿಗಳಿಗೆ ಹೇಳಿ, ಮರುದಿನ ಬೆಳಗ್ಗೆ ಹೆಗ್ಡೆ, ಮೊದಲಿನ ಬಸ್ಸೇರಿ ಊರಿಗೆ ಸೇರಿದ. ಅವನ ಜೀವದ್ರವವೆಲ್ಲ ಆರಿ ಹೋದಂತೆ ಅನಿಸಿತು. ಊರಲ್ಲಿದ್ದ ಎರಡು ರಾತ್ರಿ ಆಸೆಗಣ್ಣಿಂದ ತನ್ನತ್ತ ನೋಡುತ್ತಿದ್ದ ಪತ್ನಿಯ ಸೆಳೆತ ಪರಿಣಾಮ ಬೀರಲಿಲ್ಲ.

ಆಸ್ತಿಯನ್ನು ಅಡವಿಟ್ಟಾದರೂ ತನ್ನ ಉದ್ದಿಮೆಗೆ ಬಂಡವಾಳ ಒದಗಿಸಬೇಕೆಂಬ ತುಡಿತ ಅವನನ್ನು ಕಾಡುತ್ತಿದ್ದರೂ, ಆ ಸಂದಿಗ್ಧ ಒದಗಲಿಲ್ಲ. ಮುಂದಕ್ಕೆ ಬೆಲೆ ಏರಬಹುದೆಂದು ಕಾದಿಟ್ಟ ಏಲಕ್ಕಿಯನ್ನೂ, ಕರಿ ಮೆಣಸನ್ನೂ ಮಾರಿ ಅಷ್ಟಿಷ್ಟು ಹಣ ಒಟ್ಟುಗೂಡಿಸಿದ. ಹೆಂಡತಿ ತಾನು ಉಳಿಸಿದ ಆಪದ್ಧನವನ್ನು ಕೈಯೆತ್ತಿ ಕೊಟ್ಟಳು. ಅವನ ಪಾಲಿಗೆ ಬಂದ, ಕಾಡಿನಲ್ಲಿ ಬೆಳೆದ ಆರು ಹಲಸಿನ ಮರಗಳನ್ನು ಮಾರಿದ. ಇಷ್ಟೆಲ್ಲ ಚುರುಕಾಗಿ ಹಣ ಸಂಗ್ರಹಣೆಯಾದದ್ದು ತನ್ನ ಭವಿಷ್ಯದ ಉದ್ದಿಮೆಯ ಶುಭಸೂಚಕ ಶಕುನವೆಂದು ಹೆಗ್ಡೆ ಬಸ್ಸು ಹತ್ತಿದ. ಅಡಿಕೆಯ ವ್ಯವಹಾರವನ್ನೇ ಕನವರಿಸುತ್ತಿದ್ದವನಿಗೆ, ಹುಬ್ಬಳ್ಳಿ ಬಸ್ ಸ್ಟ್ಯಾಂಡಿನ ಗಿಜಗಿಜಿಯೇ ಎಚ್ಚರಗೊಳಿಸಿದ್ದು.

ದ್ವಾರಕಾ ಭವನದಲ್ಲಿ ಎರಡು ತುತ್ತು ತಿಂದು, ಅಮ್ಲಾನಿಯ ಬಿಡಾರ ತಲುಪುವಾಗ ಗಂಟೆ ಹತ್ತಾಗಿತ್ತು. ಮೆಲ್ಲಗೆ ಕದ ತಟ್ಟಿದಾಗ ಯಾರೂ ಪ್ರತಿಕ್ರಿಯಿಸಲಿಲ್ಲ. ಸತಿ ಪತಿಯರು ಗೆಳೆಯರಲ್ಲಿಗೆ ಹೋಗಿದ್ದಾರೋ, ನಿದ್ದೆಯಲ್ಲಿ ಮೈಮರೆತಿದ್ದಾರೋ ಎಂಬ ದೃಷ್ಟಿಯಿಂದ ಕಿಟಕಿಯಿಂದ ಇಣುಕಿ ನೋಡಿದ. ಅಬ್ಬಾ! ಆತನು ಕಂಡ ದೃಶ್ಯ ಅವನನ್ನು ನಡುಗಿಸಿತು. ಆ ಚಳಿಯ ಇರುಳಿನಲ್ಲಿಯೂ ಆತ ಬೆವತುಬಿಟ್ಟ. ಮಿಸೆಸ್



ಅಮ್ಲಾನಿಯ ತುಂಬುದೇಹ, ವಿವಸ್ತ್ರವಾದ ಶೋಕೀಲಾಲನೊಂದಿಗೆ ತಳ್ಕೆ ಹಾಕಿಕೊಂಡಿತ್ತು. ಹೆಗ್ಡೆಯ ಎದೆಗೆ ಶೂಲವಿಟ್ಟಂತಾಯಿತು.

ಅಲ್ಲಿಂದ ಬಂದು, ಮನೆಯ ಮೆಟ್ಟಿಲ ಮೇಲೆ ಕುಳಿತು, ಹಿಂದಿನದೆಲ್ಲವನ್ನೂ ಸ್ಮರಿಸಿಕೊಂಡ. ತಾನೂ ಅವಳೊಂದಿಗೆ ಸರಸವಾಡಿರಲಿಲ್ಲವೇ? ತಾನೆಂಥ ಸಂಭಾವಿತ ಎಂದು ನೆನೆದುಕೊಂಡಾಗ ಅವನು ಸಮಾಧಾನಪಟ್ಟುಕೊಂಡ.

ಪೆಟ್ಟು ತಿಂದ ನಾಯಿ, ಬಾಲ ಮುದುರಿಕೊಂಡು ಹಿಂದೆ ಸರಿಯುವಂತೆ, ಹೆಗ್ಡೆ, ತನ್ನ ಪ್ರಾರಬ್ಧವನ್ನು ಹಳಿದುಕೊಳ್ಳುತ್ತ ಯಾವುದೋ ಅಗ್ಗದ, ಕೊಳೆ ತುಂಬಿದ ಹೋಟೆಲಿನಲ್ಲಿ ರೂಮು ಹಿಡಿದ. ಅಲ್ಲಿ ತಿಗಣೆ ಕಚ್ಚಿದಾಗಲೆಲ್ಲ ಎಚ್ಚರವಾಗುತ್ತಿತ್ತು. ಆಗ ತನ್ನಷ್ಟಕ್ಕೆ ತರ್ಕ-ವಿತರ್ಕ ಮಾಡುತ್ತಿದ್ದ. ''ಒಂದುವೇಳೆ ತಾನು, ಮಿಸೆಸ್ ಅಮ್ಲಾನಿ ಪರಪುರುಷನೊಂದಿಗೆ ಲಲ್ಲೆಗರೆದದ್ದನ್ನು ಕಂಡು ಗದರಿಸಿದ್ದರೆ... ಅವಳು, 'ನೀನು ನನ್ನ ಕೈ ಹಿಡಿದ ಪತಿದೇವನಲ್ಲವಲ್ಲ! ಗಂಡನಿಗೇ ಇಲ್ಲವಾದ ಚಿಂತೆ ನಿನಗೇಕೆ?' ಎಂದು ತನ್ನನ್ನು ಕೀಳಾಗಿ ಕಂಡು ಅಪಮಾನ ಮಾಡುತ್ತಿದ್ದಳು. ''ಹೇಗೋ ಇರುಳನ್ನು ಕಳೆದು, ಬೆಳಗ್ಗೆ ಎಂದಿನಂತೆ ಹೊರಗೆ ಹೋಗಿ, ದಿನಪತ್ರಿಕೆಯನ್ನು ಕೊಂಡು, ರೂಮಿನಲ್ಲಿ ತಿರುವಿಹಾಕಿ ಹೊತ್ತನ್ನು ಸಾಗಿಸುವ ಯತ್ನ ಮಾಡಿದ. ಅದರಲ್ಲಿ ಪ್ರಕಟವಾದ ವಾರ್ತೆಯೊಂದು ಅವನನ್ನು ಹಿಂಡಿಬಿಟ್ಟಿತು. ಮುನ್ನಿರುಳು, ಪೊಲೀಸ್ ಪಡೆ ಅಮ್ಲಾನಿಯ ಮನೆಯ ಮೇಲೆ ಧಾಳಿ ನಡೆಸಿದಾಗ ಅದು ವೇಶ್ಯಾದಂಧೆ ನಡೆಸುವ ಅಡ್ಡೆಯೆಂದು ಸಾಬೀತಾಯಿತಂತೆ. ಹಲವಾರು ರಿಸ್ಟ್‌ವಾಚ್, ಉಂಗುರ, ಪರ್ಸ್ ಇವುಗಳ ಜೊತೆಗೆ ಬಹಳ ಮೊತ್ತದ ನಗದು ಸಿಕ್ಕಿತಂತೆ. ತಾನು ಮಶಿನರಿಗೆಂದು ಶಿರ್ಶಿಯಿಂದ ತಂದ ಹಣ ಅಮ್ಲಾನಿಯ ವಶಕ್ಕೆ ಕೊಟ್ಟಿದ್ದೆನಲ್ಲ, ಅದಕ್ಕೂ ನೀರು ಬಿಡುವುದೆ! ಇನ್ನೇನು? ಹಲವು ಜನರ ಸಹವಾಸಕ್ಕೆ ಮೈಮಾರಿಕೊಂಡವಳು ಅವಳು... ಸದ್ಯ ಪೊಲೀಸರು ಛಾಪಾ ಹಾಕುವಾಗ ನಾನೂ ಅಲ್ಲಿದ್ದು ಸಿಕ್ಕಿಬೀಳಲಿಲ್ಲವಲ್ಲ ಎನ್ನುತ್ತ ಇದ್ದದ್ದರಲ್ಲೇ ಸಮಾಧಾನಪಟ್ಟುಕೊಂಡ.

ಕೊನೆಗೊಮ್ಮೆ ಅಮ್ಲಾನಿಯ ಗೆಳೆತನಕ್ಕೆ ಸಲಾಮು ಹೊಡೆದು ಶಿರ್ಶಿಯ ಬಸ್ಸು ಹತ್ತಿದ. ಮನೆಗೆ ಹೊಕ್ಕ ಗಳಿಗೆಯಿಂದ ಹೆಗ್ಡೆ ದೈತ್ಯನಂತೆ ದುಡಿಯತೊಡಗಿದ. ಆಳುಕಾಳುಗಳ ಹಾದಿ ಕಾಯದೇ, ಗೊಬ್ಬರದ ಬುಟ್ಟಿಯನ್ನೂ ತಾನೇ ಹೊತ್ತ. ತೆಂಗುಕಂಗುಗಳಿಗೆ ಪಂಪ್ ಚಲಾಯಿಸಿ ತಾನೇ ನೀರು ಹರಿಸಿದ, ತನ್ನ ಪಾಪಕಾರ್ಯಕ್ಕೆ ಈ ಬಗೆಯ ದುಡಿತ ಸರಿಯಾದ ಪರಿಹಾರವೆನಿಸಹತ್ತಿತು ಹೆಗ್ಡೆಗೆ. ಶಾರೀರಿಕ ಶ್ರಮದಿಂದ ಹಳೆಯ ಕೆಟ್ಟ ನೆನಪು ತಲೆಯನ್ನು ಕೊರೆಯಲಾರದು ಎಂದು ಹೇಳಿಕೊಂಡ. ಹೆಗ್ಡೆ ಈ ರೀತಿಯಲ್ಲಿ ಬೆವರು ಸುರಿಸೋದನ್ನು ಕಂಡ ಕೂಲಿಯಾಳುಗಳು, ಹಳ್ಳಿಯ ನೆರೆಹೊರೆಯವರು, 'ಪೇಟೆಗೆ ಹೋಗಿ ಬಂದ್ಮೇಲೆ ಹೆಗ್ಡೇರು ಬದಲಾಯಿಸಿದ್ರು' ಅಂದುಕೊಂಡರು. 'ಹೆಗ್ಡೇರ ದೇಹದೊಳ್ಗೆ ಭೂತ ಹೊಕ್ಕಿದ್ಯಾ ಹ್ಯಾಂಗೆ' ಅನ್ನುವವರೂ ಇದ್ದರು. ಅವರ ಅರ್ಧಾಂಗಿ ಕೂಡ ಈ ಪರಿಶ್ರಮವನ್ನು ಕಂಡು ದಂಗಾದಳು.

ಆ ರಾತ್ರಿ ಊಟದ ಶಾಸ್ತ್ರ ಮುಗಿಸಿ, ಹಾಸಿಗೆಯಲ್ಲಿ ಒರಗಿದ ಮೇಲೆ, ಪತ್ನಿ ವೀಳ್ಯವನ್ನು ತಯಾರಿಸಿಕೊಂಡು ಬಂದಾಗ, ಹೆಗ್ಡೆ, ನಾಲಗೆ ಒಡೆದಿದೆ ಎಂಬ ನೆಪವೊಡ್ಡಿ ಅದನ್ನು ಸ್ವೀಕರಿಸಲಿಲ್ಲ. ಹುಬ್ಬಳ್ಳಿಯಿಂದ ಮರಳಿದ ದಿನದಿಂದ ಹೆಗ್ಡೆಯ ಕೈಯಲ್ಲಿ ರಿಸ್ಟ್‌ವಾಚ್ ಕಂಡಿರಲಿಲ್ಲ. ''ರಿಸ್ಟ್‌ವಾಚ್ ಎಲ್ಲಿ?'' ಎಂದು ಅವಳು ಸಹಜವಾಗಿ ಕೇಳಿದಾಗ, ''ಅದು ಹೊಳೆಗೆ ಬಿತ್ತು. ನೀನು ಬಿದ್ದುಕೊ'' ಎಂದು ಒರಟಾಗಿ ಹೇಳಿದ. ಇಷ್ಟು ದಿನಗಳಿಂದ ಮನೆಯಿಂದ ದೂರವಿದ್ದ ಯಜಮಾನ, ತನ್ನ ಸಾಮೀಪ್ಯವನ್ನು ಬಯಸಬಹುದೆಂದು ಪತ್ನಿ ಸ್ವಾಭಾವಿಕವಾಗಿ ನಿರೀಕ್ಷಿಸಿ

ದ್ದಳು. ನಟ್ಟಿರುಳತನಕದ ಆಕೆಯ ಪ್ರತೀಕ್ಷೆ ವಿಫಲವಾಯ್ತು. ಹಗಲಿಡೀ ಮೈಮುರಿದು ದುಡಿದು, ಬಳಲಿ ಬೆಂಡಾಗಿ ಮಲಗಿದ್ದಾರೆಂದು ತರ್ಕಿಸಿ ಆಕೆ ನಿದ್ದೆ ಹೋಗಬೇಕಾದರೆ ನಸುಬೆಳಕು ಹರಿದಿತ್ತು.

ಹೆಗ್ಡೆ ಬೇಗನೆ ಎದ್ದು ತನ್ನ ದೈನಂದಿನ ಕಾಯಕಕ್ಕೆ ಹಮ್ಮಿಕೊಳ್ಳುತ್ತಾನೆ. ದೇಹದಲ್ಲಿ ಭೂತ ಸಂಚಾರವಾಗಿದೆಯೆಂಬಂತೆ ಚೊಂಬು ಚೊಂಬು ನೀರನ್ನು ಕುಡಿಯುತ್ತಾನೆ. ಅದನ್ನು ಕಾಣುತ್ತ ಬಂದ ಅಕ್ಕಪಕ್ಕದವರು, 'ಸುಬ್ರಾಯ ಹೆಗ್ಡೆಗೆ ಪರವೂರಿನ ಹವೆ ಒಗ್ಗೋದಿಲ್ಲ ಅಂತ ಕಾಣ್ತದೆ. ಹುಬ್ಬಳ್ಳಿಯಲ್ಲಿ, ಮನೆಯ ಹಾಗೆ ತಂಪು ತನಿ ಎಲ್ಲಿ? ಖಾನಾವಳಿಯ ಊಟ, ನಲ್ಲಿಯ ನೀರು ಅವನ ಶರೀರದ ಕಾವನ್ನು ಹೆಚ್ಚಿಸಿರಬೇಕು. ಅಲ್ಲದೆ ಹೋದರೆ ಹಂಡೆಗಟ್ಲೆ ನೀರು ಕುಡಿಯೋದಂದ್ರೆ!' ಎಂದು ತಮ್ಮಷ್ಟಕ್ಕೇ ಆಡಿಕೊಂಡರು.

ಒಂದು ವಾರದಿಂದ ಹೆಗ್ಡೆ, ಜೋಡು ಹಾಸಿಗೆಯಲ್ಲಿ ಉರುಳಿದವನು, ಮಾಡನ್ನು ಕಾಣುತ್ತ, ಅರ್ಧರಾತ್ರಿಯವರೆಗೆ ಹೊರಳಾಡುತ್ತ ಬಿದ್ದುಕೊಳ್ಳುತ್ತಾನೆ. ಹಾಸಿಗೊಮ್ಮೆ ನೀರಿನ ಚೊಂಬನ್ನು ಬರಿದು ಮಾಡಿ, ಬಚ್ಚಲಿಗೆ ಹೋಗಿ ಬರುತ್ತಾನೆ. ತನ್ನ ಮೇಲೆ ಮುನಿಸುಗೊಂಡಿದ್ದಾನೆ ಎನ್ನೋಣವೆಂದರೆ, ಹಗಲು ತನ್ನನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಾನೆಂದು ಹೆಂಡತಿ ನೆನೆಸಿಕೊಳ್ಳುತ್ತಾಳೆ. ಹಿಂದಿನಂತೆ ಅಪರೂಪಕ್ಕಾದರೂ ಕೊಂಕು ತೆಗೆಯುವುದಾಗಲೀ, ಧ್ವನಿಯೇರಿಸಿ ಮಾತಾಡುವುದಾಗಲೀ ಇಲ್ಲವೇ ಇಲ್ಲ. ತನ್ನನ್ನು ಮುದ್ದಿಡುವುದು ಹೋಗಲಿ, ಕೈಯೆತ್ತಿ ಬಾರಿಸಿದ್ದರೂ ಒಂದು ರೀತಿಯ ಸುಖ ಸಿಗುತ್ತಿತ್ತು. ಹೀಗೆ ಅಂಗಸ್ಪರ್ಶ ಮಾಡದೇ ಮೌನವಾಗಿರುವ ಸಂಪ್ರದಾಯ ಮುಂದುವರಿದರೆ, ಮುಂದಕ್ಕೆ ಸಂತಾನ ಭಾಗ್ಯ ಆಗುವುದು ಹೇಗೆ ಎಂದು ಮಡದಿ ಚಿಂತಿಸತೊಡಗಿದಳು. ಎಷ್ಟೆಂದರೂ ಜವ್ವನೆಯವಳಲ್ಲವೆ? ರಾತ್ರಿಯ ನೀರವ ಹೊತ್ತಿನಲ್ಲಿ, ಮನೆಯಲ್ಲಿರುವ ಇಬ್ಬರ ಮಧ್ಯೆ ಇದೆಂಥ ಹಟ? ಪತಿದೇವನನ್ನು ತನ್ನತ್ತ ಸೆಳೆಯುವ ಸಕಲ ಯತ್ನವನ್ನವಳು ಮಾಡಿ ಸೋತಳು. ಒಮ್ಮೆ ಕೊನೆಯ ಅಸ್ತ್ರವೆಂದು ಗಂಡನನ್ನು ಕೆಣಕಿಯೇ ಬಿಟ್ಟಳು. ಗಂಡ ತಾಳ್ಮೆ ತಪ್ಪಿ ಬಿರುಸಾಗಿ ಹೇಳಿದ: ''ನನ್ನ ಮಂಡೆಯನ್ನು ಸಮಸ್ಯೆಗಳು ತರಿದು ತಿನ್ನುವಾಗ ನಿನಗೇಕೆ ಎಲ್ಲಿಲ್ಲದ ಚೇಷ್ಟೆ? ನಿನ್ನೊಂದಿಗೆ ಸರಸಾಟದಲ್ಲಿ ಸುಖ ಕಾಣುವ ದಿನಗಳು ಉಳಿದಿಲ್ಲ. ಮುಂದೆ ಮನೆಯನ್ನು ಬೆಳಗುವುದಕ್ಕೆ ಕುಲದೀಪಕ ಬೇಕೆಂದು ನಿನಗೆ ಅನಿಸಿದರೆ, ಊರುಕೇರಿಯ ಮಾಣಿಯನ್ನು ದತ್ತಕಕ್ಕೆ ತೆಗೆದುಕೊಂಡರಾಯಿತು.''

ಸುಬ್ರಾಯ ಹೆಗ್ಡೆ ಹೆಂಡತಿಯ ಮೇಲೆ ತನ್ನ ಕೋಪ ತಾಪಗಳನ್ನು ಎಂದೂ ತೋರಿಸಿದವನಲ್ಲ. ಹಾಗೆ ನೋಡಿದರೆ ಅವಳನ್ನು ಮೆಚ್ಚಿಯೇ ಕೈಹಿಡಿದವನು. ಚೆಲುವೆಯಾಗಿ, ಶಾಂತಸ್ವಭಾವದಳಾಗಿ, ತನ್ನ ಪರಿಸರದವಳೇ ಆಗಿದ್ದ ಅವಳನ್ನು ಮದುವೆಯ ಅನಂತರ ರಸಿಕನಾಗಿ ರಮಿಸುತ್ತಿದ್ದ. ಅವಳು ಅದಕ್ಕೆ ಅನುವಾಗಿ ಪ್ರತಿಸ್ಪಂದಿಸಿದಾಗ, ತಾವು ಪ್ರೇಮಾಲಾಪದ ಚರಮ ಸೀಮೆಗೆ ತಲುಪಿ ಸದಾ **ನೆಮ್ಮದಿಯಿಂದಿರುತ್ತಿದ್ದರು. ಹಾಗೆ ನೋಡಿದರೆ, ಈ ಸರಸ-ಸಲ್ಲಾಪ,** ಗಂಡ ಹುಬ್ಬಳ್ಳಿಗೆ ಪಾದ ಬೆಳೆಸುವತನಕ ನಿರಾತಂಕವಾಗಿ, ಅನುಪಮವಾಗಿ ಸಾಗಿತ್ತು. ಈಗ ಬಗಲಿಗೆ ಮಲಗಿದ ಪತಿರಾಯ ತನ್ನನ್ನು ಸ್ಪರ್ಶಿಸದಷ್ಟು ಕಠಿನವಾಗಲು ಕಾರಣವೇನು? ಎಂದು ಊಹಿಸ**ಲಾಗದೇ ಪತ್ನಿ ಬೇಗುದಿಗೆ ಒಳಗಾದಳು.** ಅವನೇನೋ ಸಂತಾನ ಭಾಗ್ಯಕ್ಕಾಗಿ ಪರ್ಯಾಯ ವ್ಯವಸ್ಥೆ ಎಂಬಂತೆ ದತ್ತಕದ ವಿಚಾರ ಪ್ರಸ್ತಾಪ ಮಾಡಿದ. ಈ ತರುಣ ವಯಸ್ಸಿನಲ್ಲಿ ಈ ಅಲ್ಲಸಲ್ಲದ ಗೊಂದಲದಿಂದ ಅವಳ ಕಳವಳ ಹೆಚ್ಚಿತೇ ವಿನಾ ಏನೊಂದೂ ಸಮಾಧಾನ ದೊರೆಯಲಿಲ್ಲ.

ಹುಬ್ಬಳ್ಳಿಯಿಂದ ಬಂದಂದಿನಿಂದ, ಸುಬ್ರಾಯ ಹೆಗ್ಡೆ, ದಣಪೆಯ ದಾರಿಯನ್ನು ಬಳಸದೇ, ಸುತ್ತು ಬಳಸಿ ಮನೆಗೆ ಸೇರುವುದನ್ನು ಅವನ ಮಡದಿ

ಗಮನಿಸಿದ್ದಳು. ಕುತೂಹಲದಿಂದ ಗಂಡಸನ್ನವಳು ಕೇಳಿಯೇಬಿಟ್ಟಳು: ''ತಡಮೆ ನಿಮ್ಮ ದಣಪೆ ದಾರಿಯಲ್ಲಿ ಬಂದರೇನು ತಡೆ ನಿಮಗೆ?'' ಸುಬ್ರಾಯ ಹೆಗ್ಡೆ ಸುಮ್ಮನಾಗಿಯೇ ಇದ್ದ. ಇನ್ನೂ ಗುಡ್ಡ ಸುತ್ತಿ ಮೈಲಾರಕ್ಕೆ ಬರುವ ಯಜಮಾನನ ವರ್ತನೆಯನ್ನು ಕಂಡು, ತಡಮೆಯ ಬಳಿಗೆ ಹೋಗಿ ಅಲ್ಲಿ ಇರುವುದಾದರೂ ಏನು ಎಂದು ಪರೀಕ್ಷೆ ಮಾಡಿದಳು. ಅಲ್ಲಿ ಏನೋ ಚಿಕ್ಕ ಪ್ಯಾಕೆಟ್ ಬಿದ್ದಿತ್ತು. ಅದರ ಮೇಲಿನ ಚಿತ್ರವನ್ನು ನೋಡಿ, ಹೇಸಿ, ಅದನ್ನು ಮುಟ್ಟದೇ, ಅಲ್ಲಿಯೇ ಬಿಟ್ಟು ಮನೆಗೆ ಬಂದಳು.

ಸುಬ್ರಾಯ ಹೆಗ್ಡೆಗೆ ಸಮಾಧಾನವೇ ಇಲ್ಲ. ವಿನಾಕಾರಣ ಗಲಿಬಿಲಿಯಾಗುತ್ತಾನೆ. ಪತ್ನಿಯ ದನಿ ಕೇಳಿದರೆ ಅಸ್ವಸ್ಥನಾಗುತ್ತಾನೆ. ತನ್ನ ನಿರ್ಮಲವಾದ ದಾಂಪತ್ಯ ಜೀವನದ ಸೊಗಸು ಒಂದು ವಾರದ ಹುಬ್ಬಳ್ಳಿಯ ವಾಸದ ಅವಧಿಯಲ್ಲಿ ಕಲುಷಿತಗೊಂಡಿತಲ್ಲ ಎಂದು ಆತ ವಿಹ್ವಲನಾದ. ತಾನು ಇನ್ನು ಮುಗ್ಧಳಾದ ಪತ್ನಿಯ ದೇಹಸ್ಪರ್ಶ ಮಾಡುವುದು ಸಾಧ್ಯವೇ, ಸಾಧುವೇ ಎಂದು ತನ್ನೊಳಗೆ ಪ್ರಶ್ನೋತ್ತರ ನಡೆಸಿದ.

ಒಂದು ರಾತ್ರಿ ತನ್ನ ಪಾದಗಳನ್ನು ಪತ್ನಿ ಹಿಡಿದದ್ದು ಹೆಗ್ಡೆಗೆ ಅರಿವಾಯಿತು. ''ನನ್ನಲ್ಲಿ ಕಳಂಕ ತುಂಬಿದೆ. ನನ್ನ ಪಾಪ ಪರಿಮಾರ್ಜನೆಯ ಬಳಿಕವೇ ನನಗೆ ನಿನ್ನ ಸಾಮೀಪ್ಯದ ಯೋಚನೆ ಬರಬಹುದೇನೋ! ಮೊದಲು ಬೆಂಗಳೂರಿಗೆ ಹೋಗಿ ನನ್ನ ಶರೀರವನ್ನು ಪರೀಕ್ಷೆಗೆ ತೊಡಗಿಸಿ ಬರುತ್ತೇನೆ. ನೀನು ಹಾಗೇ ಬಿದ್ದುಕೋ, ಪೀಡೆ ಕೊಡಬೇಡ.''

''ನಿಮಗೇನೂ ಧಾಡಿ ಬಡಿದಿಲ್ಲ. ಕಾರ್ಖಾನೆಯ ಕನಸು ನಿಮ್ಮ ನೆಮ್ಮದಿಯನ್ನು ಕೆಡಿಸಿದೆಯಷ್ಟೆ. ನಮಗೆ ಹೆಚ್ಚಿನ ಶ್ರೀಮಂತಿಕೆ ಯಾಕೆ? ಇದ್ದ ಆಸ್ತಿ, ಮನೆ ನಿಮ್ಮ ಕನಸಿನ ಕುಲದೀಪಕನಿಗೆ ಸಾಕು. ಶಿರ್ಶಿ ಮಾರಿಯಮ್ಮನ ಕೋಣದಂತೆ ನಿಮ್ಮ ದೇಹ ಕಲ್ಲುಗುಂಡಿನಂತಿದೆ. ಯಾವ ಮದ್ದೂ ಬೇಡ. ದೇವಿಯನ್ನು ಬೇಡಿಕೊಳ್ಳಿ. ಅವಳ ಅನುಗ್ರಹದಿಂದ ನಾನು ತೊಟ್ಟಿಲು ತೂಗುವಂತಾಗಲಿ. ನನ್ನಲ್ಲೇನೂ ಕೊರತೆ ಇಲ್ಲವೆಂದು ನೀವು ಹುಬ್ಬಳ್ಳಿಗೆ ಹೋದಾಗ ನಮ್ಮಲ್ಲಿಗೆ ಬಂದ ಡಾಕ್ಟರ್ ನೀಲಮ್ಮ, ಅಡಿಕೆ ದಲಾಲಿಯ ಸೊಸೆ ಹೇಳಿದ್ದಾಳೆ. ನಮ್ಮಿಬ್ಬರಲ್ಲೂ ದೋಷವಿಲ್ಲವೆಂದ ಮೇಲೆ.....''

ಸುಬ್ರಾಯ ಹೆಗ್ಡೆ ನೀರಿನ ಚೊಂಬಿನತ್ತ ಕೈ ಚಾಚಿದ.





ಸುಬ್ರಾಯ ಹೆಗ್ಡೆಗೆ ಒಂದು ಬಗೆಯ ಅಪ್ರಾಪ್ಯ ಮಾನವಾದ ಅಳುಕು ತನ್ನ ಹುಟ್ಟಿ ಕುಲ್ಯವಾಯಿತು.

ರಾಮನಾಥ ಜೋಶಿ



ಜನಪದ

-ವೆಸ್ಟ್‌ಇಂಡೀಸ್

ಕನ್ನಡಕ್ಕೆ: ಭಾರತಿ ಭಟ್

# ಕುಂಟು ಕಾಲಿನ ಜೇಡ

ಒಂದು ದಿನ ಒಂದು ಬೆಕ್ಕು ಪ್ರವಾಸ ಹೊರಟಿತು. ಪ್ರವಾಸದಲ್ಲಿ ಅದು ತನ್ನ ಆಹಾರವನ್ನು ಬೇಟೆಯಾಡಿ ಪಡೆಯುತ್ತಿತ್ತು. ತನ್ನ ಸೂಕ್ಷ್ಮವಾದ ಕಣ್ಣುಗಳ ಮೂಲಕ ಮರಗಳಲ್ಲಿ ಅಡಗಿ ಕುಳಿತಿರುವ ಹಲ್ಲಿಗಳನ್ನು ಪತ್ತೆ ಹಚ್ಚಿ, ಅವನ್ನು ತಿನ್ನುತ್ತಿತ್ತು.

ಹೀಗೆ ಒಂದು ದಿನ ಅದು ಒಂದು ನದಿಯ ಬಳಿಗೆ ಬಂತು. ನೀರೆಂದರೆ ಬೆಕ್ಕಿಗೆ ಭಯ. ನದಿಯನ್ನು ಹೇಗೆ ದಾಟುವುದು ಎಂದು ಚಿಂತಿಸುತ್ತ, ಅದು ನದಿಯ ದಡದಲ್ಲಿರುವ ಮರವನ್ನು ಏರಿ ಕುಳಿತಿತು. ಎರಡು ದಿವಸ ಕಳೆದರೂ ಅದಕ್ಕೆ ನದಿಯನ್ನು ದಾಟಲು ಯಾವ ಉಪಾಯವೂ ಹೊಳೆಯಲಿಲ್ಲ.

ಅಷ್ಟು ಹೊತ್ತಿಗೆ ಅನಾನ್ಸಿ ಎಂಬ ಜೇಡ ಒಂದು ಮೀನಿನ ಗಾಳ ಮತ್ತು ಒಂದು ಚೀಲ ಹಿಡಿದುಕೊಂಡು, ಆ ನದಿಯಲ್ಲಿ ಮೀನು ಹಿಡಿಯಲು ಬಂತು. ದಡದಲ್ಲಿ ಕುಳಿತು ಅದು ಅರ್ಧ ಗಂಟೆಹೊತ್ತು ಮೀನು ಹಿಡಿಯಲು ಪ್ರಯತ್ನಿಸಿದರೂ, ಒಂದೇ ಒಂದು ಮೀನೂ ಸಿಗಲಿಲ್ಲ. ಆಯಾಸಗೊಂಡ ಅದು, ಬೆಕ್ಕು ಕುಳಿತಿದ್ದ ಮರದ ಬುಡಕ್ಕೆ ಹೋಗಿ ಕುಳಿತುಕೊಂಡಿತು.

ಅಲ್ಲಿ ಕುಳಿತು ತನ್ನ ಸುತ್ತ ಮುತ್ತ ನೋಡುತ್ತಿದ್ದಾಗ, ಅದಕ್ಕೆ ಮರದಲ್ಲಿ ಒಂದು ತೂತಿನಿಂದ ಅಂಟು ಪದಾರ್ಥ ಒಸರುತ್ತಿರುವುದು ಕಾಣಿಸಿತು. ಅದನ್ನು ಮುಟ್ಟಿ ನೋಡಿದಾಗ ಅದರ ಕೈಗೆ ಸ್ವಲ್ಪ ಅಂಟಿಕೊಂಡಿತು. ಅದನ್ನು ಬಾಯಿಗೆ ಹಾಕಿ ರುಚಿ ನೋಡಿತು. ಅದು ಸಿಹಿಯಾದ ಜೇನುತುಪ್ಪವಾಗಿತ್ತು.

ತೂತಿನ ಒಳಗೆ ಇನ್ನೂ ತುಂಬಾ ಜೇನುತುಪ್ಪ ಇರಬಹುದೆಂಬ ಆಸೆಯಿಂದ, ಅದು ತನ್ನ ಬೆರಳನ್ನು ತೂತಿನೊಳಗೆ ಹಾಕಿತು. ಆಗ ಒಳಗಿನಿಂದ ಯಾರೋ ತನ್ನ ಬೆರಳನ್ನು ಎಳೆದಂತಾಯಿತು. ಆದರೆ ಕೂಡಲೇ ಬೆರಳನ್ನು ಹೊರಕ್ಕೆ ಎಳೆದು ತೆಗೆಯಲು ಸಾಧ್ಯವಾಗದೆ ಭಯಗೊಂಡ ಅದು ''ನನ್ನ ಬೆರಳನ್ನು ಹಿಡಿದುಕೊಂಡವರು ಯಾರು?'' ಎಂದು ಕೇಳಿತು.

ತೂತಿನೊಳಗಿನಿಂದ ಒಂದು ಸ್ವರ ''ನಾನೊಂದು ಚಕ್ರ'' ಎಂದು ಹೇಳಿತು.

''ಚಕ್ರವೇ, ನನಗೆ ನೀನು ಕಾಣಿಸುತ್ತಾ ಇಲ್ಲ'' ಎಂದು ಅನಾನ್ಸಿ ಹೇಳಿತು. ಆಗ ಬಿಲದೊಳಗಿದ್ದ ಚಕ್ರ ಅನಾನ್ಸಿಯ ಬೆರಳನ್ನು ಏಳು ಸುತ್ತು ಸುತ್ತಿ ರಭಸದಿಂದ ಹೊರಕ್ಕೆಸೆಯಿತು.

ಅನಾನ್ಸಿ ಸ್ವಲ್ಪ ದೂರದಲ್ಲಿದ್ದ ತರಗೆಲೆಯ ರಾಶಿಯ ಮೇಲೆ ಹೋಗಿ ಬಿತ್ತು. ಬಿದ್ದ ಹೊಡೆತಕ್ಕೆ ಅದಕ್ಕೆ ಪ್ರಜ್ಞೆ ತಪ್ಪಿದಂತಾಯಿತು. ಆದರೆ ತರಗೆಲೆಯ ರಾಶಿಯ ಮೇಲೆ ಬಿದ್ದುದರಿಂದ ಪೆಟ್ಟಾಗಿರಲಿಲ್ಲ. ಈ ಅನುಭವದಿಂದ ಅದಕ್ಕೆ ಆಹಾರ ಸಂಗ್ರಹಿಸಲು ಒಂದು ಉಪಾಯ ಹೊಳೆಯಿತು.

ಅನಾನ್ಸಿ ಅಲ್ಲಿದ್ದ ತರಗೆಲೆಗಳನ್ನೆಲ್ಲ ಬದಿಗೆ ಸರಿಸಿ ಆ ಜಾಗದಲ್ಲಿ ಕೆಲವು ಕಲ್ಲುಗಳನ್ನು ರಾಶಿ ಹಾಕಿತು. ಅವುಗಳ ನಡುವೆ ಚೂಪಾಗಿರುವ ಕೆಲವು ಕೋಲುಗಳನ್ನೂ ಇರಿಸಿತು. ಅನಂತರ ತಾನು ಮೊದಲು ಕುಳಿತಿದ್ದ ಜಾಗಕ್ಕೆ ಬಂದು ಕುಳಿತುಕೊಂಡಿತು. ಆಗ ಆ ದಾರಿಯಾಗಿ ಒಂದು ಕೋಳಿ ಬಂತು. ಅನಾನ್ಸಿ ಅದಕ್ಕೆ ಪಕ್ಕದಲ್ಲಿರುವ ಮರದ ಪೊಟರೆಯಲ್ಲಿ ಜೇನುತುಪ್ಪ ಇರುವ ಸಮಾಚಾರ ತಿಳಿಸಿತು. ಬೆರಳನ್ನು ತೂತಿನೊಳಗೆ ಹಾಕಿ ಬೇಕಾದಷ್ಟು ಜೇನುತುಪ್ಪ ಪಡೆಯಬಹುದೆಂದು ತಿಳಿಸಿತು.

ಕೋಳಿ ತೂತಿನೊಳಗೆ ಬೆರಳು ಹಾಕಿದಾಗ ಅದರ ಬೆರಳನ್ನು ಯಾರೋ ಒಳಗಿನಿಂದ ಹಿಡಿದು ಎಳೆದಂತಾಯಿತು. ಬೆರಳನ್ನು ಹೊರಕ್ಕೆಳೆಯಲು ಸಾಧ್ಯವಾಗದೆ ಅದು ಅನಾನ್ಸಿಗೆ ಹೇಳಿತು ''ಅನಾನ್ಸಿ, ನನ್ನ ಬೆರಳನ್ನು ಯಾರೋ ಹಿಡಿದುಕೊಂಡಿದ್ದಾರೆ''.

''ನಿನ್ನ ಬೆರಳನ್ನು ಯಾರು ಹಿಡಿದುಕೊಂಡಿರುವರೆಂದು ಕೇಳು'' ಎಂದು ಅನಾನ್ಸಿ ಹೇಳಿತು.

ಕೋಳಿ ಹಾಗೆ ಕೇಳಿದಾಗ, ಒಳಗಿನಿಂದ ''ನಾನು ಚಕ್ರ'' ಎನ್ನುವುದು ಕೇಳಿಸಿತು.

ಕೋಳಿ ಹೇಳಿತು ''ಚಕ್ರವೇ, ನನಗೆ ನೀನು ಕಾಣಿಸುತ್ತಾ ಇಲ್ಲ''.

ಒಡನೆಯೇ ಚಕ್ರ ಕೋಳಿಯ ಬೆರಳನ್ನು ಏಳು ಸುತ್ತು ತಿರುಗಿಸಿ, ಅದನ್ನು ರಭಸದಿಂದ ದೂರಕ್ಕೆ ಎಸೆಯಿತು. ಆಗ ಅದು ದೂರದಲ್ಲಿದ್ದ ಕಲ್ಲು ಮತ್ತು ಚೂಪಾದ ಕೋಲುಗಳ ರಾಶಿಯ ಮೇಲೆ ಬಿತ್ತು. ಅನಾನ್ಸಿ ಓಡುತ್ತಾ ಹೋಗಿ ಆ ಕೋಳಿಯನ್ನು ತನ್ನ ಚೀಲದೊಳಗೆ ತುಂಬಿಸಿಕೊಂಡಿತು. ಅನಂತರ ತಾನು ಮೊದಲು ಕುಳಿತಿದ್ದ ಜಾಗಕ್ಕೆ ಹೋಗಿ ಮೊದಲಿನಂತೆ ಕುಳಿತುಕೊಂಡಿತು.

ಸ್ವಲ್ಪ ಹೊತ್ತಿನಲ್ಲಿ ಒಂದು ಇಲಿ ಆ ದಾರಿಯಾಗಿ ಬಂತು. ಇಲಿಗೂ ಅನಾನ್ಸಿ ಜೇನುತುಪ್ಪದ ಆಸೆ ತೋರಿಸಿತು. ಅನಾನ್ಸಿ ಹೇಳಿದಂತೆ ಇಲಿ ತನ್ನ ಬೆರಳನ್ನು ತೂತಿನೊಳಗೆ ಹಾಕಿತು. ಚಕ್ರ ಅದರ ಬೆರಳನ್ನು ಗಟ್ಟಿಯಾಗಿ ಹಿಡಿದುಕೊಂಡಿತು. ''ಅನಾನ್ಸಿ, ಅನಾನ್ಸಿ, ನನ್ನ ಬೆರಳನ್ನು ಯಾರೋ ಹಿಡಿದುಕೊಂಡಿದ್ದಾರೆ'' ಎಂದು ತಡವರಿಸುತ್ತ ಇಲಿ ಹೇಳಿತು.

''ಯಾರು ನನ್ನನ್ನು ಹಿಡಿದುಕೊಂಡಿದ್ದಾರೆಂದು ಕೇಳು''

ಭಯಗೊಂಡ ಇಲಿ ''ನನ್ನ ಬೆರಳನ್ನು ಹಿಡಿದುಕೊಂಡವರು ಯಾರು?'' ಎಂದು ಕೇಳಿತು.

''ನಾನು ಚಕ್ರ'' ''ಚಕ್ರವೇ, ನೀನು ನನಗೆ ಕಾಣಿಸುತ್ತಾ ಇಲ್ಲ'' ಎಂದಿತು ಇಲಿ.

ಆಗಲೂ ಚಕ್ರ ಇಲಿಯನ್ನು ಏಳು ಸುತ್ತು ತಿರುಗಿಸಿ ರಭಸದಿಂದ ದೂರಕ್ಕೆ ಎಸೆಯಿತು. ಇಲಿ ಕಲ್ಲಿನ ರಾಶಿಯ ಮೇಲೆ ಬಿತ್ತು. ಬಿದ್ದ ಇಲಿಯನ್ನು ಅನಾನ್ಸಿ ಓಡಿ ಹೋಗಿ, ತನ್ನ ಚೀಲದಲ್ಲಿ ಹಾಕಿಕೊಂಡಿತು. ನಂತರ ಅದು ಪುನಃ ತಾನು ಹಿಂದೆ ಕುಳಿತಿದ್ದ ಜಾಗಕ್ಕೆ ಬಂದು ಕುಳಿತುಕೊಂಡಿತು.



ಚಿತ್ರ 8

ಮರದ ಮೇಲೆ ಕುಳಿತು ನೋಡುತ್ತಿದ್ದ ಬೆಕ್ಕು, ಅನಾನ್ಸಿ ಇಲಿಯನ್ನು ತರಲು ಹೋದಾಗ ಮರದಿಂದ ಕೆಳಗೆ ಇಳಿದು ಸ್ವಲ್ಪ ದೂರ ಹೋಗಿ ಅನಂತರ ಹಿಂದಕ್ಕೆ ಬಂತು. ಅನಾನ್ಸಿ ಕುಳಿತಿದ್ದ ಜಾಗಕ್ಕೆ ಬಂದಾಗ ಅನಾನ್ಸಿ, ಬೆಕ್ಕನ್ನು ಕರೆಯಿತು. ''ನನ್ನ ಬಳಿ ಬಾ. ನಿನಗೆ ಜೀವಿಸಲು ಸುಲಭವಾದ ದಾರಿಯನ್ನು ನಾನು ತೋರಿಸುತ್ತೇನೆ'' ಎಂದು ಹೇಳಿತು.

ಜೇನುತುಪ್ಪ ಇರುವ ಜಾಗಕ್ಕೆ ಅನಾನ್ಸಿ ಚೆಕ್ಕನ್ನು ಕರೆದುಕೊಂಡು ಹೋಯಿತು. ''ಇಲ್ಲಿ ನೋಡು, ಎಷ್ಟೊಂದು ಜೇನುತುಪ್ಪ ಇದೆ, ರುಚಿ ನೋಡು'' ಎಂದು ಅನಾನ್ಸಿ ಹೇಳಿತು.

ಜೇನುತುಪ್ಪ ಕಾಣಿಸಲಿಲ್ಲವೆಂಬಂತೆ ನಟಿಸುತ್ತ ಚೆಕ್ಕು ಹೇಳಿತು ''ಜೇನುತುಪ್ಪವಿದೆಯೇ, ನನಗೆಲ್ಲೂ ಕಾಣಿಸುವುದಿಲ್ಲವಲ್ಲ. ಆದರೆ ರುಚಿ ನೋಡಲು ನೀನೇ ನನಗೆ ಸ್ವಲ್ಪ ತೆಗೆದುಕೊಡು''.

ಅನಾನ್ಸಿ ತೂತಿನ ಮೇಲ್ಭಾಗದಲ್ಲಿದ್ದ ಜೇನುತುಪ್ಪವನ್ನು ತನ್ನ ಬೆರಳಿನಿಂದ ತೆಗೆದು ಚೆಕ್ಕಿಗೆ ರುಚಿ ನೋಡಲು ಕೊಟ್ಟಿತು. ''ತುಂಬ ಚೆನ್ನಾಗಿದೆ. ಇನ್ನೂ ಸ್ವಲ್ಪ ಇದ್ದರೆ ಒಳ್ಳೆಯದಿತ್ತು'' ಎಂದು ಚೆಕ್ಕು ಹೇಳಿತು.

''ಇಲ್ಲಿ ಇರುವ ತೂತಿನೊಳಗೆ ನಿನ್ನ ಬೆರಳನ್ನು ಹಾಕಿದರೆ ಇನ್ನೂ ಸಿಗಬಹುದು'' ಎಂದು ಅನಾನ್ಸಿ ಹೇಳಿತು. ಚೆಕ್ಕು ತೂತಿನೊಳಗೆ ಬೆರಳು ಹಾಕುವ ಹಾಗೆ ನಟಿಸುತ್ತಾ ಬೇರೆಲ್ಲೋ ಬೆರಳು ಹಾಕಿ ''ಎಲ್ಲಿ ನನಗೆ ತೂತೇ ಕಾಣಿಸುವುದಿಲ್ಲವಲ್ಲ'' ಎಂದು ಹೇಳಿತು.

ತಾಳ್ಮೆ ಕಳೆದುಕೊಂಡ ಅನಾನ್ಸಿ ''ಇಲ್ಲಿ ನೋಡು ಚೆಕ್ಕೀ, ನನ್ನ ಕೈಯನ್ನು ನೋಡು'' ಎನ್ನುತ್ತ ತನ್ನ ಕೈಯನ್ನೇ ತೂತಿನೊಳಗೆ ಹಾಕಿತು. ಆಗ ಚಕ್ರ ಅದರ ಕೈಯನ್ನು ಬಿಗಿಯಾಗಿ ಹಿಡಿದುಕೊಂಡಿತು.

ಕಲ್ಲು, ಚೂಪಾದ ಕೋಲುಗಳ ರಾಶಿಯನ್ನು ಜ್ಞಾಪಿಸಿಕೊಂಡ ಅನಾನ್ಸಿ ''ಚೆಕ್ಕೀ ನನ್ನ ಕೈಯನ್ನು ಯಾರೋ ಹಿಡಿದುಕೊಂಡಿದ್ದಾರೆ'' ಎಂದು ಅಳುತ್ತಾ ಹೇಳಿತು.

''ನಿನ್ನನ್ನು ಹಿಡಿದುಕೊಂಡವರು ಯಾರು ಎಂದು ಕೇಳು'' ಎಂದು ಚೆಕ್ಕು ಹೇಳಿತು.

''ನನ್ನನ್ನು ಹಿಡಿದುಕೊಂಡವರು ಯಾರು ಎಂದು ನನಗೆ ತಿಳಿದಿದೆ. ನೀನು ನನಗೆ ಸಹಾಯ ಮಾಡಿದರೆ ನಾನು ನನ್ನ ಚೀಲದಲ್ಲಿರುವುದನ್ನು ನಿನಗೆ ಕೊಡುತ್ತೇನೆ. ಇಲ್ಲಿಂದ ಸ್ವಲ್ಪ ದೂರದಲ್ಲಿ ನದಿಯ ದಡದಲ್ಲಿ ಕಲ್ಲುಗಳ ರಾಶಿ ಮತ್ತು ಚೂಪಾದ ಕೋಲುಗಳಿವೆ. ಅವುಗಳನ್ನು ತೆಗೆದು ಆ ಜಾಗದಲ್ಲಿ ಮೆದುವಾದ ಎಲೆಗಳನ್ನು ಹರಡಿ ಹಾಸಿಗೆಯಂತೆ ಮಾಡಬೇಕು'' ಎಂದು ಅನಾನ್ಸಿ ಹೇಳಿತು.

ಅನಾನ್ಸಿಗೆ ಬುದ್ಧಿ ಕಲಿಸಬೇಕೆಂದು ಆಲೋಚಿಸಿದ ಚೆಕ್ಕು ಅಲ್ಲಿಂದ ಓಡಿಹೋಗಿ ಕೆಲವು ಕಲ್ಲು ಮತ್ತು ಕೋಲುಗಳನ್ನು ತೆಗೆದು ಎಲೆಗಳನ್ನು ಹರಡಿ, ಅನಾನ್ಸಿಯ ಬಳಿಗೆ ಬಂತು. ಅದು ದೂರದಿಂದ ಬರುತ್ತಿರುವಾಗಲೇ ಅನಾನ್ಸಿ ಕೇಳಿತು ''ತುಂಬಾ ಬಾಳೆ ಎಲೆಯನ್ನು ಹರಡಿ ಮೆದುವಾಗಿ ಮಾಡಿದ್ದೀಯಲ್ಲವೇ?'' ''ಎಲ್ಲಾ ರೆಡಿಯಾಗಿದೆ, ಅನಾನ್ಸಿ'' ಎಂದು ಚೆಕ್ಕು ಹೇಳಿತು.

''ನೀನು ಇನ್ನೊಮ್ಮೆ ಅಲ್ಲಿಗೆ ಹೋಗಿ ಅಲ್ಲಿ ಇರಿಸಿರುವ ಬಾಳೆ ಎಲೆಗಳಿಂದ ಒಂದು ತುಂಡನ್ನು ತಂದು ನನಗೆ ತೋರಿಸು. ಹಾಗಾದರೆ ಮಾತ್ರ ನಾನು ನಿನ್ನ ಮಾತನ್ನು ನಂಬುತ್ತೇನೆ'' ಎಂದು ಅನಾನ್ಸಿ ಹೇಳಿತು.

ಚೆಕ್ಕು ಅಲ್ಲಿಗೆ ಹೋಗಿ ಹತ್ತು ಮಿನಿಟುಗಳ ನಂತರ ಬಾಳೆ ಎಲೆ ತಾರದೆ ಹಾಗೆಯೇ ಹಿಂದೆ ಬಂದು ಹೇಳಿತು ''ನನ್ನನ್ನು ನಂಬು ಅನಾನ್ಸಿ, ಎಲ್ಲಾ ಸರಿಯಾಗಿದೆ''

ಅನಾನ್ಸಿಗೆ ತನ್ನ ಕೈಯನ್ನು ಚಕ್ರ ಇನ್ನೂ ಬಿಗಿಯಾಗಿ ಹಿಡಿದಿರುವಂತೆ ಭಾಸವಾಯಿತು. ನಡುಗುತ್ತಾ ಅದು ಹೇಳಿತು, ''ನನ್ನನ್ನು ಯಾರು ಹಿಡಿದುಕೊಂಡಿದ್ದಾರೆ?'' ''ನಾನು ಚಕ್ರ''

''ಚಕ್ರವೇ, ನನಗೆ ನೀನು ಕಾಣಿಸುತ್ತಾ ಇಲ್ಲ'' ಎಂದಿತು ಅನಾನ್ಸಿ.

ಒಡನೆಯೇ ಚಕ್ರ ಅದನ್ನು ಏಳು ಸುತ್ತು ತಿರುಗಿಸಿ ರಭಸದಿಂದ ದೂರಕ್ಕೆ ಎಸೆಯಿತು. ಅನಾನ್ಸಿ ಎಲೆಗಳ ಹಾಸಿಗೆಯ ಮೇಲೆ ಬಿತ್ತು. ಆದರೆ ಎಲೆಗಳ ಅಡಿಯಲ್ಲಿದ್ದ ಕಲ್ಲು ತಗುಲಿ ಅದರ ಕಾಲಿಗೆ ಪೆಟ್ಟಾಯಿತು. ಚೆಕ್ಕು ನಗುತ್ತಾ ಕೋಳಿ ಮತ್ತು ಇಲಿಯಿದ್ದ ಚೀಲವನ್ನು ತೆಗೆದುಕೊಂಡು ತನ್ನ ಮನೆಗೆ ಹೋಯಿತು. ಕಾಲಿಗೆ ಪೆಟ್ಟಾದ ಅನಾನ್ಸಿ ಕುಂಟುತ್ತಾ ಮನೆಗೆ ಹೋಯಿತು.





**ಶತಮಾನದ ಮೆಲುಕು - 11**



## ವಿ.ಜಿ. ಶ್ಯಾನಭಾಗ್

# ಮೂರಾಣೆ ಕ್ರಾಪು




"ಹಾಂಗಲ್ರಾ! ಮನ್ಷ್ಯನಿಗೆ ಥೊಡೆ ವಿಚಾರ ಉಳಿಬೇಕ್ರಾ! ಈಗಿನ ದಿನಮಾನ ನೋಡಿ, ಒಡ್ಯಾ. ಈಗ ಬೇರೆ ಜನ್ರು ಬರಿಯ ಗಡ್ಡಕ್ಕೆ ಅಷ್ಟು ಮೂರಾಣೆ ಕೊಡ್ತ್ರು. ನೀವು ಕ್ರಾಪಿಗೆ ಅಷ್ಟೇನ ಕೊಡೂದು? ಥೊಡೆ ವಿಚಾರಮಾಡ್ರ. ಎಂಥಾದ್ರ ಇದು?'' ಮೊದಲೇ ಮಾತಾಗಿಹೋಗಿದೆ, ತಾನು ಒಡಂಬಟ್ಟುಬಿಟ್ಟಿದ್ದೇನೆ, ಇನ್ನು ಏನು ಮಾಡಲಿಕ್ಕೂ ಕೂಡದು ಎಂದು ಗೊತ್ತಿದ್ದರೂ, ಮತ್ತೆ ಮನಸ್ಸು ತಡೆಯದೆ ನುಡಿದ. ಕೆಲಸ ಆರಂಭವಾಗಿಬಿಟ್ಟಿದೆ. ಆದರೆ ಕೆಲಸಿ(ನಾಪಿತ)ಗೆ ಹನಿ ಸಮಾಧಾನವಿಲ್ಲ. ಈ ದಿನಮಾನದಲ್ಲಿ- ಯಾರೂ ಕಾಲದಿಂದ ಕ್ರಾಪಿಗೆ ಆರಾಣೆ ಕೊಡುತ್ತಿರುವಾಗ - ತಾನು ಏಕೆ ಮೂರಾಣೆಗೆ ಒಪ್ಪಿದೆ; ಕೊನೆಗೆ ನಾಲ್ಕಾಣೆಯೆಂದು ಘಟ್ಟಿಯಾಗಿ ಕೂಡ್ರಲಿಲ್ಲ ಏಕೆ?-ಎಂಬುದೊಂದೇ ವಿಚಾರ ಆತನಿಗೆ. ನೋಡನೋಡುತ್ತಿರುವಾಗ ಒಂದಾಣೆ ಹಾನಿ ಮಾಡಿಕೊಂಡೆನಲ್ಲ ಎಂಬುದೊಂದೇ ಕಳವಳ ಮನಸ್ಸಿನಲ್ಲಿ.

"ಎಂಥಾದ್ರ ಇದು?", ಕೆಲಸಿ ಮತ್ತೆ ದೂರಿದ.

ಆದುಗೆ ಭಟ್ಟ ನರಸಿಂಹ, ತಲೆಬಾಗಿಸಿ ಕೆಲಸಿಗೆ ಬೆನ್ನು ಮಾಡಿ ಕುಳಿತಿದ್ದಾನೆ. ಕೈಯಲ್ಲಿದ್ದ ಹಳೆಯ ಮಸಕಾದ ಕೈಗನ್ನಡಿಯಲ್ಲಿ ಮಾತ್ರ ಕಾಣುವ ತೆಳುವಾದ ರೋಮ ಮೀಸೆ, ಅದಿಗೆ ಬರುವಂತೆ ಬಂದ ನಾಲ್ಕಾರು ಗಡ್ಡದ ರೋಮ ಕೂದಲನ್ನು ನೋಡುತ್ತ ಉಳಿದಿದ್ದಾನೆ. 'ಹ್ಯಾಗಾದರೂ ಮಾತು ಆಗಿಹೋಗಿದೆ. ಇನ್ನು ಮಾತಿನ ಹೊರಗೆ ಕೇಳಲು ಈತನಿಗೆ ಯಾವ ನ್ಯಾಯ? ಬೇಕಷ್ಟು ಆಡಲಿ, ಬೇಕಷ್ಟು ದೂರಲಿ, ತನಗಲ್ಲ ತನ್ನ ಬೆನ್ನಿಗೆ' ಎಂದುಕೊಂಡು ಸುಮ್ಮನೆ ಕುಳಿತು, ತೀರುತ್ತ ಬಂದಿರುವ ಬತ್ತಿಯನ್ನು ಜೋರಾಗಿ ಸೇದುತ್ತ, ಹೊಗೆಯ ಮೋಡವನ್ನು ಎಬ್ಬಿಸಿದ್ದಾನೆ.

ಅತೀ ಬಂದಿಯಿಂದ ನಡೆಯುತ್ತಿದ್ದ ನೆರೆಮನೆಯ ಒಬ್ಬ ಗೃಹಸ್ಥರು, ಆ ಮೋಡವನ್ನು ಕಂಡು, ಹುಡುಗ ನರಸಿಂಹನ ಅಲ್ಲದ ಈ ಅಸಾಧ್ಯ ಚಟವನ್ನು ನೆನೆಸಿ... "ಓ ನರಸಿಂಹಾ,... ನೋಡ್ತ! ಒಂದೆರಡು ತಾಸು ಬೇಕಾಗುವುದು ಮುಗಿಯಲಿಕ್ಕೆ. ಬೀಡಿಯ ಸ್ಟಾಕು ಬೇಕಷ್ಟು ಇದೆಯಲ್ಲ? ಇಲ್ಲದಿದ್ದರೆ ಹೇಳು. ಒಂದು ಕಟ್ಟು ಬತ್ತಿ, ಒಂದು ಬೆಂಕಿಪೆಟ್ಟಿಗೆ ತಂದು ಇರಿಸುತ್ತೇನೆ. ಸೇದುತ್ತ ಉಳಿಯುವಿ!" ನಗುತ್ತ ನುಡಿದು ನಡೆದರು.

ಹೊಳನೆ ಬಂದ ನಗುವನ್ನು, ತಾನು ಮೈ ಅಲುಗಿಸಿದರೆ ಕ್ರಾಪು ಫಕ್ಕನೆ ಹಾಳಾಗುವುದೆಂಬ ಭಯದಿಂದ ಅಷ್ಟಕ್ಕೆ ಅದುಮಿ ಹಿಡಿದು, ಕತ್ತು ಅಲುಗಿಸದೆ, ಕಣ್ಣು ಮಾತ್ರ ಆ ಗೃಹಸ್ಥರು ತೆರಳಿದ ದಾರಿಗೆ ತಿರುಗಿಸಿ, ಕೊಂಚ ಮಾತ್ರ ನಗುತ್ತ, "ಬೇಡ್ರೋ ಮಾರಾಯ್ರ! ಹಾಂಗ ಮಾತ್ರ ಮಾಡಬೇಡಿ" ಎಂದು ನರಸಿಂಹ ಉತ್ತರ ಕೊಟ್ಟ. ಕೆಲಸಿಯ ಗಮನ ಈಚೆ ಬರಲೇ ಇಲ್ಲ. ಆತನ ಅರ್ಧ ಲಕ್ಷ್ಯ ಕೂದಲು ಹೊಡೆಯುವುದರಲ್ಲಿ, ಇನ್ನರ್ಧ ಲಕ್ಷ್ಯ ಗಾಬರಿಯಿಂದ ಒಂದು ಪೆಟ್ಟಿಗೆ ನಾಲ್ಕಾಣೆಯೆಂದು ಖಂಡಿತವಾಗಿ ಹೇಳದೆ, ಮೂರಾಣೆಯೆಂದು ಒಪ್ಪಿ ಕಳಕೊಂಡ ಆಣೆಯನ್ನು ಹೇಗೆ ಸಂಪಾದಿಸಬೇಕು ಎನ್ನುವುದರಲ್ಲಿತ್ತು. ಆದರಿಂದ ಹೊಗೆಸೊಪ್ಪಿನ ಹೊಗೆ ಮೂಗಿಗೆ ನಿಂತು, ನಿಂತು ತೂರಿಕೊಂಡರೂ, ಕೆಲಸಿ ಅತ್ತ ಗಮನ ಕೊಡಲಿಲ್ಲ.

ನರಸಿಂಹನಿಗೆ ಇನ್ನೂ ಹದಿನೆಂಟು ನಡೆಯುತ್ತಲೇ ಇದೆ. ಆದರೆ ಆತನು ಸೇದುವ ಚಟ ನೋಡಿದರೆ, ಅದು ನರಸಿಂಹನಿಗಿಂತಲೂ ಐದಾರು ವರ್ಷ ಹಳೆಯದು ಇರಬೇಕು ಎಂದು ತೋರುವ ಹಾಗಿದೆ. ಏನೋ, ಹುಟ್ಟಿದ ಮನೆಯಲ್ಲೇ, ಅಲ್ಲೇ ಬದಿಗೆ ಬಿದ್ದಿದ್ದ ಸೇದಿ ಒಗೆದ ಬತ್ತಿಯ ತುಣುಕನ್ನು ಬಾಯಲ್ಲಿ ಇರಿಸಿಕೊಂಡು ಬಿಟ್ಟನೆ ಎನ್ನುವಂತಿದೆ. ಕಡಲಲ್ಲಿ ಹೊಗೆ ಬಿಡುತ್ತ ತೆರಳುವ ಉಗಿಹಡಗದ ಹಾಗೆ, ಹೊಗೆ ಬಿಡುತ್ತಲೇ ತೆರಳುತ್ತಾನೆ. ಅದುಗೆ ಮಾಡುವಾಗಲೂ ಹಾಗೆಯೇ. ಹತ್ತಿಸಿದ ಬತ್ತಿ ಒಂದೇ ಎಡಗೈಯ ಬೆರಳುಗಳಲ್ಲಿ, ಒಂದೇ ಹಲ್ಲುಗಳಲ್ಲಿ ಹಿಡಿದದ್ದೇ ಇರಬೇಕು.

ನರಸಿಂಹ ಬ್ರಾಹ್ಮಣರ ಮಗನೆಂದು ಆತನ ಬಣ್ಣ, ವೇಷಗಳಿಂದ ತಿಳಕೊಳ್ಳುವುದು ಬ್ರಹ್ಮನಿಗೂ ಅಸಾಧ್ಯ. ಅವನಾದರೂ ಒಂದು ಗಳಿಗೆ ಅರ್ಧಗಳಿಗೆ, ಆತನನ್ನು ದಿಟ್ಟಿಸಿ ನೋಡಿಯೇ, "ಹೌದಪ್ಪಾ, ನೀನು ನನ್ನ ಮುಖದಿಂದ ಹೊರಬಂದವ" ಎಂದು ಗುರುತಿಸಿಕೊಳ್ಳಬೇಕು.

"ಮೂರಾಣೆರಾ? ಇದೆಲ್ಲಾ ಏನ್ರಾ!", ಚಕ-ಚೂಯಿ ಚಕ-ಚೂಯಿ ಎಂದು ಕೂದಲು ಕತ್ತರಿಸುತ್ತಾ ಕೆಲಸಿ ಮತ್ತೆ ದೂರಿದ.

ಇದನ್ನು ಕೇಳಿ ನರಸಿಂಹ ಏನೊಂದೂ ಉತ್ತರ ಕೊಡಲಿಲ್ಲ. ತನ್ನ ಡೊಣ್ಣೆ ಮೂಗು, ಕಿಟ್ಟ ಕಟ್ಟ ಅರಸಿಣವಾದ ತನ್ನ ಹಲಿಗೆಯಂತಿರುವ ಹಲ್ಲುಗಳನ್ನು ಕನ್ನಡಿಯಲ್ಲಿ ನೋಡುತ್ತ ಕುಳಿತ.

• ಕೆಲಸಿ ಕೂದಲು ಹೊಡೆಯುತ್ತಾ ಇದ್ದಿದ್ದ. ಹೊಡೆಯುತ್ತಿದ್ದಂತೆ ಆತನಿಗೆ ಒಂದೇ ವಿಚಾರ, ಒಂದೇ ಕಳವಳ ಕಾಡುತ್ತಿತ್ತು. ಗಾಬರಿ ಬಿದ್ದು ತಾನು ಒಂದಾಣೆ ಕಳಕೊಂಡನಲ್ಲಾ. ಒಂದಾಣೆಗೆ

ನರಸಿಂಹ ಭಟ್ಟನು ತನಗೆ ಘಸಾಯಿಸಿದನಲ್ಲಾ ಎಂದು ಆತನಿಗೆ ತೋರಿದೆ. ಇದಕ್ಕೇನು ಮಾಡಬೇಕಾಯಿತು ಎಂದು ದಾರಿ ಹುಡುಕುತ್ತಾ ನಡೆದಿದ್ದ. ಯೋಚಿಸುತ್ತಾ ನಡೆದಂತೆ ಆದದ್ದು ಆಯಿತು! ನರಸಿಂಹ ಬಡವ. ಮೂರಾಣೆಗಿಂತ ಹೆಚ್ಚು ಕೊಡಲು ಅಸಮರ್ಥನಿರಬಹುದು ಎಂದು ಒಂದು ವಿಚಾರ ತೋರಿ ಕೆಲಸಿಯ ಮನಸ್ಸು ಒಂದು ಕ್ಷಣ ತುಸು ಸಮಾಧಾನಗೊಂಡಿತು. ''ಒಡ್ಯಾ, ನಿಮಗೆ ಸಂಬ್ಳಾ ಎಷ್ಟು ಸಿಕ್ಕತಾದೆ?'' ಎಂದು ಕೆಲಸಿ ಸಹಜ ಸ್ವರದಲ್ಲಿ ಕೇಳಿದ.

''ಸಂಬ್ಳಾ? ಊಟ ವಸ್ತ ಕೊಟ್ಟು ಹತ್ತು ರೂಪ್ಯಾಯಾ!'', ಬಹು ಮೆತ್ತಗಿನ ದನಿಯಲ್ಲಿ ನರಸಿಂಹ ಉತ್ತರ ಕೊಟ್ಟು, ''ಕಿವಿಯ ಮೇಲೆ ತುಸು ದಪ್ಪವಾಯಿತು ನೋಡು. ಅದನ್ನು ಸರಿಮಾಡು'' ಎಂದು ಕೆಲಸಿಗೆ ಸಲಹೆ ಕೊಟ್ಟ.



ಗೀತಾ ಸಾಳುಂಕೆ

ಇದನ್ನು ಕೇಳುತ್ತಲೆ ಕೆಲಸಿಯ ಮನಸ್ಸು ಮತ್ತೆ ಕಲಕಿ ಹೋಯಿತು. ಕೂದಲು ಕತ್ತರಿಸುತ್ತಿದ್ದ ಹಾಗೆಯೇ ಲೆಕ್ಕ ಹಾಕಿ ನೋಡಿದ. ನರಸಿಂಹನಿಗೆ ಊಟ, ವಸ್ತ ಹೋಗಿ ಸಿಗುತ್ತಿದ್ದ ಹತ್ತು ರೂಪಾಯಿಗಳನ್ನು ಒಡಿಟ್ ಮಾಡಿದ. ರೂವಿ ಖರ್ಚಿಲ್ಲದೆ ಹತ್ತು ರೂಪ್ಯಾ ತಿಂಗಳಿಗೆ ಪ್ರಾಪ್ತಿಯಿದ್ದರೂ, ತಿಂಗಳು ಎರಡು ತಿಂಗಳಿಗೊಮ್ಮೆ, ಕ್ರಾಪಿಗೆ ಆರಾಣೆ ಹೋಗಲಿ, ನಾಲ್ಕಾಣೆ ಕೊಡಕೂಡದು? ತನಗೆ ಬೇಕೆಂತಲೇ ಒಂದಾಣೆಗೆ ಹೊಡೆದನಲ್ಲಾ ಎಂದು ಆಲೋಚನೆ ಕಂಡದ್ದೇ ಕೆಲಸಿಗೆ ಕೋಪ ಬಂದುಬಿಟ್ಟಿತು.

''ಊಟ-ವಸ್ತ ಹೋಗಿ ನಗದಿ ಹತ್ತು ರೂಪ್ಯಾ ಸಂಬ್ಳಾ! ನಿಮಗೆ ಖರ್ಚು ನಾಸ್ತಿ. ಮೇಲೆ ನೀವ್ ಕ್ರಾಪಿಗೆ ಮೂರಾಣೆ ಕೊಡೋದು ಮಾಡ್ತ್ರಿ. ಇದೆಲ್ಲಾ ಏನ್ರಾ?'', ಕೆಲಸಿ ದೊಡ್ಡ ದನಿಯಲ್ಲಿ ನುಡಿದುಬಿಟ್ಟ. ಏನೋ ಅಲ್ಲದ ಅನ್ಯಾಯದ ಬಗ್ಗೆ ಇರುವಷ್ಟಧಿಕಾರ ಕೆಲಸಿಯ ಸ್ವರದಲ್ಲಿ ಒಡಮೂಡಿತ್ತು.

ಕೆಲಸಿ ಮೊದಲಿನಿಂದಲೂ, 'ರೊಂಯೋ' 'ರೊಂಯೋ' ಗುಡುವುದು ನರಸಿಂಹನಿಗೆ ರುಚಿಸಲಿಲ್ಲ. ಒಂದು, ಒಂದೆರಡು ಸಾರೆ 'ರೊಂಯ' ಗುಟ್ಟಿ ಆಮೇಲೆ ತಾನಾಗಿ ಸುಮ್ಮನಾಗುವ;

ಇನ್ನೊಂದು, ಕೆಲಸಿ ಕೆಲಸ ಆರಂಭ ಮಾಡಿಬಿಟ್ಟಿದ್ದಾನೆ; ತಾನು ಸಿಟ್ಟಿಗೆ ಆಶ್ರಯ ಕೊಟ್ಟು, ಏನಾದರೂ ಕಠಿಣ ಮಾತು ತನ್ನ ಬಾಯಿಂದ ಬಂದರೆ, ನಿಷೇಧ ಕೆಲಸ ಪ್ರದರ್ಶನ ಮಾಡಲು ಕೆಲಸಿ, ಅಷ್ಟಕ್ಕೆ ಹರಿತಾಳ ಕೈಕೊಂಡು ಬಿಟ್ಟರೆ, ಅರ್ಧ ಕೂದಲು ಕತ್ತರಿಸಿದ ತಲೆಯನ್ನು ಎತ್ತಿಕೊಂಡು ಹೇಗೆ ತಿರುಗುವುದು ಎಂದು ಸುಮ್ಮನೆ ಕುಳಿತಿದ್ದ. ಮನಸ್ಸಿನಲ್ಲಿ ಯಾವ ಪ್ರಾರಬ್ಧದಿಂದ ಈ ಕೆಲಸಿ ಗಂಟುಬಿದ್ದನೋ ಎಂಬ ವಿಚಾರ ಬರುತ್ತಲೇ ಇತ್ತು.

ಆದರೆ ಈಗ ಅಸಹ್ಯವಾಯಿತು. ತಲೆ ಎತ್ತಲಿಲ್ಲ; ಕೆಲಸಿಯ ಬದಿಗೆ ಮೋರೆ ತಿರುವಲಿಲ್ಲ. "ಹೌದೇನು, ನೀನು ಬಹಳ ರಿಪಿರಿಪಿ ಮಾಡ್ತೆಯೇನು, ನನಗೂ ನಿನಗೂ ಮುಂಚೆಯೇ ಮಾತ್ಕತೆ ಆಗಿಹೋಗಿದೆಯಲ್ಲಾ. ನೀನು 'ಆರಾಣೆ ಐದಾಣೆ ಕೊಡ್ರಾ' ಅಂದೆ, ನಾನು 'ಮೂರಾಣೆಗೆ ಆಗುವ ಹಾಗಿದ್ದರೆ ನೋಡು' ಎಂದು ಹೇಳಲಿಲ್ಲ? 'ಆಯ್ತು ಹಾಂಗಾದ್ರೆ, ಬನ್ನಿ' ಎಂದು ನೀನು ಹೇಳಲಿಲ್ಲ? ಮೊದಲು ಮಾತು ಮಾಡಿಕೊಂಡು ಈಗ ಕಟ್ಕಟೆ ಮಾಡ್ತೆ? ಎಂಥಾ ನಮೂನೆಯೋ ಇದು? ಕ್ರಾಪು ಗ್ರೀಪು ಎಡವಟ್ (ಅಸಡ್ಡೆ) ಆದ್ರೆ ನೋಡು, ಹಂ!"

ನರಸಿಂಹ ಹೇಳುವುದು ನಿಜ, ಸರಿ; ಇದೆಲ್ಲಾ ಹೀಗೆ ನಡೆದದ್ದು ನಿಜವೆಂದು ತಿಳಿದರೂ ಕೆಲಸಿಯ ಮನಸ್ಸು ಒಪ್ಪವುದಿಲ್ಲ, ಶಾಂತವಾಗುವುದಿಲ್ಲ. 'ಎಲಾ ಮೂರ್ಖಾ ನೀ ಸುಮ್ಮನೆ ಗಾಬರಿ ಮಾಡಿ ಆಣೆ ಕಳಕೊಂಡೆಯಲ್ಲಾ', ಕೆಲಸಿಯ ಮನಸ್ಸು ನಿಂತು ನಿಂತು ಆತನಿಗೆ ಚುಚ್ಚುತ್ತದೆ, ಕಟಿಯುತ್ತದೆ. ತಾನು ಮೊದಲು ಗಾಬರಿ ಮಾಡಬಾರದಿತ್ತು ಎಂದು ಕೆಲಸಿಗೆ ತೋರುತ್ತದೆ. ಆತನಿಗೆ ಸಪ್ಪ ಪೀಡೆಯಾಗಿಬಿಟ್ಟಿತು. ಅಡುಗೆ ಭಟ್ಟ ನರಸಿಂಹನಿಗೆ ಏನು ಮಾಡಲಿ? ಒಂದಾಣೆಯ ಹಾನಿ ತನಗೆ ಮಾಡಿಬಿಟ್ಟನಲ್ಲಾ! ಕೆಲಸಿಗೆ ಅಸಾಧ್ಯ ಸಂತಾಪ ತೋರಿ, ತುಂಬಾ ತಿರಸ್ಕಾರದಿಂದ ನುಡಿದ, "ಒಡ್ಯಾ, ನಿಮ್ಗೆ ಚಲೋ ಆಗುದಿಲ್ಲಾ. ಎಂತಾ ತಂದು ಮಾಡಿದ್ರಿ. ಇದ್ಕೇರಾ! ಈ ರೋಗ ನಿಮ್ಗೆ ಮಾತ್ರ ಅಲ್ಲಾ, ನಿಮ್ಮ ಅಪ್ಪನವ್ರಿಗೂ ಬಿಡಲಿಲ್ಲ. ಅವರೂ ಹೀಂಗೆಯಾ! ಹಳ್ಳಿಮೇಲೆ ಜೋಳಿ ಹೊತ್ಕೊಂಡು ತಿರುಗುವ ವ್ಯಾಪಾರದಲ್ಲಿ ದಿನಕ್ಕೆ ಎರಡು ರೂಪ್ಯಾ ಫಾಯ್ದೆ ಇದ್ದರೂ, ತಲೆಚಕ್ರಕ್ಕೆ ಕೊಡೋದು ಒಂದಾಣೆಯಾ. ನೀವು ಕ್ರಾಪಿಗೆ ಮೂರಾಣೆ ಕೊಡ್ತಿ. ಸಂತಾನ ಗುಣ್ವೆ ಹಾಂಗೆ. ಅದ್ಕೇರಾ ನಿಮ್ಮ ಕುಲಕ್ಕೆ ಬರಕತ ಇಲ್ಲಾ! ಮತ್ತು ಏನು ಹೇಳಿ ಮಾಡಿದ್ರಿ ನೀವು." ತಾನು ಆಡಬಹುದಾದ ಮಾತನ್ನು ಆಡಿದೆನೋ, ಆಡಬಾರದ ಮಾತನ್ನು ನುಡಿದೆನೋ, ಕೆಲಸಿಗೆ, ಸಂತಾಪ ಭರದಲ್ಲಿ ತಿಳಿಯಲೇ ಇಲ್ಲ. ಒಮ್ಮೆ ಮಾತು ಆಗಿಹೋದ ಬಳಿಕ ಹೀಗೆಲ್ಲಾ ಮಾತಾಡಲು, ರೀತಿ ನೀತಿಯಂತೆ ತನಗೆ ಅಧಿಕಾರವಿದೆಯೋ ಇಲ್ಲವೋ ಎಂಬುದನ್ನೂ ಆಣೆ ಕಳಕೊಂಡೆನೆಂಬ ಸಂತಾಪದಲ್ಲಿ ಕೆಲಸಿ ವಿಚಾರಿಸಲೇ ಇಲ್ಲ. ಆತನಿಗೆ ಪರಿಣಾಮದ ಭಯ ಮರೆತು ತೋರಲಿಲ್ಲ. ಅಡುಗೆ ಭಟ್ಟ ಕುಳ್ಳ ನರಸಿಂಹ ತನಗೇನು ಮಾಡುವ? ಮೇಲೆ ವಿದೇಶಿ ಪದ್ಧತಿಯ ಕ್ರಾಪಿನ ಜತೆ ಹೇಗೂ ಸಂಧಾನ ಮಾಡಿಕೊಂಡು ಬಾಳಿ ಬಂದ ನರಸಿಂಹನ ಗೋಪಾದದಷ್ಟು ಜುಟ್ಟು (ಚಂಡಿಕೆ) ಹೊಸ ಕೇರಿಯ ಕೆಲಸಿಯ ಕೈಯಲ್ಲಿ ಭದ್ರವಾಗಿ ಇತ್ತು. ಆತನಿಗೆ ಅಧೈರ್ಯ ಏನು?

ನರಸಿಂಹ ದೊಪ್ಪನೆ ಹಾರಿಬಿದ್ದ. "ಅಲುಗಾಡಬೇಡಿ" ಎಂದು ಕೆಲಸಿ ನುಡಿದ. ನರಸಿಂಹನಿಗೆ ಏನೋ ಕೆಲಸಿ ತನಗೆ ಒದ್ದು ಬಿಟ್ಟಂತೆ ತೋರಿತು. "ಅರೆ!"ಯೆಂದೊಮ್ಮೆ ಆತನಿಗೆ ದಿಗ್ಭ್ರಮೆಯಾಯಿತು. ಎಷ್ಟೇ ಆಚಾರ ಬಿಟ್ಟವನಾದರೂ ತಾನು ಬ್ರಾಹ್ಮಣನೇ ಅಲ್ಲವೇ ಎಂಬ ವಿಚಾರವಾಯಿತು.

'ಚಕ್-ಚೂಯಿ', 'ಚಕ್-ಚೂಯಿ' ಕೆಲಸಿಯ ಕತ್ತರಿ ಕೂದಲು ಕತ್ತರಿಸುತ್ತಲೇ ಇತ್ತು. 'ಹಿಂದೆ

ದಪ್ಪವಾಯಿತೋ ಏನೋ? ಕಿವಿಯ ಮೇಲೆ ತೆಳುವಾಯಿತೋ ಏನೋ?' ಎಂದುಕೊಳ್ಳುತ್ತಾ ಕತ್ತರಿಯ ಜತೆಯಲ್ಲಿ ಮೊದಲಿದ್ದ ನರಸಿಂಹನ ಗಮನ, ಈಗ ಅಲ್ಲಿ ನಿಲ್ಲದಾಯಿತು. ಕತ್ತರಿಯ ಸದ್ದೂ ಆತನಿಗೆ ಕೇಳಿಸದಾಯಿತು. ಮನಸ್ಸು ವಿಚಾರಜಾಲದಲ್ಲಿ ಸಿಲುಕಿ ಒದ್ದಾಡುತ್ತಿದೆ.

ಮೋರೆ, ತಲೆ, ಕಾದು, ಕೆನ್ನೆ, ಮೂಗು ಮೇಲ್ತುಟಿಯ ಮೇಲೆ ಬೆವರು ಸಂತತವಾಗಿದೆ. ಕಣ್ಣು ಕಿವಿಗಳಲ್ಲಿ ಬೆಂಕಿಯೆದ್ದಿದೆ. ವಿಚಾರಗಳು ಗರಗರನೆ ತಿರುಗುತ್ತಿವೆ. ವೇದಾಧ್ಯಯನ ಹೋಗಲಿ, ಒಂದು ದಿನ ಸಹ ತಾನು ಗಾಯತ್ರಿ ಜಪಿಸಿದ ಹಂಬಲ ಆತನಿಗೆ ಬರುವುದಿಲ್ಲ. ನಾಲ್ಕು ಜನರಿಗೆ ಊಟ ಹಾಕಿ, ಐವತ್ತು ರೂಪಾಯಿಗಳನ್ನು ಖರ್ಚುಮಾಡಿ, ತನಗೆ ಉಪನಯನ ಮಾಡಿದ್ದು ಯಾವ ಲೆಕ್ಕಕ್ಕೆ ಆಯಿತು? ಅದೆಲ್ಲಾ ಹೋಗಲಿ, ಇಂಗ್ಲಿಷು ಒಂದಕ್ಷರ ಬರದ ತನಗೆ, ಅಡುಗೆ ಮಾಡುತ್ತಿರುವವನಿಗೆ, ಇಂಗ್ಲಿಷು ಪದ್ಧತಿಯ ಸುಡುಗಾಡು ಕ್ರಾಪು ಯಾಕೆ ಬೇಕಾಯಿತು?' ಎಂಬ ವಿಚಾರ ಕತ್ತರಿ ಎಷ್ಟು ಬಾರಿ 'ಚಕ್-ಚುಂಯ್' ನುಡಿಯಿತೋ ಅಷ್ಟು ಬಾರಿ ನರಸಿಂಹನ ಮನಸ್ಸಿನಲ್ಲಿ ನಡೆಯಿತು.

ತಲೆಯ ಹಿಂಬದಿಯ ಕೆಲಸ ಪೂರ್ತಿ ಯಾಯಿತು.

"ತಿರುಗಿ ಕುತ್ಕೊಳ್ಳಿ. ಒಂದಾಣೆಯ ಮೋಕಾ (ಮೋರೆ) ನೋಡಬೇಡ್ರಾ. ನಾಲ್ಕಾಣೆ ಕೊಡಿ. ಕ್ರಾಪು ಯಾವ ನಮೂನೆ ಮಾಡ್ತೆ ನೋಡಿ.

## 'ಮಾಸ್ತಿ ಮತ್ತು ಚಿತ್ತಾಲರ ನಡುವಿನ missing link'



ಶೋಷಿತ ಮತ್ತು ಶೋಷಕನ ಅತಿಸೂಕ್ಷ್ಮ ಮುಖಾಮುಖಿಯನ್ನು, ಯಾವ ತೀರ್ಪುಗಾರಿಕೆಯಿಲ್ಲದೆ, ದಾರುಣ ವಿನೋದದ ಉಜ್ವಲ ಘಟನೆಯ ಮೂಲಕ ಸರಳವಾಗಿ ಮುಂದಿಡುವ ಈ ಕತೆಯನ್ನು ಐವತ್ತು ವರ್ಷಗಳ ಹಿಂದೆಯೇ ಬರೆದ ವಿ.ಜಿ. ಶ್ಯಾನಭಾಗ್ ಅಜ್ಞಾತವಾಸದಲ್ಲಿಯೇ ಇದ್ದು ಹೋದ ಅಪ್ರತಿಮ ಕತೆಗಾರ. ಇವರ ಪೂರ್ತಿ ಹೆಸರು ವೈಕುಂಠ ಗೋಪಾಳ ಶ್ಯಾನಭಾಗ (1912-1980). ಕುಮಟಾ ತಾಲೂಕಿನ ಹೆಗಡೆ ಗ್ರಾಮದಲ್ಲಿ, ವೃತ್ತಿಯಿಂದ ಮರ ಮೋಪುಗಳ ವ್ಯಾಪಾರಿಯಾಗಿದ್ದ ಇವರು, ಅದರಲ್ಲಿ ಯಶಸ್ವಿಯಾಗಲಿಲ್ಲ. ಪ್ರವೃತ್ತಿಯಿಂದ ಕತೆಗಾರ, ಚಿಂತಕ, ರಾಯ್‌ವಾದಿ. ಕನ್ನಡ, ಇಂಗ್ಲಿಷ್, ಹಿಂದಿ ಮತ್ತು ಮರಾಠಿ ಸಾಹಿತ್ಯ ಓದಿಕೊಂಡಿದ್ದರು. ಅರ್ಥಶಾಸ್ತ್ರ, ಮನೋವಿಜ್ಞಾನ, ವೇದಾಂತಗಳಲ್ಲಿ ಆಸಕ್ತಿ ಅವರಿಗಿತ್ತು. 1930 ಹಾಗೂ 40ರ ದಶಕಗಳಲ್ಲಿ ಮಾಸ್ತಿಯವರ 'ಜೀವನ', ಆನಂದಕಂದರ 'ಜಯಂತಿ'-ಹಾಗೂ ಶಿರಸಿಯಿಂದ ಹೊರಡುತ್ತಿದ್ದ 'ನವಚೇತನ' ಪತ್ರಿಕೆಗಳಲ್ಲಿ ಅವರ ಕತೆಗಳು ಪ್ರಕಟವಾಗಿವೆ. 'ಕೆಲವು ಚಿತ್ರಗಳು' (1942), 'ಇಂದ್ರಧನುಷ್ಯ' (1943) ಇವರ ಕಥಾ ಸಂಗ್ರಹಗಳು-ಕುಮಟಾದ 'ಶಾರದಾ ಸಾಹಿತ್ಯ ಮಾಲೆ'ಯಲ್ಲಿ ಪ್ರಕಟವಾದವು. ನಂತರ ಕನ್ನಡ ನವ್ಯ ಚಳವಳಿ ಉಕ್ಕಿ ಬಂದಾಗ, ಯಾಕೋ ಬರೆಯದೆ ಸುಮ್ಮನೆ ಅಜ್ಞಾತವಾಸದಲ್ಲಿ ಉಳಿದುಬಿಟ್ಟರು. ಅವರ ಕೆಲವು ಕತೆಗಳು, ಒಂದು ಕಾದಂಬರಿ ಅಪ್ರಕಟಿತವಾಗಿಯೇ ಇವೆ.

ವಿ.ಜಿ. ಶ್ಯಾನಭಾಗರ ಎಲ್ಲ ಕತೆಗಳನ್ನು ಸಂಗ್ರಹಿಸಿ ಸಂಕಲನ ಪ್ರಕಟಿಸುವ ವಿಚಾರ ಹೊಂದಿರುವ ಸಾಹಿತಿ, ವಿಮರ್ಶಕ ಎಂ.ಜಿ. ಹೆಗಡೆಯವರು-ನಮಗೆ ಈ ಕಥೆಯನ್ನು, ಮಾಹಿತಿಯೊಂದಿಗೆ ಒದಗಿಸಿಕೊಟ್ಟಿದ್ದಾರೆ. ಅವರಿಗೆ ನಾವು ಆಭಾರಿ. ಎಂ.ಜಿ. ಹೇಳುತ್ತಾರೆ- "ವಿ.ಜಿ. ಶ್ಯಾನಭಾಗರ ಸಮಗ್ರ ಸಂಕಲನ ಬೆಳಕಿಗೆ ಬಂದಾಗಲೇ-ಮಾಸ್ತಿಯವರ 'ಮೊಸರಿನ ಮಂಗಮ್ಮ' ಮತ್ತು ಚಿತ್ತಾಲರ 'ಬೊಮ್ಮಿಯ ಹುಲ್ಲು ಹೊರೆ'ಗಳ ನಡುವಿನ missing link ದೊರಕಿದಂತಾಗಬಹುದು!"

ಒಡ್ಯಾ, ಆ ಮಲವಾಣಿ ಕೆಲಸಿಗಳೇ ಚಲೋ ಹೊಡಿವವರು ಹೇಳಿ ಮಾಡಿದ್ರಿ, ನೀವು? ಹಾಂಗಾದ್ರೆ, ಕನ್ನಡ ಕೆಲ್ಸಿ. ಮಾತು ಗೊತ್ತಿಲ್ಲಾ ನಿಮಗೆ? ನಾವು ಮನ್ಸು ತಕೊಂಡು ಮಾಡ್ರೆ ನಮ್ಮುಂದೆ ಮಲವಾಣಿ ಏನ ಕಡೀಬೇಕ್ರಾ!'' ಕೆಲಸಿ ಹೇಳಿದ.

ನರಸಿಂಹ ತಿರುಗಿ ಕುಳಿತ. ಕೈಯೊಳಗಿನ ಕನ್ನಡಿ ಆ ಕೆಲಸಿಯದು ಎಂದು ಅನಿಸಿದ ತಡವೇ, ನರಸಿಂಹ ಅದನ್ನು ಹೊಲಸು ಪದಾರ್ಥವೆಂಬಂತೆ, ಕೆಲಸಿಯ ಚರ್ಮದ ಹಡ್ಪಿನ ಬಳಿ ಒಗೆದುಬಿಟ್ಟ. ''ಅದನ್ನು ಮತ್ತೆ ಒಡೆದು ಹಾಕ್ಬೇಡಿ, ಮಾರಾಯ ಒಡ್ಯಾ. ಮೊದ್ಲೆ ಕ್ರಾಪಿಗೆ ಮೂರಾಣೆ ಕೊಡೊ ಸಾವಕಾರರು ನೀವು'', ಕೆಲಸಿ ಹಂಗಿಸಿ ನುಡಿದ.

ನಾಲ್ಕು ರೂಣೆ ಕೆಲಸಿ ಕಟ್ ಮಾಡಿದ. ಗದ್ದದ ಮೇಲಿನ ಕೂದಲುಗಳನ್ನು ಸವರಿ ಒಗೆದ. ಆಯಿತು. ಕೆಲಸ ಮುಗಿಯಿತು.

ನರಸಿಂಹ ಮಾತಿನಂತೆ, ಮೂರಾಣೆಗಳನ್ನು ಕೆಲಸಿಯ ಮುಂದೆ, 'ಇಗೋ' ಎನ್ನುತ್ತಾ ಲೆಖ್ಖ ಮಾಡಿ ಒಗೆದ. ''ಇಷ್ಟೇಳ್ದ್ರು ಮೂರಾಣ್ಯೆಯಾ! ಪಶಿರ್ಯಾ (ಆಶ್ಚರ್ಯ) ಆಯ್ತು! ಆದರೆ ನೀವು ಮಸ್ತಾದ ಗಿರಾಕಿ ನೋಡಿ'', ಮತ್ತೆ ತಿರಸ್ಕಾರದಿಂದ ಕೆಲಸಿ ನುಡಿದ.

''ತಮ್ಮಾ, ಗಡಬಿಡಿ ಮಾಡಬೇಡ್ವೋ. ಸ್ವಲ್ಪ ನಿಲ್ಲು. ನನ್ನ ಕೈಯ್ಲಿ ಮತ್ತೆರಡು ಆಣೆ ಇವೆ. ಇಗೋ ನಿನ್ನ ಮುಂದೆ ಒಗೆಯುತ್ತೇನೆ. ನೀನು ತಲೆ ಚಕ್ಕ ಏನು ತಕ್ಕೊಳ್ತೆ? ಒಂದಾಣೆಯಲ್ಲಾ? ಒಂದಾಣೆ ಮತ್ತೆ ಕೊಡ್ವೆ. ನನಗೆ ತಲೆ ಚಕ್ರಾ ಮಾಡಿಬಿಡು. ಜುಟ್ಟು ಒಂದು ಬಿಟ್ಟು ಬಾಕಿಯೆಲ್ಲಾ ಸರ್ ಸರ್ ಕೆತ್ತಿಬಿಡು. ತಡಮಾಡಬೇಡ. ತಲೆ ಬೋಳಿಸಿಬಿಡು. ಈ ಮೂರು ಕಾಸಿನ ಕ್ರಾಪಿಗಾಗಿ ನಾನು ಬ್ರಾಹ್ಮಣ ಎಂಬುದನ್ನು ನೀನು ಮರೆತುಬಿಟ್ಟೆಯಲ್ಲಾ? ಚೆಂಡಿಕೆ ಬಿಟ್ಟು ಬಾಕಿಯೆಲ್ಲಾ ಕೆತ್ತಿ ಒಗಿ, ಹರಿ, ಕೆತ್ತೋ. ತಡಮಾಡಬೇಡ. ಆಣೆಯಲ್ಲಾ ಎರಡಾಣೆ ಕೊಡ್ತೆ.'' ಕಲ್ಲಿನಂತೆ ಮೈಯಿರುವ ಕೆಲಸಿಯ ಗಡಸು ಮೋರೆಯನ್ನು ದುರುದುರನೆ ನೋಡುತ್ತಾ, ನರಸಿಂಹ ಕಾದಸ್ವರದಲ್ಲಿ ನುಡಿದ.

ಕೆಲಸಿ ದಿಗ್ಭ್ರಾಣದೆ ಕುಳಿತ. ನೆಲದಮೇಲೆ ಬಿದ್ದ ಮೊದಲಿನ ಮೂರಾಣೆ, ಕೊನೆಯ ಎರಡಾಣೆ ಇವುಗಳನ್ನು ಎತ್ತಿಕೊಳ್ಳುವ ಧೈರ್ಯವೂ ಅವನಿಗಿಲ್ಲದೆ ಹೋಯಿತು.

''ನನ್ನ ತಲೆ ಬೋಳಿಸಿಬಿಡು'', ನರಸಿಂಹ ಮತ್ತೆ ಒದರಿ ಹೇಳಿದ.

ಏನೂ ಸೂಚಿಸದೆ ಕೆಲಸಿ, 'ಬೇಡ್ರಾ, ಒಡ್ಯಾ' ಎಂದು ಮೆತ್ತಗಿನ ದನಿಯಲ್ಲಿ ನುಡಿದ.

ಆದರೆ ನರಸಿಂಹ ತಡೆಯುತ್ತಾನೆಲ್ಲಿ? ಕೆಲಸಿಯ ಚರ್ಮದ ಹಡ್ಪನ್ನು ಭದ್ರವಾಗಿ ಹಿಡಿದು, ''ನೀನು ಎರಡಾಣೆ ಕೊಂಡು, ಬದಲಿಗೆ ನನ್ನ ಬೋಳು ಕೆತ್ತಬೇಕು. ಇಲ್ಲದಿದ್ದರೆ ನಾನು ನಿನ್ನ ಹಡ್ಪು ಬಿಡುವವನಲ್ಲ'' ಎಂದು ರೋಷದಿಂದ ನುಡಿದ.

ಕೆಲಸಿಗೆ ತಾನು ಬಿಡಿಸಿದ ಕ್ರಾಪನ್ನು ತಾನೇ ಕೆತ್ತಿ ತೆಗೆಯುವ ಮಾತು ಎಷ್ಟಕ್ಕೂ ಸೇರುತ್ತಿರಲಿಲ್ಲ. ತಾನು ನುಡಿಯಬಾರದ ಮಾತುಗಳನ್ನು ನುಡಿದ ಪರಿಣಾಮವಾಗಿ, ಸಿಟ್ಟಿನಿಂದ ನರಸಿಂಹ ಹೀಗೆ ಆಗ್ರಹ ಹಿಡಿದಿದ್ದಾನೆ ಎಂಬುದು ಕೆಲಸಿಗೆ ತಿಳಿಯಿತು. ಆತನ ಆಗ್ರಹ ತಿಳಿದು, ಆತನ ಕಣ್ಣು, ಮೋರೆ ಕಂಡು, ''ಕಾಲಿಗೆ ಬೀಳುತ್ತೇನೆ. ನನ್ನ ಹಡ್ಪು ಕೊಡಿ'' ಎಂದು ಬಿನ್ನವಿಸಿಕೊಂಡ. ಒಂದು ತಾಸಿನತನಕ ನೋಡಿ ನೋಡಿ, ನರಸಿಂಹ ಹಡ್ಪು ಕೊಟ್ಟ.

ಮೂರು ತಾಸಿನ ಅನಂತರ ಸೋಕ್ಷಮೋಕ್ಷವಾದ ಚಂದ್ರಬಿಂಬದಂತೆ ಲಖಲಖಿಸುವ ತಲೆಗೆ ಮೃತ್ತಿಕೆ ಹಚ್ಚಿಕೊಂಡು ನರಸಿಂಹ ಬಾವಿಯ ಮೇಲೆ ಸ್ನಾನ ಮಾಡಿಕೊಳ್ಳುತ್ತ ನಿಂತಿದ್ದ.



(ಮಾಸ್ತಿ ಸಂಪಾದಿತ 'ಜೀವನ' (1945) ದಿಂದ.)




ವಿವೇಕ ಶಾನಭಾಗ

ಕಥನ ಕುತೂಹಲ

# ಭಾಷೆಯಿಂದ ಭಾಷೆಗೆ

ಕೆಲವು ವರ್ಷಗಳ ಹಿಂದೆ ಕ್ಯಾಥರೀನ್ ಆ್ಯನ್ ಪೋರ್ಟರ್‌ಳ 'ಹಿ' (He) ಎಂಬ ಕಥೆಯೊಂದನ್ನು ಕನ್ನಡಕ್ಕೆ ಭಾಷಾಂತರಿಸಲು ಪ್ರಯತ್ನಿಸಿದ್ದೆ. ಈ ಪ್ರಕ್ರಿಯೆಯಲ್ಲಿ, ಒಂದು ಭಾಷೆಯಲ್ಲಿ ಸಂಭವಿಸುವ ಅನುಭವ ಇನ್ನೊಂದಕ್ಕೆ ಹೋಗುವಾಗಿನ ಕಷ್ಟಗಳು ಗೊತ್ತಾಗತೊಡಗಿದವು. ಒಂದು ದುರ್ಬಲ ಮಗುವಿನ ಸುತ್ತ ಬೆಳೆಯುವ ಈ ಕತೆ ತನ್ನ ಸೂಕ್ಷ್ಮಾತಿಸೂಕ್ಷ್ಮ ವಿವರಗಳ ಮೂಲಕ, ಕ್ರೌರ್ಯವನ್ನು ತನ್ನಿಂದಲೇ ಮುಚ್ಚಿಡಲು ಮನುಷ್ಯ ಮಾಡುವ ಪ್ರಯತ್ನಗಳನ್ನು, ಎಂಥ ದುರಂತಗಳ ನಡುವೆಯೂ ಜೀವನ ಮುನ್ನುಗ್ಗುತ್ತಲೇ ಹೋಗುವುದನ್ನು, ಜೀವವಿಕಾಸದ ಮೂಲ ತತ್ತ್ವಗಳನ್ನು ನಿಭಾಯಿಸುವಲ್ಲಿ ಎದುರಾಗುವ ಸಂಕಟಗಳನ್ನು, ಆಳವಾಗಿ, ಗಾಢವಾಗಿ ವಿಶ್ಲೇಷಿಸುತ್ತದೆ. ಈ ಇಡೀ ಕಥೆಯುದ್ದಕ್ಕೂ ಮಗುವನ್ನು He ಎಂದು ಕರೆಯುತ್ತ, ದೇವರನ್ನು ಕುರಿತಾಗಿ ಬಳಸುವಂತೆ ಕ್ಯಾಪಿಟಲ್ ಎಚ್ ಬಳಸಿದ್ದಾರೆ. ಇದನ್ನು ಕನ್ನಡದಲ್ಲಿ ಯಾವ ರೀತಿಯಿಂದಲೂ ತರುವುದು ಅಸಾಧ್ಯವಾಗಿತ್ತು. ಆದರೆ ಸಮಸ್ಯೆ ಬರೀ ಇಷ್ಟೇ ಆಗಿರಲಿಲ್ಲ. ಕನ್ನಡದಲ್ಲಿ ಸಂಭವಿಸಿಲ್ಲದ ಅನುಭವವನ್ನು ಹೇಳುವ ಈ ಕತೆಯನ್ನು ಕನ್ನಡದ ಕತೆಯೇ ಎಂಬಂತೆ ಭಾಷಾಂತರಿಸುವುದು ಸಾಧ್ಯವಿರಲಿಲ್ಲ. ಹಾಗೆ ಮಾಡುವ ಪ್ರಯತ್ನವೇ ಅರ್ಥಹೀನ ಅನಿಸಿಬಿಟ್ಟಿತು. ಒಂದು ಒಳ್ಳೆಯ ಕೃತಿ ಭಾಷಾಂತರಿಸಲು ಅಸಾಧ್ಯವಾಗಿರುವಂಥದ್ದಾಗಿರುತ್ತದೆ. ಆದರೂ ಗ್ರಹಿಕೆಯನ್ನು ವಿಸ್ತರಿಸಿಕೊಳ್ಳಲು ಭಾಷಾಂತರಗಳು ಅತ್ಯಂತ ಅಗತ್ಯ. ಒಳ್ಳೆಯ ಭಾಷಾಂತರ, ಮೂಲ ಭಾಷೆಯಲ್ಲಿ ಆ ಕೃತಿ ಹೇಗೆ



ಸಂಭವಿಸಿತು ಅನ್ನುವುದರ ಕಲ್ಪನೆ ಕೊಡುವಂತಿರುತ್ತದೆ. ತನ್ನ ದೊರಗುತನದಲ್ಲೇ ಆ ಭಾಷೆಯ ಸತ್ವವನ್ನು ಹೇಳುತ್ತದೆ. ಮೂಲದಲ್ಲಿಲ್ಲದ ಚೆಂದದ ಶಬ್ದಗಳಲ್ಲಿಟ್ಟು, ಕನ್ನಡದ್ದೇ ಅನಿಸುವಂತೆ ಬರೆಯುವುದನ್ನೇ ಗುರಿಯಾಗಿಟ್ಟುಕೊಂಡಿರುವ ಭಾಷಾಂತರಗಳಲ್ಲಿ ಈ ಸತ್ವ ಕಾಣೆಯಾಗಿರುವುದನ್ನು ಗಮನಿಸಬಹುದು. ಒಂದು ಭಾಷಾಂತರವನ್ನು ಓದುವಾಗ ಅದೊಂದು 'ಭಾಷಾಂತರ' ಅನ್ನುವುದನ್ನು ಮರೆಯದೇ ಓದಬೇಕು. ಇದಕ್ಕೆ ಓದುಗ ಹೆಚ್ಚಿನ ಪ್ರಯತ್ನ ಮಾಡುವ ಅಗತ್ಯ ಇದೆ. ಈ ಓದಿನ ಅಪೇಕ್ಷೆಗಳ ಭಿನ್ನತೆಯನ್ನು ಗುರುತಿಸಬೇಕು.

ಕನ್ನಡದಲ್ಲಿ ಸಂಭವಿಸಿಲ್ಲದ ಕೆಲವು ಗಾಢವಾದ ಅನುಭವಗಳನ್ನು ಕುರಿತು ಬರೆಯುವ ಅಗತ್ಯ ಬಂದಾಗ, ಎಲ್ಲ ಲೇಖಕರಂತೆ ನಾನೂ ಅನೇಕ ಸಮಸ್ಯೆಗಳನ್ನು ಎದುರಿಸಿದ್ದೇನೆ. ಕೆಲವು ಕತೆಗಳಂತೂ ಮೊದಲ ಓದಿಗೆ ಭಾಷಾಂತರದಂತೆ ಅನಿಸುವ ಅಪಾಯದಲ್ಲಿರುತ್ತವೆ. ಪ್ರತಿ ವಾಕ್ಯಗಳಿಗೂ ಒಂದು ಹೆಜ್ಜೆ ಸಪ್ಪಳವಿರುವುದರಿಂದ ಇಂಥ ಕರ್ಕಶತೆಯನ್ನು ನಿಭಾಯಿಸಲು ಕಷ್ಟಪಡಬೇಕಾಗುತ್ತದೆ.

ಕತೆಯ ವಿವರಗಳನ್ನು ಕಟ್ಟಲು ಬಳಸಿದ ಅನೇಕ ಶಬ್ದಗಳು, ಕನ್ನಡದಲ್ಲಿ ಬಳಕೆಯಲ್ಲಿ ಇಲ್ಲದ್ದರಿಂದ ಕಿವಿಗೆ ಅನ್ಯವಾಗಿರುತ್ತವೆ. ಬಳಸಿದಾಗಲೇ ಶಬ್ದಗಳು ಕಿವಿಗೆ ಪಕ್ಕಾಗುತ್ತವೆ. ಬಳಕೆಯಲ್ಲಿಲ್ಲದ ಹೊಸ ಶಬ್ದಗಳು, ಅಸಡ್ಡಾಳ ಹರಡಿಬಿದ್ದ ಉಪಕರಣಗಳಂತೆ ಅಡ್ಡಡ್ಡ ತೊಡರುತ್ತವೆ. ಇದನ್ನು ಕೇವಲ ಸಮಾನ ಶಬ್ದಗಳ ಕೊರತೆಯಿಂದು ಭಾವಿಸಬಾರದು. ಹೊಸ ಅನುಭವದ ಭಾಗವಾಗುವುದರ ಮೂಲಕವೇ ಹೊಸ ಶಬ್ದಗಳು ಒಂದು ಭಾಷೆಯಲ್ಲಿ ಸಮರ್ಥವಾಗಿ ಸೇರಲು ಸಾಧ್ಯ ಮತ್ತು ಬಳಸುವುದರಿಂದಲೇ ಹದವಾಗಲು ಸಾಧ್ಯ. ಕೇವಲ ಸಮಾನ ಶಬ್ದಗಳನ್ನು ಸೃಷ್ಟಿಸಿದರೆ ಅಲ್ಲಿಗೆ ಅದು ಮುಗಿಯುವುದಿಲ್ಲ. ಉದಾಹರಣೆಗೆ ಕಂಪ್ಯೂಟರ್ ಸಾಫ್ಟ್‌ವೇರ್‌ನಲ್ಲಿ ಮುಂಚೂಣಿಯಲ್ಲಿರುವ ಕರ್ನಾಟಕದಲ್ಲಿ, ಈ ಕ್ಷೇತ್ರದ ವ್ಯವಹಾರಕ್ಕಾಗಿ ಕನ್ನಡ ಬಳಸುವವರ ಸಂಖ್ಯೆ ಬಹಳ ಕಡಿಮೆ. ಕಂಪ್ಯೂಟರಿನಲ್ಲಿ ಕನ್ನಡದಲ್ಲೇ ಸಾಫ್ಟ್‌ವೇರ್ ಬರೆಯುವ ಹಟಕ್ಕಿಂತ, ಆ ಕ್ಷೇತ್ರದ ವ್ಯವಹಾರಕ್ಕೆ ಕನ್ನಡವನ್ನು ಉಪಯೋಗಿಸುವುದು ಮುಖ್ಯ. ಆಗ ಆ ಅನುಭವವನ್ನು ಸಮರ್ಥವಾಗಿ ಹಿಡಿಯುವ ರೂಪಕಗಳು ಸೃಷ್ಟಿಯಾಗುತ್ತವೆ. ಹೊಸ ಶಬ್ದಗಳು ಸೇರಿಕೊಳ್ಳುತ್ತವೆ. ಅನುಭವಕ್ಕೂ, ಭಾಷೆಗೂ ಒಂದು ಅವಿನಾಭಾವ ಸಂಬಂಧವಿದೆ. ಈಚಿನ ಹೊಸ ಕ್ಷೇತ್ರಗಳು, ಹೊಸ ಅವಕಾಶಗಳು ಕನ್ನಡದಿಂದ ಹೊರತಾಗಿರುವುದರ ಹಿಂದೆ ಈ ಆತಂಕವಿದೆ. ಈವತ್ತಿನ ತುಮುಲಗಳನ್ನು ಹೇಳಲು ಆ ಅನುಭವದಲ್ಲಿ ಪಾಲ್ಗೊಳ್ಳದಿರುವ ಕನ್ನಡಕ್ಕೆ ಸಾಧ್ಯವಾಗದೇಹೋಗಬಹುದು. ಭಾಷೆ, ಅದು ಸಾಹಿತ್ಯದಲ್ಲಾಗಲೀ ಇತರ ಕ್ಷೇತ್ರದಲ್ಲಾಗಲೀ ಕೇವಲ ಭಾವಜಗತ್ತಿಗೆ ಸಂಬಂಧಿಸಿದ ಸಂಗತಿಯಲ್ಲ. ಅದು ಇಡಿಯ ಜೀವನವನ್ನು ಆವರಿಸಿಕೊಂಡಿರುವಂಥದ್ದು. ಹೀಗೆಯೇ ಜೀವನದ, ದೈನಿಕದ ವ್ಯಾಪ್ತಿಯಲ್ಲಿ ಒಂದು ಭಾಷೆಯ ಬಳಕೆ ಕಡಿಮೆಯಾಗುತ್ತ ಹೋದಹಾಗೆ, ಅದು ದುರ್ಬಲವಾಗುತ್ತ ಹೋಗುತ್ತದೆ. ಕನ್ನಡ ವ್ಯವಹಾರದ ಭಾಷೆಯಾಗಬೇಕು, ಶಿಕ್ಷಣ ಮಾಧ್ಯಮವಾಗಬೇಕು ಎಂಬುದರ ಹಿಂದೆ ಈ ಕಳಕಳಿಗಳು ಮತ್ತು ಆತಂಕಗಳು ಇವೆ.

ಖ್ಯಾತ ಸಾಹಿತ್ಯ ಮತ್ತು ಸಮಾಜ ಚಿಂತಕ ವಾಲ್ಟರ್ ಬೆಂಜಮಿನ್, ಭಾಷೆಯ ಬಗ್ಗೆ ಹೇಳುತ್ತ, ಒಂದು ಭಾಷೆ ತನ್ನನ್ನೇ ತಾನು ಸಂವಹನ (ಕಮ್ಯುನಿಕೇಟ್) ಮಾಡಿಕೊಳ್ಳುತ್ತದೆ ಅನ್ನುತ್ತಾನೆ.



ಅಂದರೆ ಒಂದು ಭಾಷೆಯಲ್ಲಿ ಒಂದು ದೀಪವನ್ನು ವರ್ಣಿಸಿದರೆ ಅದು, ದೀಪದ ಬಗ್ಗೆ ಆ ಭಾಷೆಗಿರುವ ಗ್ರಹಿಕೆಯನ್ನು, ಸಂವಹನದಲ್ಲಿ ಮತ್ತು ಅಭಿವ್ಯಕ್ತಿಯಲ್ಲಿ ಆ ದೀಪಕ್ಕಿರುವ ಸ್ಥಾನವನ್ನು ಹೇಳುತ್ತದೆಯೇ ಹೊರತು ಬರೀ ದೀಪವನ್ನಲ್ಲ ಎಂದು ಅವನ ವಾದ. ಒಂದು ಭಾಷೆಯ ಮಾಂತ್ರಿಕ ಶಕ್ತಿ ಅದರ ಗಾಢತೆಯನ್ನು ಸೂಚಿಸುತ್ತದೆ. ಒಂದು ಭಾಷೆಯ ಮುನ್ನೆಲೆಗಳನ್ನು ವ್ಯಾಖ್ಯಿಸುವುದು ಅದರ ಭಾಷಾ ಸ್ವರೂಪವೇ ಹೊರತು ಶಾಬ್ದಿಕ ಅರ್ಥಗಳಲ್ಲ ಎಂಬುದು ಅವನ ಅಭಿಪ್ರಾಯ. ನಮ್ಮ ಕಾವ್ಯದ ಕೆಲವು ಸಾಲುಗಳನ್ನು ಉದಾಹರಣೆಗೆ ಗಮನಿಸಿದರೆ ಇದರ ಅರ್ಥ ಸ್ಪಷ್ಟವಾಗುತ್ತದೆ. ಇದು ಬರಿ ಬೆಳಗಲ್ಲೋ ಅಣ್ಣಾ ಅನ್ನುವುದಾಗಲೀ, ಹುಡಿಗೇರ ಹುಸಿ ಸಿಟ್ಟಿನ್ಹಾಂಗ ಒಣಿಯ ತಿರುವು ಅನ್ನುವುದಾಗಲೀ ಭಾಷಾಂತರಿಸಲು ಅಸಾಧ್ಯವಾದ ಕಾವ್ಯದ ಸಾಲುಗಳು. ನಿಮಗೆ ಗೊತ್ತಿರುವ ಬೇರೆ ಯಾವ ಭಾಷೆಯಲ್ಲಾಗಲೀ ಇದನ್ನು ಹೇಳಲು ಪ್ರಯತ್ನಿಸಿದರೂ ಅದು ಶಾಬ್ದಿಕ ತರ್ಜುಮೆಯಾಗುತ್ತದೆಯೇ ಹೊರತು ಮೂಲಭಾಷೆಯಲ್ಲಿನ ಕಾವ್ಯಸತ್ವವನ್ನು ಪಡೆದಿರುವುದಿಲ್ಲ. ಶೇಕ್ಸ್‌ಪಿಯರಿನ ಕಿಂಗ್ ಲಿಯರ್ ರಾಣಿಯ ಸಾವನ್ನು ಕಂಡು ಅವಾಕ್ಕಾಗಿ, 'ನೆವರ್ ನೆವರ್ ನೆವರ್' ಎಂದು ಹೇಳುವುದನ್ನು ಕನ್ನಡದಲ್ಲಿ ಭಾಷಾಂತರಿಸಿ ಅದರ ಸತ್ವವನ್ನು ಹೇಳಲು ಸಾಧ್ಯವೇ? ಜಗತ್ತಿನ ನಾನಾ ಭಾಷೆಗಳಲ್ಲಿಯ ಅತ್ಯುತ್ತಮ ಕಾವ್ಯದ ಸಾಲುಗಳು ಭಾಷಾಂತರದಲ್ಲಿ ಅತಿ ಸಾಧಾರಣ ಸಾಲುಗಳಾಗಿ ಹೋಗುತ್ತವೆ.

ತನ್ನ ಬಹುಪಾಲು ಕೃತಿಗಳ ಇಂಗ್ಲಿಷ್ ಭಾಷಾಂತರದಲ್ಲಿ ಸಕ್ರಿಯವಾಗಿ ಪಾಲ್ಗೊಂಡ ಶ್ರೇಷ್ಠ ಯಿದ್ದಿಶ್ ಲೇಖಕ ಸಿಂಗರ್, ಅದನ್ನು ತನ್ನ ಬರವಣಿಗೆಯ ಅಂಗವನ್ನಾಗಿ ಮಾಡಿಕೊಂಡಿದ್ದ. ಇಂಗ್ಲಿಷ್ ನನ್ನ ಎರಡನೆಯ ಭಾಷೆಯಂತೆ ಅನಿಸುತ್ತದೆ ಎಂದವನು ಹೇಳಿದ್ದಾನೆ. ಅವನ ಪ್ರಕಾರ 'ಭಾಷಾಂತರವು ಸಾಹಿತ್ಯದ ದೊಡ್ಡ ಸವಾಲು ಮತ್ತು ಸಮಸ್ಯೆ. ಒಂದು ಕೃತಿ ಭಾಷಾಂತರಗೊಳ್ಳಬೇಕಾದ ಆ 'ಇನ್ನೊಂದು' ಭಾಷೆ, ಅಸ್ಪಷ್ಟತೆಯನ್ನಾಗಲೀ, ಮೂಲ ಭಾಷೆಯ ಹಗುರ ವಿನೋದವನ್ನಾಗಲೀ, ಅಲಂಕಾರಗಳನ್ನಾಗಲೀ ಸಹಿಸುವುದಿಲ್ಲ. ಇದು ಲೇಖಕನಿಗೆ ಘಟನೆಗಳನ್ನು ನಿರ್ವಹಿಸಲು ಕಲಿಸುತ್ತದೆ ಮತ್ತು ಘಟನೆಗಳನ್ನು ಅವುಗಳ ಪಾಡಿಗೆ ಬಿಟ್ಟು ಅವು ತಮ್ಮ ಅರ್ಥಗಳನ್ನು ತಾವೇ ಬಿಟ್ಟುಕೊಳ್ಳುವಂತೆ ಮಾಡಲು ಕಲಿಸುತ್ತದೆ. ಆ ಇನ್ನೊಂದು ಭಾಷೆ ಕನ್ನಡಿಯಂತೆ - ನಮ್ಮನ್ನೇ ನಾವು ನೋಡಿಕೊಳ್ಳುವ ಅವಕಾಶವನ್ನೂ ಮತ್ತು ಸಾಧ್ಯವಾದಲ್ಲಿ ಸರಿಪಡಿಸಿಕೊಳ್ಳಲು ಅವಕಾಶವನ್ನೂ ಒದಗಿಸುತ್ತದೆ.'

ಭಾಷಾಂತರದ ಬಗ್ಗೆ ನೂರಾರು ವಾದವಿವಾದಗಳು, ಅಭಿಪ್ರಾಯಗಳು ಜಗತ್ತಿನಾದ್ಯಂತ ಇವೆ. ಕೆಲವೊಮ್ಮೆ ಬರಹಗಾರನಿಗೆ ಇದೊಂದು ಸಾಣೆಕಲ್ಲು ಇದ್ದ ಹಾಗೆ. ಕೆಲವೊಮ್ಮೆ ತನ್ನ ಶಕ್ತಿಯನ್ನು ಪರೀಕ್ಷೆಗೊಳಪಡಿಸುವ ನಿಕಷವಿದ್ದ ಹಾಗೆ. ಕನ್ನಡದ ಆಧುನಿಕ ಬರಹಗಾರರೆಲ್ಲ ಇದು ಒಡ್ಡುವ ಆಹ್ವಾನವನ್ನು ಒಂದಲ್ಲ ಒಂದು ರೀತಿಯಿಂದ ಸ್ವೀಕರಿಸಿದ್ದಾರೆ. ತಮಗೆ ಪ್ರಿಯವಾದ ಕೃತಿಗಳನ್ನು ಕನ್ನಡಕ್ಕೆ ಭಾಷಾಂತರಿಸಲು ಪ್ರಯತ್ನಿಸಿದ್ದಾರೆ. ■

ವಿಶ್ವ ಭಾರತಿ - 18



## ಮೊಪಾಸಾ

# ದಿಡ್ಡಿ ಬಾಗಿಲು

ಕನ್ನಡಕ್ಕೆ: ಪಿ.ವಿ. ರಾಮಚಂದ್ರ

ಭಾವನಾ ಡಿಸೆಂಬರ್, 2000

ನಾನು ಲ ಸಲಿ ಗ್ರಾಮದ ಸಮೀಪ ಇರುವ ಕೃತಕ ಪುಟ್ಟ ಬಂದರು ಒಬೆರ್ನೋವಿನ ಬಳಿ ಕುಳಿತು, ಅಂತಿಬೆಸ್‌ನಲ್ಲಿ ಸೂರ್ಯ ಮುಳುಗುವುದನ್ನು ನೋಡುತ್ತಿದ್ದೆ. ನಾನು ಅಂತಹ ಸುಂದರ ದೃಶ್ಯವನ್ನು ಹಿಂದೆಂದೂ ನೋಡಿರಲಿಲ್ಲ. ವೌಬಾ ಎಂಬವನು ಗಾರೆಯಿಂದ ಕಟ್ಟಿಸಿದ ಭದ್ರವಾದ ಸಣ್ಣ ಕೋಟೆ, ನೈಸ್ ಕೊಲ್ಲಿಯ ನಡುವಿನಲ್ಲಿದೆ. ಕೋಟೆಯೊಳಗೆ ಒಂದು ಸಣ್ಣ ಊರಿದೆ. ದೂರದಿಂದ ಸಾಗಿ ಬಂದ ಸಮುದ್ರದ ಅಲೆಗಳು ಅದರ ತಳಕ್ಕೆ ಅಪ್ಪಳಿಸಿ, ನೊರೆಗಳ ಹಾರವನ್ನು ತೊಡಿಸುತ್ತಿದ್ದವು. ದಿಗಂತದ ಆಲ್ಪ್ಸ್ ಪರ್ವತದ ಬಿಳಿಯ ಹಿನ್ನೆಲೆಯಲ್ಲಿ ಕೋಟೆಯಲ್ಲಿನ ಎರಡು ಗೋಪುರಗಳು ಆಕಾಶದತ್ತ ಬೊಟ್ಟು ಮಾಡುತ್ತಿದ್ದ ಎರಡು ಕೊಂಬುಗಳಂತೆ ಎತ್ತಿ ಕಾಣುತ್ತಿದ್ದವು. ಕೋಟೆಯ ಗೋಡೆಯ ಆಚೆ, ಒಂದರ ಮೇಲೊಂದರಂತೆ ಇದ್ದ ಮನೆಗಳು, ಗೋಪುರದ ಎತ್ತರಕ್ಕಿದ್ದವು. ದೂರದ ಹಿಮ ಪರ್ವತದ ಬಿಳಿ ಗೋಡೆಯು ದಿಗಂತವನ್ನು ಮುಚ್ಚಿತ್ತು. ಕೋಟೆಯ ಗೋಡೆಯ ಕೆಳಗಿನ ಬಿಳಿ ನೊರೆ ಮತ್ತು ಆಗಸದಂಚಿನ ಬಿಳಿ ಹಿಮದ ನಡುವೆ ಒಂದು ಸಣ್ಣ ನಗರ, ಮುಳುಗುತ್ತಿದ್ದ ಸೂರ್ಯನ ಹೊಂಬೆಳಕಿನಲ್ಲಿ ಮನೋಹರವಾಗಿ ಕಂಡು ಬರುತ್ತಿತ್ತು. ಕೆಂಪು ಮಾಡಿನ ಬಿಳಿಯ ಮುಂಭಾಗದ ಮನೆಗಳು ನೋಡಲು ಸುಂದರವಾಗಿದ್ದವು.

ಆಲ್ಪ್ಸ್ ಪರ್ವತದ ಬಳಿಯ ಆಕಾಶ ತೆಳು ನೀಲಿಯಾಗಿದ್ದು, ಬಿಳಿ ಬಣ್ಣದಂತಾಗಿ, ಪರ್ವತವು ತನ್ನ ಬಿಳುಪಿನ ಒಂದು ಅಂಶವನ್ನು ಆಕಾಶಕ್ಕೂ ಕೊಟ್ಟಿರುವಂತೆ ಕಾಣಿಸುತ್ತಿತ್ತು. ಮಂಜು ಕವಿದ ಶಿಖರದ ಮೇಲೆ ಬಿಳಿಯ ಮೋಡಗಳಿದ್ದವು. ಕೊಲ್ಲಿಯ ಇನ್ನೊಂದು ಭಾಗದ ದಡದಲ್ಲಿ, ನೈಸ್ ನಗರವು, ಸಮುದ್ರ ಮತ್ತು ಬೆಟ್ಟಗಳ ನಡುವೆ ಒಂದು ಬಿಳಿ ಲಾಡಿಯಂತೆ ಹರಡಿತ್ತು. ಗಾಳಿಯ ಹೊಡೆತಕ್ಕೆ ಸಿಲುಕಿದ ತ್ರಿಕೋಣಾಕಾರದ ಎರಡು ದೊಡ್ಡ ಹಾಯಿಗಳು ಅಲೆಗಳ ಮುಂದೆ ಓಡಿ ಬರುವಂತೆ ಕಂಡಿತು. ನಾನು ಈ ಸುಂದರ ದೃಶ್ಯವನ್ನು ನೋಡಿ ಆನಂದಿಸಿದೆ. ಅದಕ್ಕೆ ಮಾರುಹೋದೆ. ಇಂತಹ ದೃಶ್ಯಗಳು ವಿರಳ. ಇವು ಎಂದೆಂದಿಗೂ ನೆನಪಿನಲ್ಲಿ ಉಳಿಯುವುವು. ನಮ್ಮ ಜೀವನದ ಕೆಲವು ಮಧುರ ಕ್ಷಣಗಳು ಅಚ್ಚಳಿಯದೆ ಮನದಲ್ಲಿ ಉಳಿಯುವಂತೆ ಈ ನೋಟವೂ ಮನದಲ್ಲಿ ಸದಾ ಉಳಿಯತಕ್ಕದ್ದು. ವಿವಿಧ ಕಾರಣಗಳಿಂದಾಗಿ ನಾವು ಯೋಚಿಸುತ್ತೇವೆ, ಸಂತೋಷ ಪಡುತ್ತೇವೆ, ಕಷ್ಟ ಅನುಭವಿಸುತ್ತೇವೆ, ಆರ್ತರಾಗುತ್ತೇವೆ, ಆದರೆ ನೋಟದಿಂದ ಆನಂದಪಡುತ್ತೇವೆ! ಮನವನ್ನು ಮುಟ್ಟುವ ಕರ್ಣ ಮಧುರ ಸಂಗೀತದಿಂದ ಆನಂದವನ್ನು ಪಡೆವ ಸಂಗೀತ ಪ್ರೇಮಿಯಂತೆ ದೃಶ್ಯಗಳಿಂದ ಭಾವೋದ್ರಿಕ್ತನಾಗುವ ದರ್ಶಕನು ಸಹ ಪರಮಾನಂದವನ್ನು ಪಡೆಯುವನು.

ನನ್ನ ಜೊತೆಗಾರ ಮಾರ್ತಿನಿಗೆ ಹೇಳಿದೆ: ''ಇಲ್ಲಿನ ಅಪರೂಪದ ದೃಶ್ಯ ಅತ್ಯಂತ ರಮಣೀಯ, ಇದನ್ನು ನೋಡುವ ಭಾಗ್ಯ ನನಗೊದಗಿದ್ದು ನನ್ನ ಅದೃಷ್ಟ. ನಾನು ಪ್ರಪಂಚದ ಬೇರೆ ಬೇರೆ ದೇಶಗಳಲ್ಲಿನ ಸುಂದರ ದೃಶ್ಯಗಳನ್ನು ನೋಡಿದ್ದೇನೆ. ಮೌಂಟ್ ಸೈಂಟ್ ಮಿಶೆಲ್, ಸೂರ್ಯೋದಯದ ಸಮಯದಲ್ಲಿ ಅತಿ ಮನೋಹರವಾಗಿ

ಕಂಡುಬರುವುದು, ಐವತ್ತು ಕಿಲೋಮೀಟರ್ ಉದ್ದದ ಸಹಾರಾ ಕೆರೆ, ಚಂದ್ರನ ಬೆಳಕಿನಲ್ಲಿ ಸೂರ್ಯನ ಬೆಳಕಿನಲ್ಲಿ ಹೊಳೆಯುವಂತೆಯೇ ಹೊಳೆಯುವುದು, ಮೋಡಗಳತ್ತ ಹಾಲಿನಂತೆ ಬೆಳುಪಾದ ಆವಿಯನ್ನು ಕಳುಹಿಸುವುದು. ನಾನು ಲಿಪಾರಿ ದ್ವೀಪದ ದೊಡ್ಡ ಅಗ್ನಿಪರ್ವತವನ್ನೂ ನೋಡಿರುವೆ, ದೊಡ್ಡ ಹೂಜಿನಾಕಾರದ ಅದರ ಬಾಯಿಯಿಂದ ಗಂಧಕದ ಹಳದಿ ಹೊಗೆ ಸದಾ ಹೊರಬರುತ್ತಿರುವುದು. ಆ ಹೊಗೆ ಸಮುದ್ರದ ಮೇಲೆಲ್ಲ ಹರಡಿರುವುದು. ಆದರೆ ನಾನು, ಸೂರ್ಯಾಸ್ತ ಸಮಯದಲ್ಲಿ, ಆಲ್ಪ್ಸ್ ಪರ್ವತದ ಮುಂಭಾಗದಲ್ಲಿರುವ ಅಂತಿಬೆಸ್‌ನ ಸೌಂದರ್ಯ ದಂತಹುದನ್ನು ಇದುವರೆಗೂ ನೋಡಿಲ್ಲ. ಏಕೆಂದು ಗೊತ್ತಾಗುತ್ತಿಲ್ಲ. ನನಗೆ ಪುರಾಣದ ಕಥೆಗಳು, ಮಹಾ ಕವಿ ಹೋಮರನ ಪದ್ಯದ ಸಾಲುಗಳು ನೆನಪಾಗುತ್ತಿವೆ. ಅಂತಿಬೆಸ್ ಪೂರ್ವ ದೇಶದ ಪ್ರಾಚೀನ ನಗರ, ಹೋಮರನ ಮಹಾಕಾವ್ಯ 'ಒಡಿಸ್ಸಿ'ಯಲ್ಲಿ ವರ್ಣಿತವಾಗಿರುವ ನಗರ, ಅದು ಪಶ್ಚಿಮದ ಟ್ರಾಯ್ ನಗರ- ನಿಜವಾದ ಟ್ರಾಯ್ ಸಮುದ್ರದಿಂದ ದೂರ ವಿದ್ದರೂ ನನಗೆ ಅದೇ ಇದು ಎನಿಸುತ್ತದೆ.''

ಮಾರ್ತಿನಿ ತನ್ನ ಜೇಬಿನಿಂದ ಒಂದು 'ಯಾತ್ರಿಗಳ ಮಾರ್ಗದರ್ಶಿಕೆ'ಯನ್ನು ತೆಗೆದು, ಗೆಳೆಯನಿಗೆ ಓದಿ ಹೇಳಿದ:

''ಈ ನಗರವು ಮರ್ಸೈಲ್ಸ್‌ನಲ್ಲಿ ವಾಸವಾಗಿದ್ದ ಫೀನೀಷಿಯನ್ನರು ಸುಮಾರು ಕ್ರಿಸ್ತ ಪೂರ್ವ 340ರಲ್ಲಿ ಸ್ಥಾಪಿಸಿದ ವಸಾಹತು. ಅವರು ಈ ನಗರಕ್ಕೆ, 'ಅಂಟಿಪೋಲಿಸ್' ಎಂಬ ಗ್ರೀಕ್ ಹೆಸರಿಟ್ಟರು, ಇದರ ಅರ್ಥ, 'ಇನ್ನೊಂದು ನಗರದ ಮುಂದುಗಡೆಯ ನಗರ.' ಇದಕ್ಕೆ ಕಾರಣ ಈ ನಗರವು ಮರ್ಸೈಲ್ಸ್‌ನ ಮತ್ತೊಂದು ವಸಾಹತಾದ ನೈಸ್‌ನ ಎದುರಿಗಿದೆ. ಗಾಲ್ (ಫ್ರಾನ್ಸಿನ ಪ್ರಾಚೀನ ಹೆಸರು) ನ ಮೇಲೆ ವಿಜಯ ಗಳಿಸಿದ ರೋಮನ್ನರು ಅಂತಿಬೆಸ್ ಅನ್ನು ಒಂದು ಪುರಪಾಲಿಕಾ ನಗರವನ್ನಾಗಿ ಮಾಡಿ, ಅದರ ನಿವಾಸಿಗಳಿಗೆ ರೋಮನ್ ನಗರವಾಸಿಗಳ ಸೌಲಭ್ಯಗಳನ್ನು ಒದಗಿಸಿದರು.

''ಮಾರ್ಷಿಯಲ್ಲಿನ ಒಂದು ಚಾಟು ಪದ್ಯದಿಂದ ತಿಳಿದು ಬರುವುದೇನೆಂದರೆ-'' ನಾನು ತಡೆದು ಹೇಳಿದೆ:

''ಅದೇನೆಂಬುದರಲ್ಲಿ ನನಗೆ ಆಸಕ್ತಿ ಇಲ್ಲ! ಒಡಿಸ್ಸಿ ಮಹಾಕಾವ್ಯದಲ್ಲಿನ ಒಂದು ನಗರ ನನ್ನ ಕಣ್ಣ ಮುಂದೆ ಇದೆ. ಏಷ್ಯಾದ ತೀರವಾಗಿರ ಬಹುದು, ಯೂರೋಪಿನ ತೀರವೇ ಆಗಿರ ಬಹುದು-ಅವೆಲ್ಲವೂ ಇರುವುದು ಒಂದೇ ರೀತಿ. ಈ ದಡದ ನಗರವನ್ನು ನೋಡಿದಾಗ ಮನದಲ್ಲಿ ಮೂಡುವ ಹಳೆಯ ಸಾಹಸಗಾಥೆಗಳ ಚಿತ್ರಗಳು, ಮೆಡಿಟರೇನಿಯನ್ ಸಮುದ್ರದ ಆಚೆ ದಡದ ನಗರಗಳನ್ನು ನೋಡಿದಾಗ ಬರುವುದಿಲ್ಲ.''

ಸಮೀಪದಲ್ಲಿ ಹೆಜ್ಜೆಯ ಸಪ್ಪಳವನ್ನು ಕೇಳಿ ನಾನು ತಲೆ ತಿರುಗಿಸಿ ನೋಡಿದೆ. ಕೃಷ್ಣ ವರ್ಣದ ಎತ್ತರದ ಸ್ತ್ರೀಯೊಬ್ಬಳು ಸಮುದ್ರದ ಪಕ್ಕದ ದಾರಿ ಯಲ್ಲಿ, ಭೂಶಿರದತ್ತ ನಡೆದು ಹೋಗುತ್ತಿದ್ದಳು.

''ಅವಳು ಮದಾಂ ಪರೀಸೆ, ನಿನಗೆ ಗೊತ್ತಿರಬೇಕಲ್ಲ!'' ಮಾರ್ತಿನಿ ನನ್ನ ಕಿವಿಯ ಬಳಿ ಪಿಸುಗುಟ್ಟಿ, ವಾಕ್ಯದ ಉತ್ತರಾರ್ಧವನ್ನು ಒತ್ತಿ ಹೇಳಿದ. ಅವಳು ಯಾರೆಂಬುದು ನನಗೆ ಗೊತ್ತಿರಲಿಲ್ಲ. ಆದರೆ ಈ ಹೆಸರು ಕೇಳಿ, ಕಲ್ಪನಾ ಲೋಕದಲ್ಲಿದ್ದ ನನ್ನ ಮನದಲ್ಲಿ ಟ್ರಾಯ್ ನಗರದ ಕುರಿ ಕಾಯುವವನ ಚಿತ್ರ ಮೂಡಿತು. ಮದಾಂ ಪರೀಸೆ ಯಾರೆಂದು ನಾನು ಪ್ರಶ್ನಿಸಿದೆ. ಅವಳ ಕಥೆ ನನಗೆ ಗೊತ್ತಿಲ್ಲವೆಂಬುದನ್ನು ತಿಳಿದು ಮಾರ್ತಿನಿಗೆ ಬಹಳ ಆಶ್ಚರ್ಯವಾಯಿತು. ಅವನು, ನಿಜವಾಗಿಯೂ ಗೊತ್ತಿಲ್ಲವೇ ಎಂದು ಕೇಳಿದಾಗ, ನಾನು ಅವಳ ಬಗ್ಗೆ ಏನೂ ಗೊತ್ತಿಲ ವೆಂದೆ. ನಮ್ಮತ್ತ ಗಮನ ಕೊಡದೆ, ಯಾವುದೋ ಕಲ್ಪನಾಲೋಕದಲ್ಲಿ ವಿಹರಿಸುತ್ತ, ನಿಧಾನವಾಗಿ ಹೆಜ್ಜೆ ಹಾಕಿಕೊಂಡು, ಪುರಾಣ ಕಾಲದ ಕಾಮಿನಿ

ಯಂತೆ ಅಲ್ಲಿ ಹೋಗುತ್ತಿದ್ದ ಹೆಂಗಸನ್ನು ನೋಡಿದೆ. ಸುಮಾರು ಮೂವತ್ತೈದು ವರ್ಷ ವಯಸ್ಸಿನ ಅವಳು ಸುಂದರವಾಗಿದ್ದಳು. ತುಂಬ ಸುಂದರವಾಗಿದ್ದಳು; ಆದರೆ ಸ್ವಲ್ಪ ದಪ್ಪವಾಗಿದ್ದಳು. ಅವಳು ಕಣ್ಮರೆಯಾದ ಮೇಲೆ ಮಾರ್ತಿನಿ ಅವಳ ಕಥೆಯನ್ನು ಹೇಳಿದ.

"ಮದಾಂ ಪರೀಸೆಯ ಮದುವೆ 1870ರ ಯುದ್ಧಕ್ಕೆ ಹಿಂದಿನ ವರ್ಷ, ಸರಕಾರಿ ಅಧಿಕಾರಿ ಪರೀಸೆಯೊಡನೆ ನಡೆಯಿತು. ಮದುವೆಯಾದ ಹೊಸದರಲ್ಲಿ ಅವಳು ತೆಳ್ಳಗೆ, ಬೆಳ್ಳಗೆ, ಸದಾ ಹಸನ್ಮುಖಿಯಾಗಿದ್ದಳು; ನೀನೀಗ ನೋಡಿದಂತೆ ದಪ್ಪ, ದುಃಖಿತ ನಾರಿಯಾಗಿರಲಿಲ್ಲ. ಅವಳು ಮನಸ್ಸಿಲ್ಲದೆ ಪರೀಸೆಯನ್ನು ಗಂಡನನ್ನಾಗಿ ಸ್ವೀಕರಿಸಿದ್ದಳು. ಅವನೊಬ್ಬ ಸಣ್ಣ ಅಧಿಕಾರಿ, ಕುಳ್ಳ ಮನುಷ್ಯ, ತಾನೇ ದೊಡ್ಡ ಅಧಿಕಾರಿಯೆಂದು ಭಾವಿಸುವ ಗುಂಪಿಗೆ ಸೇರಿದವನು.

ಯುದ್ಧದ ಅನಂತರ ಅಂತಿಬೆಸ್‌ನಲ್ಲಿ ಶಾ ದ ಕರ್ಮೇಲಿ ಎಂಬ ಕಿರಿಯ ವಯಸ್ಸಿನವನು ಆಕ್ರಮಣಕಾರರ ಸೈನ್ಯಾಧಿಕಾರಿಯಾಗಿ ಬಂದ. ಯುದ್ಧದಲ್ಲಿ ಅಪ್ರತಿಮ ಸಾಹಸವನ್ನು ತೋರಿಸಿ ದುದರ ಫಲವಾಗಿ ವೀರ ಪದಕವನ್ನು ಪಡೆದಿದ್ದ. ಇತ್ತೀಚೆಗಷ್ಟೆ ನಾಲ್ಕು ಪಟ್ಟಿಗಳ (ಮೇಜರ್) ಪದವಿಗೆ ಏರಿದ್ದ. ಅವನಿಗೆ ಕೋಟೆಯ ಒಳಗೆ ಕುಳಿತು ಬಹಳ ಬೇಸರವಾಗತೊಡಗಿತು. ಬೇಸರ ಕಳೆಯಲು ಆಗಾಗ ಸಮೀಪದ ಉಪವನ ಅಥವಾ ಕಾಡಿನಲ್ಲಿ ವಾಯುವಿಹಾರಕ್ಕೆ ಹೋಗು ತ್ತಿದ್ದ. ಸಂಜೆಯ ಸಮಯದ ಶುದ್ಧವಾದ ಶೀತಲ ಗಾಳಿಯು ಸೈನಿಕನ ಮನಕ್ಕೆ ಮುದ ಕೊಡುತ್ತಿತ್ತು.

ಮದಾಂ ಪರೀಸೆ ಸಹ, ಬೇಸಿಗೆಯ ಸಂಜೆಯಲ್ಲಿ, ಶುದ್ಧವಾದ ವಾಯುಸೇವನೆಗೆಂದು, ಸಮೀಪದ ಕಾನನಕ್ಕೆ ಬಂದು, ಒಂದು ಮರದಡಿ ಯಲ್ಲಿ ಕುಳಿತುಕೊಳ್ಳುತ್ತಿದ್ದಳು. ಅಲ್ಲಿ ಅವನು ಅವಳನ್ನು ನೋಡಿದ. ಅವರು ಹೇಗೆ ಪ್ರೇಮಿಸ ತೊಡಗಿದರು ಯಾರಾದರೂ ಹೇಳಬಲ್ಲರೇ? ಅವರು ಭೇಟಿಯಾದರು, ಒಬ್ಬರನ್ನೊಬ್ಬರು ನೋಡಿದರು, ಭೇಟಿಯಾಗದ ದಿವಸ ಒಬ್ಬರ



ಫ್ರೆಂಚ್ ಸಾಹಿತಿ ಗ್ಯಾದ ಮೊಪಾಸಾ (1850-93) ನಿಸ್ಸಂಶಯವಾಗಿ ಪ್ರಪಂಚದ ಅತ್ಯುತ್ತಮ ಕಥೆಗಾರರಲ್ಲೊಬ್ಬ. ಮೊದಲು ಸೇನೆಯಲ್ಲಿ, ನಂತರ ಗುಮಾಸ್ತನಾಗಿ ಕೆಲಸ ಮಾಡಿದ ಮೊಪಾಸಾ, ಮತ್ತೊಬ್ಬ ಅಪ್ರತಿಮ ಬರಹಗಾರ ಜೋಲಾನ ಭೇಟಿಯಾದ ನಂತರ ತನ್ನ ದಿಕ್ಕು ಬದಲಿಸಿಬಿಟ್ಟ. 1882ರಲ್ಲಿ ಕೆಲಸ ಬಿಟ್ಟ ಆತ ಒಂದೇ ಸಮನೆ ಬರೆದ. ಆ ನಿರಂತರ ಕೆಲಸದಿಂದಾದ ಮಾನಸಿಕ ಸುಸ್ತು ಆತನನ್ನು ಕಂಗೆಡಿಸಿತು. ತನ್ನ ಜೀವನದ ಕೊನೆಯ 18 ತಿಂಗಳುಗಳನ್ನು ಪ್ಯಾರಿಸ್‌ನ ಮಾನಸಿಕ ಆಸ್ಪತ್ರೆಯಲ್ಲಿ ಕಳೆದ ಆತನದ್ದು ನೋವಿನ ಸಾವು. ಮೊಪಾಸಾನ ಪ್ರಸಿದ್ಧ ಕಥೆಗಳು 'ದ ನೆಕ್‌ಲೇಸ್', 'ಮೇಡಂ ಫಿಫಿ', 'ಎಕವರ್ಡ್', 'ದಿ ಹೇರ್‌ಪಿನ್' ಇತ್ಯಾದಿ. ಫ್ರಾನ್ಸ್‌ನ ಹವೆಯಲ್ಲೇ ಸೇರಿಕೊಂಡಂತಿರುವ ಲೋಲುಪ್ತಿ, ಅತಿ ನಾಜೂಕು ನಡೆ-ನುಡಿಯನ್ನು ಗೇಲಿ ಮಾಡುವಂತಿರುವ ಮೊಪಾಸಾನ ಕತೆಗಳಲ್ಲಿ ಕಡು ಬಡತನ, ಲೋಭ, ನೋವು-ವಿಷಾದಗಳ ಜೊತೆ ಅದ್ಭುತ ವ್ಯಂಗ್ಯ ಸಹ ಇದೆ. ಈ ಅಂಶ ಆತನ ಕತೆಗಳನ್ನು ನಿತ್ಯನೂತನವಾಗಿಸಿದೆ.

ಅನ್ಯ ಭಾಷೆಯ ಸರಳ ಕತೆಗಳನ್ನೇ ಆಯ್ದು, ಒಂದು ವ್ರತದಂತೆ ಇಂಗ್ಲಿಷ್‌ನಿಂದ ಕನ್ನಡಕ್ಕೆ ಅನುವಾದಿಸುತ್ತಾ ಬಂದಿರುವ ಪಿ.ವಿ. ರಾಮಚಂದ್ರ, ಮೊಪಾಸಾನ ಪುಣ್ಯ ಶತಾಬ್ದಿಯ ಸ್ಮರಣಾರ್ಥ ಆತನ ಬಹುತೇಕ ಕತೆಗಳನ್ನು ಕನ್ನಡಕ್ಕೆ ಅನುವಾದಿಸುವ ಸಾಹಿತ್ಯ-ಕೈಂಕರ್ಯ ಕೈಗೊಂಡಿದ್ದಾರೆ.

ನ್ನೊಬ್ಬರು ನೆನೆಸಿಕೊಂಡರು. ಕಂದು ಕಣ್ಣಿನ, ಕಪ್ಪು ಕೂದಲ, ನಗುಮುಖದ, ನಗುವಾಗ ಕಾಣುತ್ತಿದ್ದ ಬಹಳ ಬಿಳುಪಾಗಿದ್ದ ದಂತ ಪಂಕ್ತಿಗಳ ಸುಂದರ ಹುಡುಗಿಯ ಚಿತ್ರವು ಸದಾ ಆ ಅಧಿಕಾರಿಯ ಕಣ್ಣಿನ ಮುಂದೆ ತೇಲುತ್ತಿರುತ್ತಿತ್ತು. ಬಾಯಲ್ಲಿ ಸಿಗಾರ್ ಸಿಕ್ಕಿಸಿಕೊಂಡು, ಅದನ್ನು ಹಚ್ಚದೆ, ಸೇದದೆ, ಅವನು ಹಗಲುಕನಸು ಕಾಣುತ್ತಿದ್ದ ಕೆಂಪು ಇಜಾರು, ಇಜಾರಿನಲ್ಲಿ ಚಿನ್ನದ ದಾರದ ಪಟ್ಟಿ, ಮೈಯಳತೆಗೆ ಬಿಗಿಯಾಗಿ ನಿಲ್ಲುವ ಕೋಟು, ಸುಂದರ ಹುರಿ ಮೀಸೆಯ ಕಮಾಂಡರನ ಚಿತ್ರ ಮದಾಂ ಪರೀಸೆಯ ಮನದಲ್ಲಿ ನೆಲೆಸಿರಲೇ ಬೇಕಾಗಿತ್ತು, ಏಕೆಂದರೆ, ಅವಳ ಗಂಡ, ಕ್ಷೌರ ಮಾಡಿಕೊಳ್ಳದೆ ಒರಟು ಗಡ್ಡ ಬೆಳೆಸಿಕೊಂಡಿದ್ದ, ಹೇಗೆ ಹೇಗೋ ವಸ್ತ್ರ ಧರಿಸುತ್ತಿದ್ದ, ಕುಳ್ಳ ಕಾಲುಗಳ, ಮುಂದೆ ಬಂದ ಹೊಟ್ಟೆ, ರಾತ್ರಿಯ ಊಟದ ವೇಳೆಗೆ ಮಾತ್ರ ಮನೆಗೆ ಬರುವವನು.

ಅನೇಕ ಸಲ ಭೇಟಿಯಾದ ಮೇಲೆ, ಒಬ್ಬರನ್ನೊಬ್ಬರು ನೋಡಿದಾಗ ಮಂದಹಾಸ ಬೀರತೊಡಗಿದರು. ಪ್ರಾಯಶಃ, ಈ ರೀತಿಯ ವರ್ತನೆಯ ಅನಂತರ, ಪರಸ್ಪರರನ್ನು ಬಲ್ಲೆವೆಂಬ ಭಾವನೆ ಅವರಿಬ್ಬರಲ್ಲಿ ಮೂಡಿದ್ದಿರಬೇಕು. ಅವನು ಅವಳಿಗೆ ತಲೆ ಬಾಗಿ ವಂದಿಸತೊಡಗಿ ದಾಗ ಅವಳು ಅಚ್ಚರಿಗೊಂಡಳು. ಪ್ರತಿವಂದಿಸದ ಇರುವುದು ಅಸಭ್ಯತೆ ಆದುದರಿಂದ ತಲೆಯನ್ನು ಸ್ವಲ್ಪ ಮಾತ್ರ ಅಲುಗಾಡಿಸಿ, ಪ್ರತಿವಂದನೆ ಸೂಚಿಸುತ್ತಿದ್ದಳು. ಎರಡು ವಾರಗಳ ಅನಂತರ, ಅವಳು, ಅವನ ವಂದನೆಗೆ ಪ್ರತಿವಂದನೆಯನ್ನು ಸಮೀಪಕ್ಕೆ ಬರುವ ಮೊದಲೇ ಮಾಡುತ್ತಿದ್ದಳು.

ಅವನು ಅವಳೊಡನೆ ಮಾತನಾಡಿದ! ಏನನ್ನು? ಸಂಜೆಯ ಮುಳುಗುವ ಸೂರ್ಯನ ವಿಚಾರ ಎಂಬುದರಲ್ಲಿ ಸಂದೇಹವೇ ಇಲ್ಲ ಅಲ್ಲವೆ! ಅನಂತರ ಅವರಿಬ್ಬರು ಒಟ್ಟಿಗೆ ಸೂರ್ಯಾಸ್ತವನ್ನು ನೋಡಿ ಆನಂದಿಸತೊಡಗಿದರು. ಕ್ರಮೇಣ, ಸೂರ್ಯನತ್ತ ನೋಡುವ ಬದಲು ಒಬ್ಬರ ನ್ನೊಬ್ಬರು ಹೆಚ್ಚುಕಾಲ ನೋಡತೊಡಗಿದರು. ಮುಂದಿನ ಎರಡು ವಾರಗಳು ಕೆಲವು ನಿಮಿಷಗಳ ಮಿತ ಸಂಭಾಷಣೆಯಲ್ಲಿ ನಿರತರಾದರು. ಅದಾದ ಮೇಲೆ ಮಾತನಾಡುತ್ತ ಸ್ವಲ್ಪ ದೂರ ಒಟ್ಟಿಗೆ ನಡೆಯುವಷ್ಟು ಧೈರ್ಯ ಬಂದಿತು. ನಾಲಿಗೆ ಗಿಂತಲೂ ಅವರ ನಯನಗಳು ಸಾವಿರಾರು ಮಾತುಗಳನ್ನು ಆಡಿಕೊಂಡವು. ಮನದ ತುಡಿತ ಗಳನ್ನು ಕಣ್ಣುಗಳು ಹೇಳಿದವು. ಕೊನೆಗೆ ಅವನು ಒಂದು ದಿನ ಅವಳ ಕೈಯನ್ನು ಹಿಡಿದುಕೊಂಡು, ಯುವತಿಯು ಪುರುಷನ ಬಾಯಿಯಿಂದ ಕೇಳಲು ಇಷ್ಟಪಡುವ, ಹೇಳಿದಾಗ ಮಾತ್ರ ಕೇಳಿಸಿಕೊಳ್ಳದವ ಳಂತೆ ನಟಿಸುವ, ಆ ಮೂರು ಪದಗಳನ್ನು (ನಾನು ನಿನ್ನನ್ನು ಪ್ರೀತಿಸುತ್ತೇನೆ) ಮೆಲ್ಲನೆ ಅವಳ ಕಿವಿಯ ಬಳಿ ಪಿಸುಗುಟ್ಟಿದ್ದಿರಬೇಕು.

ಕಾಮವಿಕಾರಕ್ಕೆ ಎಡೆ ಮಾಡಿಕೊಡದೆ ಒಬ್ಬರನ್ನೊಬ್ಬರು ಪ್ರೀತಿಸುತ್ತಿದ್ದೇವೆಂಬುದು ಇಬ್ಬ ರಿಗೂ ಚೆನ್ನಾಗಿ ಗೊತ್ತಿತ್ತು. ಅವಳು ಹೃದಯದ ಕೋಮಲತೆಯ ಆ ರಮ್ಯಲೋಕದಲ್ಲೇ ಇರಲು ಆಶಿಸಿದಳು, ಆದರೆ ಅವನು ಮುಂದುವರಿಯಲು ಹಾತೊರೆಯುತ್ತಿದ್ದ. ಪ್ರತಿದಿನವೂ ಅವನು ಅವಳನ್ನು ತನ್ನವಳಾಗಬೇಕೆಂದು ಒತ್ತಾಯಿಸುತ್ತಿದ್ದ. ದಿನಗಳು ಕಳೆದಂತೆ ಅವನ ಒತ್ತಾಯ ಹೆಚ್ಚ ತೊಡಗಿತು. ಅವಳು ಅವನ ಕೋರಿಕೆಯನ್ನು ಒಪ್ಪಿ ಕೊಳ್ಳಲಿಲ್ಲ. ಏನೇ ಆದರೂ, ಅವನ ಆ ಒಂದು ಬೇಡಿಕೆಗೆ ಮಣಿಯಬಾರದೆಂದು ತೀರ್ಮಾನಿಸಿ ದ್ದಂತೆ ಕಂಡಿತು. ಒಂದು ಸಂಜೆ ಲೋಕಾಭಿರಾಮ ವಾಗಿ ಮಾತನಾಡುತ್ತ, 'ನನ್ನ ಗಂಡ ಇಂದು ಬೆಳಿಗ್ಗೆ ಮರ್ಸೈಲ್ಸ್‌ಗೆ ಹೋಗಿದ್ದಾನೆ, ನಾಲ್ಕು ದಿನಗಳು ಅಲ್ಲೇ ಇರುತ್ತಾನೆ' ಎಂದು ಮಾತಿನ ಮಧ್ಯೆ, ಆಕಸ್ಮಿಕವೆಂಬಂತೆ ಹೇಳಿದಳು.

ಶಾ ದ ಕರ್ಮೆಂಲಿ, ಕೂಡಲೇ ಅವಳ ಕಾಲು ಹಿಡಿದು, ರಾತ್ರಿ ಹನ್ನೊಂದು ಗಂಟೆಗೆ ಮನೆಯ ಬಾಗಿಲನ್ನು ತೆರೆಯಬೇಕೆಂದು ಬೇಡಿ ಕೊಂಡ. ಅವನು ಎಷ್ಟೇ ವಿನಂತಿಸಿಕೊಂಡರೂ ಅವಳು

ಒಪ್ಪಲಿಲ್ಲ, ಕೋಪಗೊಂಡವಳಂತೆ ಮನೆಗೆ ಹಿಂತಿರುಗಿದಳು. ಕಮಾಂಡರ್ ಸಂಜೆ ಯೆಲ್ಲ ಬುಸುಗುಟ್ಟುತ್ತಿದ್ದ. ಮಾರನೆಯ ದಿವಸ ಬೆಳಿಗ್ಗೆ, ಕೋಪದಿಂದ ಕುದಿಯುತ್ತ, ಕೋಟೆಯ ಗೋಡೆಯ ಮೇಲೆ ಸುತ್ತಾಡಿದ. ಅನಂತರ ವಾದ್ಯದ ಕೋಣೆಯಿಂದ ಹಿಡಿದು, ಸೈನ್ಯದಳದ ಶಾಲೆಯ ತನಕ ಎಲ್ಲ ವಿಭಾಗಗಳಿಗೂ ಭೇಟಿ ನೀಡಿ, ಜಾತ್ರೆ ಸೇರಿರುವ ಜನರ ಮಧ್ಯೆ, ಕಲ್ಲುಗಳನ್ನು ಎಸೆಯುವಂತೆ, ಎಲ್ಲೆಡೆಯೂ ತಪ್ಪುಗಳನ್ನು ಕಂಡುಹಿಡಿದು, ಅಧಿಕಾರಿಗಳು ಮತ್ತು ಸೈನಿಕರಿಗೆ ಚೆನ್ನಾಗಿ ಛೀಮಾರಿ ಹಾಕಿದ. ಅನಂತರ ಬೆಳಗಿನ ಉಪಾಹಾರಕ್ಕೆ ಬಂದ. ಮೇಜಿನ ಮೇಲಿನ ಕೈಚೌಕದ ಅಡಿಯಲ್ಲಿ ಒಂದು ಚೀಟಿ ಇತ್ತು. ಅದನ್ನು ಬಿಡಿಸಿ ನೋಡಿದ, ನಾಲ್ಕು ಪದಗಳಿದ್ದವು: 'ಇಂದು ಸಂಜೆ, ಹತ್ತು ಗಂಟೆ.' ಏನೂ ಕಾರಣವಿಲ್ಲದೆ ಅವನು ಊಟ ಬಡಿಸುವವನಿಗೆ ಐದು ಫ್ರಾಂಕ್‌ಗಳನ್ನು ಕೊಟ್ಟ.

ಆ ದಿನ ಬಹಳ ದೀರ್ಘವಾಗಿದ್ದಂತೆ ಕಂಡಿತು. ಬಹಳ ಸಮಯ ಸಿಂಗಾರ ಮತ್ತು ಸುಗಂಧ ಲೇಪನದಲ್ಲಿ ಕಳೆದ. ಸಂಜೆಯ ಊಟಕ್ಕೆ ಬಂದಾಗ ಸೇವಕನೊಬ್ಬನು ಒಂದು ಲಕೋಟೆಯನ್ನು ತಂದು ಕೊಟ್ಟ. ಅದರೊಳಗೆ ಒಂದು ತಂತಿ ಇತ್ತು: 'ನನ್ನ ಪ್ರಿಯೇ, ವ್ಯಾಪಾರ ಮುಗಿಯಿತು. ಇಂದು ಸಂಜೆ ಹಿಂತಿರುಗುತ್ತಿದ್ದೇನೆ: ಒಂಬತ್ತರ ರೈಲು. -ಪರೀಸೆ'

ಕಮಾಂಡರ್ ಬಹಳ ಗಟ್ಟಿಯಾಗಿ ಅವಾಚ್ಯ ಶಬ್ದಗಳನ್ನು ಉಪಯೋಗಿಸಿದ. ಬೆದರಿದ ಬಡಿಸುವವನ ಕೈಯಿಂದ ಸೂಪಿನ ಪಾತ್ರೆ ಜಾರಿ ಬಿದ್ದಿತು. ಈಗೇನು ಮಾಡಬೇಕು? ಅವನಿಗೆ ಅವಳು ಬೇಕಾಗಿತ್ತು, ಅಂದೇ ಅವಳನ್ನು ಕೂಡುವ ಕನಸು ಕಾಣುತ್ತಿದ್ದ. ಈಗ ಏನೇ ಆಗಲಿ, ಹೇಗಾದರೂ ಸರಿ, ಅವರ ಮಿಲನಕ್ಕೆ ಯಾವ ಅಡ್ಡಿಯೂ ಬರಬಾರದು. ಇದಕ್ಕಾಗಿ ಅವಳ ಪತಿಯನ್ನು ಬಂಧಿಸಬೇಕಾದರೂ ಪರವಾ ಇಲ್ಲ. ಥಟ್ಟನೆ ಅವನ ಮನಸ್ಸಿನಲ್ಲಿ ಒಂದು ಹುಚ್ಚು ಆಲೋಚನೆ ಬಂದಿತು. ಅವನು ಒಂದು ಖಾಲಿ ಕಾಗದ ತರಿಸಿ ಅದರಲ್ಲಿ ಈ ರೀತಿ ಬರೆದ:

'ಮದಾಂ, ಅವನು ಇಂದು ಸಂಜೆ ಹಿಂತಿರುಗುವುದಿಲ್ಲ. ನಾನು ಆಣೆ ಮಾಡಿ ಹೇಳುತ್ತೇನೆ, ನಿಮಗೆ ಗೊತ್ತಿರುವ ಸ್ಥಳಕ್ಕೆ ನಾನು ಹತ್ತು ಗಂಟೆಗೆ ಬರುತ್ತೇನೆ. ಏನೂ ಹೆದರಬೇಡಿ. ನಾನು ಒಬ್ಬ ಸೈನ್ಯಾಧಿಕಾರಿಯಾಗಿ ಪ್ರಮಾಣಪೂರ್ವಕವಾಗಿ ನಿಮಗೆ ಭರವಸೆ ಕೊಡುತ್ತಿದ್ದೇನೆ.-ಶಾ ದ ಕರ್ಮೇಲಿ'

ಈ ಪತ್ರವನ್ನು ಕಳುಹಿಸಿದ ಅನಂತರ ಅವನು ಶಾಂತಿಯಿಂದ ಊಟ ಮಾಡಿದ. ಎಂಟು ಗಂಟೆಯ ಸುಮಾರಿಗೆ, ತನ್ನ ಅನಂತರದ ಹಿರಿಯ ಅಧಿಕಾರಿ ಕ್ಯಾಪ್ಟನ್ ಗ್ರಿಬೋಯಿಗೆ ಹೇಳಿ ಕಳುಹಿಸಿದ. ಅವನು ಬಂದಾಗ, ಪರೀಸೆ ತನ್ನ ಹೆಂಡತಿಗೆ ಕಳುಹಿಸಿದ್ದ ತಂತಿಯನ್ನು ತನ್ನ ಬೆರಳುಗಳ ಮಧ್ಯೆ ಸುರುಳಿ ಸುತ್ತುತ್ತ ಹೇಳಿದ: ''ಕ್ಯಾಪ್ಟನ್, ನನಗೆ ಒಂದು ಅಸಾಧಾರಣವಾದ ತಂತಿ ಬಂದಿರುವುದು. ಅದರಲ್ಲಿರುವ ವಿಷಯವನ್ನು ಗೌಪ್ಯವಾಗಿಡಬೇಕೆಂಬ ಕಾರಣದಿಂದ ನಿನ್ನೊಡನೆ ಚರ್ಚಿಸುವಂತಿಲ್ಲ. ನೀನು ಕೂಡಲೇ



ಹೋಗಿ ನಗರದ ಪ್ರವೇಶ ದ್ವಾರಗಳ ಕಾವಲಿನ ವ್ಯವಸ್ಥೆ ಮಾಡಬೇಕು, ಯಾರೊಬ್ಬರೂ-ನೆನಪಿರಲಿ, ಯಾರಾದರೂ ಸರಿ-ನಾಳೆ ಬೆಳಗಿನ ಆರು ಗಂಟೆಗೆ ಮುಂಚೆ ನಗರವನ್ನು ಪ್ರವೇಶಿಸಲೂಬಾರದು, ನಗರವನ್ನು ಬಿಟ್ಟು ಹೊರಗೆ ಹೋಗಲೂಬಾರದು. ನೀನು ನಗರದ ರಸ್ತೆಗಳಲ್ಲೂ ಕಾವಲಿಗೆ ಸೈನಿಕರನ್ನು ನೇಮಿಸು. ಅವರು ಜನರಿಗೆ ರಾತ್ರಿ ಒಂಬತ್ತರ ಒಳಗೆ ತಮ್ಮ ತಮ್ಮ ಮನೆಗಳನ್ನು ಸೇರಿಕೊಳ್ಳುವಂತೆ ತಿಳಿಸಿ, ಅದರಂತೆ ಅವರು ನಡೆದುಕೊಳ್ಳುವುದನ್ನು ನೋಡಿಕೊಳ್ಳಬೇಕು. ಯಾರಾದರೂ ನಿಗದಿತ ಸಮಯದ ಅನಂತರ ಬೀದಿಯಲ್ಲಿ ಕಂಡು ಬಂದರೆ, ಕೂಡಲೇ ಅವರನ್ನು ಸೈನಿಕ ಶಿಬಿರಕ್ಕೆ ಕರೆದೊಯ್ಯತಕ್ಕದ್ದು. ನಿನ್ನ ಸೈನಿಕರು ರಾತ್ರಿಯ ವೇಳೆಯಲ್ಲಿ ನನ್ನನ್ನು ನೋಡಿದರೆ, ಕೂಡಲೇ ಅವರು ನನ್ನ ಗುರುತು ಇಲ್ಲದವರಂತೆ, ಅಲ್ಲಿಂದ ದೂರ ಹೋಬೇಕು. ನಾನು ಹೇಳಿದುದು ನಿನಗೆ ಸರಿಯಾಗಿ ಅರ್ಥವಾಯಿತೇ?''

''ಅರ್ಥವಾಯಿತು, ಕಮಾಂಡೆಂಟ್''

''ನಾನು ಕೊಟ್ಟಿರುವ ಆಜ್ಞೆಯನ್ನು ಚಾಚೂ ತಪ್ಪದಂತೆ ಎಲ್ಲರೂ ಪಾಲಿಸುವಂತೆ ಮಾಡುವುದು ನಿನ್ನ ಜವಾಬ್ದಾರಿ ಕ್ಯಾಪ್ಟನ್.''

''ಹೌದು, ಕ್ಯಾಪ್ಟನ್.''

''ನೀನು ಒಂದು ಲೋಟ ಮದ್ಯ ಸೇವಿಸಲು ಇಷ್ಟಪಡುತ್ತೀಯಾ?''

''ಸಂತೋಷದಿಂದ, ಕಮಾಂಡೆಂಟ್.''

''ಅವರಿಬ್ಬರೂ ತಮ್ಮ ಲೋಟಗಳನ್ನು ತಾಗಿಸಿ ಸ್ವಸ್ತಿವಾಚನ ಮಾಡಿ ಕುಡಿದರು. ಅನಂತರ ಕ್ಯಾಪ್ಟನ್ ಗ್ರಿಬೋಯಿ ಅಲ್ಲಿಂದ ಹೊರಟ.



ಮಾರ್ಸೈಲ್ಸ್‌ನಿಂದ ಹೊರಟ ರೈಲು ಸರಿಯಾಗಿ ಒಂಬತ್ತು ಗಂಟೆಗೆ ನಿಲ್ದಾಣವನ್ನು ತಲುಪಿತು, ಇಬ್ಬರು ಪ್ರಯಾಣಿಕರನ್ನು ಅಲ್ಲಿ ಇಳಿಸಿ ಮುಂದೆ ಸಾಗಿತು. ಆ ಪ್ರಯಾಣಿಕರು ನೈಸ್‌ನತ್ತ ಹೆಜ್ಜೆ ಹಾಕತೊಡಗಿದರು.

ಅವರಲ್ಲಿ ಒಬ್ಬ ಎತ್ತರವಾಗಿ, ಸಣಕಲನಾಗಿದ್ದ. ಅವನ ಹೆಸರು ಸರಿಬೆ, ಅವನೊಬ್ಬ ಎಣ್ಣೆ ವ್ಯಾಪಾರಿಯಾಗಿದ್ದ. ಇನ್ನೊಬ್ಬ ಪ್ರಯಾಣಿಕ ಕುಳ್ಳಗೆ, ದಪ್ಪಗೆ ಇದ್ದ. ಅವನೇ ಪರೀಸೆ. ನಗರವು ಒಂದು ಕಿಲೋಮೀಟರ್ ದೂರದಲ್ಲಿತ್ತು. ಅವರು ಬೆನ್ನ ಮೇಲೆ ತಮ್ಮ ಚೀಲಗಳನ್ನು ಏರಿಸಿಕೊಂಡು, ಜೊತೆಯಾಗಿ ಹೊರಟರು. ಕೋಟೆಯ ಬಾಗಿಲ ಬಳಿ ಬಂದಾಗ ಅಲ್ಲಿದ್ದ ಕಾವಲುಗಾರರು ತಮ್ಮ ಬಂದೂಕಗಳನ್ನೆತ್ತಿಕೊಂಡು, ಬಂದವರಿಗೆ ಅಲ್ಲಿಂದ ಹಿಂತಿರುಗುವಂತೆ ತಿಳಿಸಿದರು. ಆಶ್ಚರ್ಯ, ವಿಸ್ಮಯ, ಭಯದಿಂದ ಕೂಡಿದವರಾಗಿ ಅವರು ಒಂದು ಕಡೆ ಹೋಗಿ ನಿಂತು ಚರ್ಚಿಸಿ, ಕೊನೆಗೆ ಜಾಗರೂಕತೆಯಿಂದ ಮತ್ತೊಮ್ಮೆ ಅಲ್ಲಿಗೆ ಬಂದು, ತಮ್ಮ ಹೆಸರು ಮತ್ತು ಪದವಿಗಳನ್ನು ತಿಳಿಸಿದರು. ಆದರೆ ಸೈನಿಕರಿಗೆ ಮೊದಲೇ ಕಟ್ಟುನಿಟ್ಟಿನಿಂದ ನಿಯಮವನ್ನು ಪಾಲಿಸಬೇಕೆಂಬ ಆದೇಶ ದೊರೆತಿದ್ದುದರಿಂದ, ಪ್ರಯಾಣಿಕರನ್ನು ಗುಂಡಿಟ್ಟು ಕೊಲ್ಲುವುದಾಗಿ ಬೆದರಿಸಿದರು. ಹೆದರಿದ ಅವರಿಬ್ಬರೂ, ಕೂಡಲೇ ಅಲ್ಲಿಂದ ಓಡಿಹೋದರು. ಓಟವನ್ನು ನಿಧಾನ ಮಾಡುತ್ತಿದ್ದ ತಮ್ಮ ಚೀಲಗಳನ್ನು ಅಲ್ಲೇ ಬಿಟ್ಟು ಓಡಿದರು.

ಈ ಇಬ್ಬರು ದುರದೃಷ್ಟಶಾಲಿ ಪಯಣಿಗರು ಕೋಟೆಯ ಗೋಡೆಯನ್ನು ಸುತ್ತಿ, ಇನ್ನೊಂದು ಭಾಗದಿಂದ ನಗರ ಪ್ರವೇಶಕ್ಕೆ ಪ್ರಯತ್ನಿಸಿದರು. ಆ ಬಾಗಿಲನ್ನೂ ಮುಚ್ಚಲಾಗಿತ್ತು ಮತ್ತು ಅಲ್ಲಿನ ಕಾವಲುಗಾರನು ಇನ್ನೂ ಭಯಂಕರನಾಗಿದ್ದ. ಸರೀಬೆ ಮತ್ತು ಪರೀಸೆ ವಿವೇಕಶಾಲಿಗಳಾಗಿದ್ದುದರಿಂದ, ಅಲ್ಲಿ ತಮ್ಮನ್ನು ನಗರದೊಳಕ್ಕೆ ಹೋಗಲು ಬಿಡಲೇಬೇಕೆಂದು ಒತ್ತಾಯಿಸದೆ, ರಾತ್ರಿಯ ವೇಳೆಯಲ್ಲಿ ಕೋಟೆಯ ಸುತ್ತಲ ಪ್ರದೇಶವು ಅಷ್ಟು ಸುರಕ್ಷಿತವಾಗಿರದಿದ್ದುದರಿಂದ,

ರಾತ್ರಿಯನ್ನು ಕಳೆಯಲು ರೈಲ್ವೇ ನಿಲ್ದಾಣಕ್ಕೆ ಹಿಂತಿರುಗಿದರು. ನಿದ್ದೆ ಮಾಡಲು ಹೊರಟಿದ್ದ ನಿಲ್ದಾಣದ ಅಧಿಕಾರಿಗೆ ಇವರನ್ನು ನೋಡಿ ಆಶ್ಚರ್ಯವಾಯಿತು, ಅವನು ಅವರಿಗೆ ಅಲ್ಲಿನ ನಿರೀಕ್ಷಣಾ ಕೊಠಡಿಯಲ್ಲಿ ರಾತ್ರಿಯನ್ನು ಕಳೆಯಲು ಅನುಮತಿಯನ್ನು ಕೊಟ್ಟನು. ಆ ಕತ್ತಲೆಯಲ್ಲಿ ಅವರು, ಅಲ್ಲಿನ ಮಖಮಲ್ಲು ಹಾಕಿದ್ದ ಆಸನದ ಮೇಲೆ ಕುಳಿತುಕೊಂಡರು. ಭಯಭೀತರಾದ ಅವರಿಗೆ ರಾತ್ರಿ ನಿದ್ದೆ ಬರಲಿಲ್ಲ. ಎಷ್ಟು ಸಮಯವಾದರೂ ರಾತ್ರಿ ಕಳೆಯುತ್ತಿರುವಂತೆ ತೋರಲಿಲ್ಲ.

ಬೆಳಗಿನ ಆರೂವರೆ ಸಮಯದಲ್ಲಿ ಅವರಿಗೆ ನಗರದ ಹೆಬ್ಬಾಗಿಲುಗಳನ್ನು ತೆರೆದಿರುವ ಸುದ್ದಿ ಮುಟ್ಟಿತು. ಜನರು ಅಂತಿಬಸ್ ನಗರವನ್ನು ಪ್ರವೇಶಿಸಬಹುದೆಂಬುದೂ ತಿಳಿಯಿತು. ಅವರು ನಗರದತ್ತ ನಡೆದರು, ಹಿಂದಿನ ರಾತ್ರಿ ಬಿಟ್ಟಿದ್ದ ಚೀಲಗಳು ಸಿಗಲಿಲ್ಲ. ಹೆಬ್ಬಾಗಿಲನ್ನು ದಾಟಿ ಒಳಕ್ಕೆ ಹೋಗಿ, ಅಳುಕುತ್ತ ನಡೆಯುತ್ತಿದ್ದಾಗ, ಕಪಟ ನಾಟಕದ ನಾಯಕ ಕಮಾಂಡಂಟ್ ಕರ್ಮೇಲಿ ಅವರನ್ನು ಭೇಟಿಯಾಗಿ, ಅವರ ಬಗ್ಗೆ ವಿಚಾರಿಸಿದ. ಅವನು ವಿನಯದಿಂದ ಅವರಿಗೆ ವಂದಿಸಿ, ರೈಲ್ವೇ ನಿಲ್ದಾಣದಲ್ಲಿ ರಾತ್ರಿಯನ್ನು ನಿದ್ದೆಯಿಲ್ಲದೆ ಕಳೆಯಬೇಕಾದುದಕ್ಕೆ ಕ್ಷಮೆಯನ್ನು ಕೋರಿ, ಆ ರೀತಿಯ ಆದೇಶವನ್ನು ಹೊರಡಿಸಲೇಬೇಕಾಗಿತ್ತೆಂದು ತಿಳಿಸಿದ.

ಅಂತಿಬಸಿನ ನಿವಾಸಿಗಳಿಗೆ ಅದು ಒಡೆಯಲಾಗದ ರಹಸ್ಯವಾಗಿತ್ತು. ಕೆಲವರು ಇಟಾಲಿಯನ್ನರೊಡನೆ ಯಾವುದೋ ರಹಸ್ಯ ಸಮಾಲೋಚನೆ ಇತ್ತೆಂದರು, ಕೆಲವರು ರಾಜಕುಮಾರನೊಬ್ಬ ರಹಸ್ಯ ಭೇಟಿ ಕೊಟ್ಟಿದ್ದನೆಂದರು, ಇನ್ನು ಕೆಲವರು ಯಾವುದೋ ವ್ಯೂಹ ರಚನೆ ನಡೆಯಿತು ಎಂದರು. ಕೆಲವು ಕಾಲ ಅವರಿಗೆ ಇದರ ಬಗ್ಗೆ ಏನೂ ತಿಳಿಯಲಿಲ್ಲ. ಕೊನೆಗೆ ಅಲ್ಲಿದ್ದ ಸೈನ್ಯದ ದಳವನ್ನು ದೂರದ ಪ್ರದೇಶಕ್ಕೆ ವರ್ಗ ಮಾಡಿ, ಶಾ ದ ಕರ್ಮೇಲಿಗೆ ಕಠಿಣ ಕ್ರಮ ಕೈಗೊಂಡಾಗ ನಗರದ ನಿವಾಸಿಗಳು ಅಂದು ರಾತ್ರಿ ಏನು ನಡೆದಿರಬಹುದು ಎಂಬುದನ್ನು ಊಹಿಸಿದರು.''

ಮಾರ್ತಿನಿ ಕಥೆ ಹೇಳಿ ಮುಗಿಸಿದ. ವಾಯುವಿಹಾರವನ್ನು ಮುಗಿಸಿಕೊಂಡು ಶ್ರೀಮತಿ ಪರೀಸೆ ಅಲ್ಲೇ ಬಂದಳು. ಸಂಜೆಯ ಮುಳುಗುತ್ತಿರುವ ಸೂರ್ಯನ ಕಿರಣಗಳು ಬಿದ್ದು ಕೆಂಪಾಗಿ ಕಾಣುತ್ತಿದ್ದ ಆಲ್ಪ್ಸ್‌ನ ಶಿಖರಗಳನ್ನೇ ನೋಡಿಕೊಂಡು ಶಾಂತಳಾಗಿ ಸಾಗುತ್ತಿದ್ದ ಅವಳು ನಮ್ಮ ಪಕ್ಕದಲ್ಲಿ ಹಾದು ಹೋದಳು.

ನಾನು ಆ ಬಡ, ದುಃಖಿತ ಹೆಣ್ಣುಮಗಳಿಗೆ ವಂದಿಸಿದೆ. ಅವಳು ಪ್ರಾಯಶಃ, ಅನೇಕ ವರ್ಷಗಳ ಹಿಂದಿನ ಆ ಒಂದು ರಾತ್ರಿ, ಅವಳ ಒಂದು ಮಿಲನಕ್ಕಾಗಿ ಇಡೀ ನಗರವನ್ನೇ ಸೆರೆ ಹಿಡಿದಿದ್ದ, ಅವಳ ಪ್ರೇಮಕ್ಕಾಗಿ ತನ್ನ ಭವಿಷ್ಯವನ್ನೇ ಬಲಿಕೊಟ್ಟ ಆ ಧೀರನನ್ನು ನೆನೆಸಿಕೊಳ್ಳುತ್ತಿರಬಹುದು. ಈಗ ಅವನು ಬಹುಶಃ ಅವಳನ್ನು ಮರೆತಿರಬಹುದು, ಅಥವಾ ಒಂದೊಂದು ಸಲ ಪಾನಮತ್ತನಾಗಿದ್ದಾಗ ತಾನಾಡಿದ ಹಾಸ್ಯಾಸ್ಪದವಾದ ಆ ದಿಟ್ಟ ಪ್ರಹಸನದ ಬಗ್ಗೆ ಹೇಳಿಕೊಳ್ಳುತ್ತಿರಬಹುದು.

ಅವಳು ಅವನನ್ನು ಪುನಃ ಭೇಟಿ ಮಾಡಿದಳೇ? ಅವಳು ಈಗಲೂ ಅವನನ್ನು ಪ್ರೀತಿಸುತ್ತಿರುವಳೇ? ನಾನು ಯೋಚಿಸತೊಡಗಿದೆ: ''ಹೋಮರನು ಮೆನೆಲಸ್‌ನ ಸಾಹಸದ ಗಾಥೆಯನ್ನು ಹಾಡಿದ, ಹೆಲೆನಳ ಬಗ್ಗೆ ಬರೆದ. ಈ ಆಧುನಿಕ ಹೆಲೆನ್ ಮತ್ತು ಧೀರ ಕರ್ಮೇಲಿಯ ಹಾಸ್ಯಾಸ್ಪದ ಸಾಹಸ ಗಾಥೆಯನ್ನು ಬರೆಯುವವರಾರು? ಏನೇ ಆದರೂ ಈ ಪರಿತ್ಯಕ್ತ ನಾರಿಯ ಪ್ರಿಯಕರನಾದ ಆ ಸೈನ್ಯಾಧಿಕಾರಿ ನಿಜವಾಗಿಯೂ ಗ್ರೀಕ್ ವೀರ ಅಖಿಲಿಸ್‌ನಂತೆ ವೀರ, ಧೀರ, ಸುಂದರ ಹಾಗೂ ಬಲಶಾಲಿ ಪುರುಷನಾಗಿದ್ದು, ಮತ್ತೊಬ್ಬ ಗ್ರೀಕ್ ವೀರ ಯೂಲಿಸಿಸ್‌ಗಿಂತಲೂ ಅಧಿಕ ನಿಪುಣನೂ, ಕುಟಿಲನೂ ಆಗಿದ್ದ.







ಕೆ. ಫಣಿರಾಜ್

# ಖಾಲಿ ಬಣ್ಣ

ಈ ಬಣ್ಣ ನನಗೆ ಇಷ್ಟವಿಲ್ಲ
ಆದರೂ ಎಳೆತ ತಪ್ಪುವುದಿಲ್ಲ.

ಆಸೆಗೇನು, ಎಲ್ಲಾ ಬೇಕು
ಮುಖ್ಯ, ತಲೆಸೆಟ್ಟಗಿರಬೇಕು.

ಮರೆಯಲುಬಹುದು, ಆದರೆ
ಬಣ್ಣ ತೊಳೆಯಲುಬಾರದು.

ಎರಡು ರೆಪ್ಪೆ ನಡುವೆ ಕೂತಿದೆ
ಕಂಡದ್ದು ಕಾಣುವುದು
ಅದೇ ಬಣ್ಣ.

ಅವನ ಬಟ್ಟೆ, ಅವಳ ಬಟ್ಟೆ
ಚಿಟ್ಟೆ, ಗಿರಗಿಟ್ಟೆ
ಅದೇ ಬಣ್ಣ.

ಕಂಡಿತು! ಸಿಕ್ಕಿತು! ಎಂದು
ಹಿಡಕೊಂಡರೆ, ಅದು ಸ್ವಲ್ಪ ಬೇರೆ.

ಇದೇ, ಇದೇ! ಎಂದರೆ
ಸ್ವಲ್ಪ ನೋಡಿ, ಬೇರೆ ಇರಬೇಕು ಎನ್ನುತ್ತಾರೆ.

ಛೆ, ಛೆ! ಇದಲ್ಲ ಎಂದರೆ
ಇದೆ ತಾನೇ ನೀವು ಹೇಳಿದ್ದು ಎನ್ನುತ್ತಾರೆ.

ಹೆಂಡತಿ ಹುಸಿ ಹೋಗಬಹುದು;
ಮಕ್ಕಳು ನಾವು ಅಂದುಕೊಂಡ ಹಾಗೆ ಇರುವುದಿಲ್ಲ;
ಬಣ್ಣದ ಬಗ್ಗೆ ಯಾಕೆ ಛಾನ್ಸ್ ತೆಗೆದುಕೊಳ್ಳಬೇಕು?
ಇಲ್ಲೇ ಎಲ್ಲೋ ಇದೆ ಸಿಗುತ್ತದೆ.

ಅಷ್ಟು ಆರಾಮವೇ?
ಸಿಗದಿದ್ದರೆ? ನಾನು ಸತ್ತೇ ಹೋದರೆ!
ಬಣ್ಣ ಮುಂದೆ ಮುಂದೆ, ಸಾವು ಹಿಂದೆ ಹಿಂದೆಯೋ
ಹ್ಯಾಗೆ!
ಹ್ಯಾಗೆ ಎಂದರೆ, ಇದು ಉಲ್ಟಾ ಆಗಿರಲೂ ಬಹುದು



# ಪ್ರೀತಿಯ ಸಂಗ ಡೆಡ್ ಪ್ರಪೋಸಲ್

ಬೆರಳಿಗೆ ಬೆರಳು ತಾಗಿತಲ್ಲ
ಪಗಡೆ ಆಟದಲ್ಲಿ.

ಅದೇನೂ ಅಲ್ಲ ಸೈಕಲ್‌ನ
ಬಾರ್ ಮೇಲೆ ನೀನು ಕೂಡಿಸಿಕೊಂಡದ್ದರ ಮುಂದೆ.

ಅದಲ್ಲ, ಅದು ಕ್ಲಾಸಲ್ಲಿ ನಿನ್ನ
ಕಾಲಿಗೆ ಕಾಲು ತಾಗಿದ್ದು.

ಮೊದ್ದು ನೀನು ಬಹಳ ದಿನಗಳ
ಮೇಲೆ ಬೆನ್ನು ಸವರಿದ್ದು.

ಊಹುಂ! ಎಲೆ ತೆಗೆವ ನೆಪದಲ್ಲಿ
ಕೂದಲಲ್ಲಿ ಬೆರಳಾಡಿಸಿದ್ದೇ ಸರಿ.

ಹಾ! ಥಿಯೇಟರ್‌ನಲ್ಲಿ ತುಟಿಕಚ್ಚಿ
ಎದೆ ಹಿಂಡಿದೇಕಲ್ಲ!

ಇಷ್ಟು ಬೆಂಕಿಗೆ, ಇಷ್ಟೇ ತಣ್ಣೀರು
ಎಂದೇನಾದರು ಇದೆಯೋ
ಭೇಟಿಯಾಗದೇ ವಯಸ್ಸಾಯಿತೋ.

ಸರಿ,
ಈಗ,
ಎಲ್ಲಾ ಮುಗಿದಂತೆ ಬಿಡು
ಮದುವೆಯಾಗೋಣವೇ.



# ಮೈಸೂರು ಮಲ್ಲಿಗೆಗೆ ಶ್ರದ್ಧಾಂಜಲಿ

ರಾತ್ರಿಯೆಲ್ಲಾ ನಿನ್ನದೇ ನೆನಪು
ನೀನು ನನಗಾಗೇ ತೋರಿಸುವ ಆ ಕೆಟ್ಟ ಮುಖ
ಬೇಕೆಂತಲೇ ಹೊಗಳುವ ಇನ್ನೊಬ್ಬರೊಂದಿಗೆ ಪಡೆದ ಸುಖ.

ರಾತ್ರಿಯೆಲ್ಲಾ ನಿನ್ನದೇ ಒನಪು
ನನ್ನ ಶಕ್ತಿ ಇಲ್ಲದ ರಟ್ಟೆ
ಹೊಟ್ಟೆಯುರಿಸಲು ನೀನು ತೊಡುವ ಬಣ್ಣಬಣ್ಣದ ಬಟ್ಟೆ.

ರಾತ್ರಿಯೆಲ್ಲಾ ನಿನ್ನದೇ ಛಲ
ತುಟಿಮೇಲೆ ಯಾರೋ ಕಳಿಸಿದ ಗ್ರೀಟಿಂಗ್‌ಕಾರ್ಡ್ ಹಾದರ
ಎದೆಮೇಲೆ ಸುಂದರ ತೋಟದ ಪ್ರಿಂಟಿಂಗ್ ಇರುವ ಚಾದರ

ರಾತ್ರಿಯೆಲ್ಲಾ ನನಗೆ ಒಂದೇ ಹಂಬಲ
ನಿನ್ನ ಕೊಲೆ
ಮುಚ್ಚಲು ಒಂದು ಗುಲಾಬಿ ಬಲೆ

ಕೆ. ಪ್ರಭಾಕರ್

ಜಯಸುದರ್ಶನ

# ಕಾಲ ವಿಚಾರ





ನನ್ನ ನಗೆಯ ಹಿಂದೆ ಅಸ್ಥಿ ಪಂಜರದಂತೆ
ನಿಂತು ಹಲ್ಕಿರಿವಂಥ ಸಾವೇ
ಸೊನ್ನೆಯೊಳ ಹೊಕ್ಕ ಆಗಸದ ಹಾಗೆ
ನೀನಿರುವೆ ನನ್ನಲ್ಲಿ ನಿಮಿತ್ತ ಮಾತ್ರ.

ಹುಟ್ಟುಗಳ ಗಣತಿಯಲಿ
ಹೃದಯ ಲೆಕ್ಕಿಸದ ನಿನ್ನ
ಬಗ್ಗೆ ಬಾಳಿನುನ್ನತಿಗೆ ತಕ್ಕ
ಉದಾತ್ತ ದಷ್ಟಿ ತಳೆಯುವುದೆಷ್ಟು ಕಷ್ಟ!

ಸಾವೇ
ನಿನ್ನ ಹೊಂದುವುದಕ್ಕೆ ಕಾಲ
ತಳ್ಳುತ್ತ ಕಾಯುವುದೆ ಪರಮೋ
ಪಾಯವಲ್ಲ; ನಕ್ಷತ್ರ ಉದುರಿದರೆ
ಅಥವ ಎರಗಿ ಬಂದರೆ ಧೂಮಕೇತು
ಪ್ರಖರವಾಗಿ ಉಲ್ಕೆಸಿಡಿದರೆ
ಕಂಗಾಲಾಗಿ ಕೆಲರು ಒಪ್ಪಿಸುತ್ತಾರೆ ಪ್ರಾಣ
ನಿನಗೆ; ಇನ್ನಿಷ್ಟು ಜನ ಸೇರುತ್ತಾರೆ ನಿಶ್ಚಿಂತೆ.

ಆನಂದ ಶಿಖರದ ಮೇಲಿಂದ ವ್ಯಾಕುಲತೆ
ಯಾಳ ನಿಖರವಾದೊಡನೆ
ಪ್ರೀತಿಸುವವರ ಸೆಳೆದು, ತಬ್ಬುವ
ನೀ, ದೂರ ಓಡುವ ಹೇಡಿಗಳ
ಕಿತ್ತೂ ತಿನ್ನಬಲ್ಲೆ.

ಸಾವೇ, ಮರದಲ್ಲಿ ಹೊಗೆಯಾಡದಂತೆ
ಅವಿತ ಬೆಂಕಿಯ ಹಾಗೆ ನನ್ನಲ್ಲಿ-ನೀನು
ಹುಟ್ಟಿನಿಂದಲೇ ಜತೆಯಾದ ಏಕಾಕಿ-
ತನದ ಬೇತಾಳದವಳಿ
ನನ್ನ ಎಡೆಬಿಡದಿರುವವರೆಗೆ
ಬೇಕು-ಬೇಡವೆನಿಸುವ ದ್ವಂದ್ವದನಂಟು
ನಮ್ಮಿಬ್ಬರಿಗೂ ಉಂಟು.

('ಹೃದಯ ಮಂಡಲ'ದಿಂದ)



'ಜಯಸುದರ್ಶನ' ಕಾವ್ಯನಾಮದಿಂದ ಪ್ರಸಿದ್ಧರಾದ ಜಿ.ಎಸ್. ಶಿವಪ್ರಕಾಶ, ಈ ಅಕ್ಟೋಬರ್ 15ರಂದು 53ನೆಯ ಪ್ರಾಯದಲ್ಲಿ ತೀರಿಕೊಂಡರು. 'ಇನ್ನಾದರೂ ಬದುಕಬೇಕು' ಎಂಬ ಹಟದಿಂದ, ಗುಣಕಾಣದ, ಶಸ್ತ್ರ ಚಿಕಿತ್ಸೆಯಿಂದಲೂ ಸರಿಹೋಗದೇ ಉಳಿದ ಎದೆನೋವಿನೊಂದಿಗೆ, ಪ್ರೀತಿ, ಸಹನೆಯಿಂದ ಸಹಜೀವನ ನಡೆಸಿದರು.

'ಫ್ರೀ ಲಾನ್ಸ್ ಜರ್ನಲಿಸ್ಟ್' ಆಗಿ ಉದ್ಯೋಗ ಜೀವನ ಆರಂಭಿಸಿದ ಅವರು, ರಂಗನಾಥ ದಿವಾಕರರ ಆಪ್ತ ಕಾರ್ಯದರ್ಶಿಯಾಗಿ, ''ಇನ್‌ಫಾ'' ಸುದ್ದಿ ಸಂಸ್ಥೆಯ ಕರ್ನಾಟಕದ ಏಕಮೇವ ವರದಿಗಾರರಾಗಿ ಪತ್ರಿಕೋದ್ಯಮದಲ್ಲಿ ಧುಮುಕಿದರು.

'ಇಲ್ಲದ್ದು' (1972) ಸಂಕಲನ ಹೊರತರುವಾಗ ಶಿವಪ್ರಕಾಶ, ಜಯಸುದರ್ಶನ ಆದರು. ಹುಟ್ಟಿನಿಂದಲೂ ಸಮಸ್ಯೆಯಾಗಿದ್ದ ಎದೆ ಬೇನೆಯ ಬಗೆಗಿನ ಕುತೂಹಲ, ಬದುಕಿನ ನಶ್ವರತೆಯ ಬಗೆಗಿನ ಜಿಜ್ಞಾಸೆ, ಹಾಗೂ ಅಸ್ತಿತ್ವಕ್ಕೆ ಸವಾಲೆಸೆಯುತ್ತಲೇ ಮರೀಚಿಕೆಯಂತಿದ್ದ ಸಾವಿನ ಬಗ್ಗೆ ಜಯಸುದರ್ಶನ, ತಮ್ಮ ಕವನಗಳಲ್ಲಿ ಚಿಂತನೆ ನಡೆಸಿದ್ದಾರೆ. ಅವರು ಸೃಷ್ಟಿಸಿದ ಪ್ರತಿಮೆ, ಪ್ರತೀಕಗಳು, ರೂಪಿಸಿದ ಲಯ-ಧಾಟಿಗಳು ವಿಶಿಷ್ಟವಾಗಿವೆ.

'ಇನ್ನಾದರೂ ಬದುಕಬೇಕು' (1973), 'ಹೃದಯ ಮಂಡಲ' (1979), 'ಹಾಡು ಕಟ್ಟುವ ಮಾತು' (1983) ಹಾಗೂ 'ಆ ದಾರಿ' (1991) ಇವರ ಪ್ರಕಟಿತ ಕವನ ಸಂಕಲನಗಳು. ಇಂಗ್ಲಿಷ್‌ನಲ್ಲೂ ಎರಡು ಕವನ ಸಂಕಲನ ತಂದಿದ್ದಾರೆ.



ತುರುವೀಹಾಳ ಚಂದ್ರು

# ನೋವಿನ ಚಂದ್ರ

ನಿಶ್ಶಬ್ದ ನೆಲದಲ್ಲಿಯ
ಮೋಡ ಮುಸುಕಿದ ಒಂದು ಮುಂಜಾವು.
ಕತ್ತಲೆಯ ಕನಸುಗಳಿಂದ ಹೊರಬರದೆ
ಬಾನಲ್ಲಿಯೇ ಬಿಳಿಚಿಕೊಂಡ
ಚಂದ್ರನ ಕನವರಿಕೆ

ಆಕಾಶದಂಚಿನಿಂದ ಮಳೆಸುರಿದು
ಗಿರಿಗಳೊಡಲಲಿ ಮೂಡಿದ ಗರಿಕೆ,
ಚಿಗುರು ಹಕ್ಕಿಗಳ ರೆಕ್ಕೆಗಳ ಸದ್ದು.

ಗೋಪುರ ಕಳಶದ ಮೇಲಿ
ಸೂರ್ಯ ಮೂಡಿಸಿದ ಮಿನುಗು.

ಹಾಲುಗೆನ್ನೆಯ ಹಸುಳೆ ಪರಿಮಳ
ಪುಟ್ಟ ಕಾಲ್ಗಳೆರಡು
ಎದೆ ತಟ್ಟಿದಾಗಿನ ಪುಳಕ

ಜೀವವನ್ನೆಲ್ಲಾ ಪಾದಗಳ ತುದಿಗಿಟ್ಟು
ನಿಂತಾಗ ತಬ್ಬುವ
ತೀರದ ಅಲೆಗಳ ಸಡಗರ

ಕನಸುಗಳೆಲ್ಲ ಕರಗಿ
ಕಣ್ಣೀರಾಗಿ ಹರಿದು ಹೋದಮೇಲೂ
ಉಳಿದ ತಲೆ,
ಎದೆಯ ಎಡಭಾಗದಲ್ಲಿ ಮೂಡುವ
ನೋವಿನ ಚಂದ್ರ

# ಬಾಗಿಲೊಂದೇ

ಇಲ್ಲ... ನೀನು ಬರಲಿಲ್ಲ!
ಕಟ್ಟೆ ಮೇಲಿನ ಚವ್ವಾ, ಹಗ್ಗದಾಟ
ಕುಂಟಾ ಬಿಲ್ಲೆಯಿಂದ, ರಂಗೋಲಿ
ನೀರು, ಅಡಿಗೆ ಮನೆಗೆ ಬಡ್ತಿ ಪಡೆದು
ಲಂಗಕ್ಕೊಂದು ದಾವಣಿ ಸಿಕ್ಕಿಸಿಕೊಂಡ ದಿನ
ನನ್ನ ಕಣ್ಣೊಳಗಿದ್ದ ಚಂದ್ರಮ
ನಿನ್ನ ಮನೆ ಅಂಗಳಕ್ಕೆ ಬಿದ್ದು ಗಾಯಮಾಡಿಕೊಂಡ.

ನನ್ನ ಶವಯಾತ್ರೆ ನಿನ್ನ ಮನೆಮುಂದೆ
ಹಾದು ಹೋಗುತ್ತಿದೆ ಇನ್ನೇನು
ಬಾಗಿಲಿನ ಚಿತ್ತಾರದ ಕೆತ್ತನೆಗಳಿಗೆ ಕೈಹಚ್ಚಿ
ಕಣ್ಣುಗಳಲಿ ದೀವಟಿಗೆ ಹಿಡಿದು ಕಾಯುತ್ತಿ

ಇಲ್ಲ
ಬಾಗಿಲೊಂದೇ ಒಂಟಿಯಾಗಿ ರೋದಿಸುತ್ತಿದೆ

ತುರುವೀಹಾಳ ಚಂದ್ರು.





ವಿನಯಾ

# ಕತ್ತಲೆಯ ತೆಪ್ಪ



ಪ್ರೀತಿಸುತ್ತೇನೆ ಕತ್ತಲನ್ನ
ಕತ್ತಲಲ್ಲಿ ಹೊಳೆವ ನನ್ನವನ ಕಣ್ಣನ್ನ
'ಕತ್ತಲೆಂದರೆ ಗುಮ್ಮ
ಹರಿದು ಬೀಳುತ್ತದೆ ಆಕಾಶ ಮಲಗೆ ಸುಮ್ಮ'
ಅಡಿಗೆ, ಕಸ, ಮುಸುರೆಗಳೆಲ್ಲ ಸ್ತಬ್ಧವಾಗಿ
ಯಾವ ಮೂಲೆಯ ಯಾವ ಜಾಡೂ ಕಾಣದಾಗಿ
ಕೋಣೆಯೊಂದು ಹಕ್ಕಿ ಗೂಡು.
ಹಗಲಿಡೀ ಪ್ರಶ್ನೆಗಳ ತೂರಾಡಿ
ಬಿಮ್ಮಗೆ ಬಿಗಿದ ಕಂದ
ಒಡಲಪ್ಪಿ ಮಲಗುತ್ತಾಳೆ ಸುಮ್ಮಾನದಲಿ
ನಿತ್ಯ ಸಾವಿರ ಸಂತೆಯ
ಈ ಸರದಾರ, ಕುದುರೆ ಸವಾರ
ಮಗ್ಗುಲಲಿ ಮಗುವಾಗುತ್ತಾನೆ
ಅವನ ತಾಯಂಥ ಎದೆಯೊಳಗೆ
ಜೋಗುಳವ ಕೇಳುತ್ತ, ನಾನು ಲಾಲಿ ಹಾಡುತ್ತೇನೆ.
ಬಿಡಿಸಲಾಗದು ಒಗಟುಗಳ
ಹಳೆಯ ಗಾಯಗಳ
ನೇವರಿಸುವುದೊಂದೇ ಪ್ರೀತಿಸುವ ಗುಟ್ಟು
ಬಸಿರೊಳಗೆ ಮಗುವನ್ನು ಬಚ್ಚಿಟ್ಟ ಹಾಗೆ
ಎಲ್ಲ ನನ್ನದೆ, ಬರೀ ನನ್ನದೆ
ಎಂದು ಕೊರಳುಬ್ಬಿ ಹಿಗ್ಗುವ ಹಾಗೆ
ಕತ್ತಲೆಯ ತೆಪ್ಪದಲಿ ತೊಯ್ದು
ಪ್ರೀತಿ ಮುತ್ತುಗಳ ಹೆಕ್ಕುತ್ತ
ಹೇಗೆ ಪ್ರೀತಿಸದಿರಲಿ ಕತ್ತಲೆಯ?
ಮಾತಿನ ಹಂಗಿಲ್ಲದೆ ತುಯ್ಯುವ ಎದೆಯ?





# ಎಚ್ಚರ

ಕಲ್ಲಪೊಟರೆಯ ಸಂದಿಯಲಿ
ಇಷ್ಟುದ್ದ ಕತ್ತ ಚಾಚಿ
ರೆಕ್ಕೆ ಬಿಡಿಸಿ ಮಡಿಸಿ ನೀಳವಾಗುತ್ತಿದ್ದ
ಪಾರಿವಾಳವನ್ನು ಕೇಳಿದೆ-
'ದಿನಾ ದಿನಾ ಇದೇ, ಗೂಡು, ಮೊಟ್ಟೆ, ಮರಿ
ಬೇಸರವಿಲ್ಲವೇ ನಿನಗೆ?'
ಈ ಪ್ರಶ್ನೆ ಪುರುಸೊತ್ತಿನಲಿ ಹುಟ್ಟಿದ್ದು
ಎಂಬಂತೆ ಮೆಲುವಾಗಿ ನಕ್ಕು ಹನಿ ಮಳೆಯಲ್ಲೂ
ಅದು ಹಾರಿಹೋಯಿತು.

ಯಾರದ್ದೋ ಕಾಲಿಗೆ ಸಿಕ್ಕು ಕಾಲು ಕಳಕೊಂಡರೂ
ಎದ್ದೆದ್ದೂ ಹುದ್ದರಿಯಂತೆ ಹರಿವ ಆ
ಕಟ್ಟಿರುವೆಯನ್ನು ಕೇಳಿದೆ
'ಯಾಕೆ ಗೂಡಿಲ್ಲವೇ? ಗೂಡಲ್ಲಿ ಕೂತು
ಆಳಲಿಕ್ಕಿಲ್ಲವೇ?'
ನೀಳ ಹಿಂಗಾಲುಗಳ ಎಳೆಯುತ್ತ
ಕತ್ತೆತ್ತಿ ನೋಡಿ ಅಂತು
'ದಾರದಂಥಾ ನಾಭಿ, ಸಾಸಿವೆಯಂಥಾ ಹೊಟ್ಟೆ
ತುಂಬಿದರೆ ಮತ್ತೆ ಈ ಹಳವಂಡಗಳ ಬಗ್ಗೆ
ಮಾತಾಡುವಾ.'

ನನ್ನ ಅಂಗಳದಲ್ಲೇ ಬೇರುಕಚ್ಚಿ ನಿಂತ
ತೆಂಗನ್ನೊಮ್ಮೆ ಕೇಳಿದೆ-
'ನಿನಗೆ ಬೇಸರವಿಲ್ಲವೇ?
ಹೀಗೆ ಕೆಸರಲ್ಲಿ ಕಾಲುದುಗಿಸಿ
ಗೊಮ್ಮಟನಂತೆ ದುಂಡಗೆ ನಿಂತುಬಿಡಲು?'
ಭೂಮಿಯ ಒಳಮಿಸುಗಿಗೆ ಆಕಾಶದ ಕಾತರಕ್ಕೆ
ಸಾಕ್ಷಿ ಸೇತುವೆ ಮರ ತಾ ನಿಂತ
ನಿಲುವಲ್ಲೆ ತೂಗಿ ಒಮ್ಮೆ ನೋಡಿತು.
ಅದರ ತುದಿಯ ಕಾಯಿ, ಮಿಳ್ಳೆ, ಹೂ, ಗರಿ
ತೂಗುಬಿದ್ದ ಗೀಜಗದ ಗೂಡಿನ
ಲೆಕ್ಕವನ್ನೂ ಹಾಕಲಾಗದ ನಾನು
ಉತ್ತರಕೆ ಕಾಯದೆ
ಈಚೆ ಬಂದು ಮೆತ್ತಗೆ ಒಳಸೇರಿದೆ

ಒಂದು ಹೊಳೆಯಾಗಲು
ಒಂದು ಮರವಾಗಲು
ಒಂದು ಮಣ್ಣದಿಬ್ಬವಾಗಲು
ಕಡೆಗೊಂದು ಗರಕಿಯ ಕುಡಿಯಾಗಲು

ವಿನಯಾ





## ಮಾಧವ ಕುಲಕರ್ಣಿ

# ಅದೇ ಮುಖ

ರಂಗಣ್ಣ ವೆಂಕಟರಾವ್ ಕುಲಕರ್ಣಿಯವರ ವಾರ್ಷಿಕ ಐದು ದಿನಗಳ ಗದುಗಿನ ವಾಸ್ತವ್ಯ ಮುಗಿದಿತ್ತು. ಆರ್.ವಿ. ಕುಲಕರ್ಣಿಯವರು ನೌಕರಿಯಲ್ಲಿ ಯಾವುದೇ ಊರಿನಲ್ಲಿರಲಿ, ವರ್ಷದಲ್ಲಿ ಐದು ದಿನ ತಾವು ಹುಟ್ಟಿದ ಗದುಗಿನಲ್ಲಿ ಕಳೆಯುವುದೆಂದು ಬಹಳ ವರ್ಷಗಳ ಹಿಂದೆಯೇ ನಿರ್ಧರಿಸಿಬಿಟ್ಟಿದ್ದರು. ಸದ್ಯ ಬೆಂಗಳೂರು ಶಾಖೆಯೊಂದರ ಬ್ಯಾಂಕ್ ಮೆನೇಜರ್ ಆಗಿರುವುದರಿಂದ ಗದುಗಿಗೆ ವರ್ಷಕ್ಕೊಂದು ಸಲ ಬಂದು ಹೋಗುವುದು ಅಂಥ ಕಷ್ಟದ ಕೆಲಸವಾಗಿರಲಿಲ್ಲ. ಹೊರ ರಾಜ್ಯಗಳಲ್ಲಿದ್ದಾಗಲೂ ಬಂದು ಹೋಗುತ್ತಿದ್ದವರಿಗೆ, ಈಗ ಕರ್ನಾಟಕದಲ್ಲೇ ಇರುವಾಗ ಇದೊಂದು ಭಾರವೆನ್ನಿಸುತ್ತಲಿಲ್ಲ. ಮೊದಮೊದಲಿನ ವರ್ಷಗಳಲ್ಲಿ, ತಂದೆಯದೊ, ತಾಯಿಯದೊ ವರ್ಷದ ವೈದಿಕವೊ, ಪಕ್ಷಮಾಸದಲ್ಲಿ ಮಾಡುವ 'ಪಕ್ಷ'ವೊ ನಿಮಿತ್ತವಾಗಿ, ಗದುಗಿಗೆ ಹೆಂಡತಿ-ಮಕ್ಕಳೊಡನೆ ಬಂದು, ಚಿಕ್ಕಪ್ಪನ ಮಗ ಗುರಣ್ಣನ ಮನೆಯಲ್ಲೇ ಆ ಐದು ದಿನ 'ಸತಿ'ಯಿಂದ ಕಳೆದು, ಹುಟ್ಟಿದ ಊರಿನ ಸಂಬಂಧಗಳನ್ನು ಮತ್ತೊಮ್ಮೆ ಖಚಿತಪಡಿಸಿಕೊಂಡು ಹೋಗುತ್ತಿದ್ದರು. ಮಕ್ಕಳು ದೊಡ್ಡವರಾದಂತೆ, ಅವರಿಗೆ ತಂದೆಯ ಹುಟ್ಟಿದ ಊರಿನ ವ್ಯಾಮೋಹ ಉಳಿಯಲಿಲ್ಲ. ಮಡದಿಗೆ, ತನ್ನ ಹುಟ್ಟಿದ ಊರಾದ ಬೆಳಗಾವಿಗಿಂತ ಗದುಗು ಅಷ್ಟೇನು ಆಕರ್ಷಕವಾಗಿ ತೋರಲಿಲ್ಲ. ಮೇಲಾಗಿ, ರಂಗಣ್ಣನ ತಂದೆಯದೊ, ತಾಯಿಯದೊ ತಿಥಿಯು ತಮ್ಮ ಮನೆಯಲ್ಲೇಕೆ ಎಂಬ ಪ್ರಶ್ನೆಯನ್ನು ರಂಗಣ್ಣನ ಮಡದಿ ಪ್ರಾರಂಭದಲ್ಲಿ ಪರೋಕ್ಷವಾಗಿ ಮತ್ತು ನಂತರದಲ್ಲಿ ಪ್ರತ್ಯಕ್ಷವಾಗಿಯೇ ಎತ್ತಿದುದರಿಂದ ಗುರಣ್ಣನ ಮನೆಯಿಂದ ವಾರ್ಷಿಕ ವಾಸ್ತವ್ಯವನ್ನು ಗದುಗಿನ ಲಾಜಿಂಗಿಗೆ ರಂಗಣ್ಣನವರು ಇತ್ತೀಚಿನ ವರ್ಷಗಳಲ್ಲಿ ಬದಲಾಯಿಸಿದ್ದರು. ಶ್ರಾದ್ಧ-ಪಕ್ಷಗಳ ಹಂಗು ಇರದ್ದರಿಂದ ಅವುಗಳ ಕಾಲ ಮಿತಿಯಲ್ಲೇ ಗದುಗಿಗೆ ಬರಬೇಕೆಂಬ ನಿರ್ಬಂಧವೂ ಕಳಚಿ ಬಿದ್ದಿತ್ತು. ಎಂ.ಬಿ.ಬಿ.ಎಸ್‌ನ್ನು ಬೆಂಗಳೂರಲ್ಲೇ ಓದುತ್ತಿರುವ ಮಗಳು, ಬಿ.ಇ.ಯನ್ನು ಚಿತ್ರದುರ್ಗದಲ್ಲಿ ಮುಗಿಸುತ್ತಿರುವ ಮಗ-ಇವರಂತೂ ತಂದೆಯ ಹುಟ್ಟಿದೂರನ್ನು ಕಾಣದೆ ಹಲವಾರು ವರ್ಷಗಳೇ ಸಂದವು. ಮಡದಿ ಮಾತ್ರ, ಬಂದೊಡನೆ, ಹುಬ್ಬಳ್ಳಿಯಲ್ಲೇ ರಂಗಣ್ಣನವರನ್ನು ಗದುಗಿನ ಗಾಡಿ

ಹೆತ್ತಿಸಿ, ತಾವು ಬೆಳಗಾವಿಯ ಸೂಪರ್ ಡಿಲಕ್ಸ್ ಬಸ್ ಹತ್ತುವುದು ವಾರ್ಷಿಕ ವಾಡಿಕೆಯಾಯಿತು. ಆದರೆ ರಂಗಣ್ಣನವರ ಹುಟ್ಟಿದೂರಿನ ವಾರ್ಷಿಕ ಯಾತ್ರೆ ಮಾತ್ರ ತಪ್ಪದೇ ನಡೆಯುತ್ತ ಬಂದಿತ್ತು. ಗುರಣ್ಣನ ಮನೆಗೆ ಭೇಟಿಕೊಟ್ಟಾಗಲೆಲ್ಲ, ಒಂದೊ ಅವನ ಮಡದಿಗೆ ಆರಾಮ ಇರುತ್ತಿರಲಿಲ್ಲ, ಇಲ್ಲ ಮರುದಿನವೇ ಅವಳು ತನ್ನ ಹೊಸಪೇಟೆಯ ತವರುಮನೆಗೆ ಹೋಗಬೇಕಾಗಿರುತ್ತಿತ್ತು ಅಥವಾ ಇನ್ನೇನೊ ಇಂಥದೇ ಕಾರಣದಿಂದಾಗಿ ಅಲ್ಲಿ ಮತ್ತೆ ಉಳಿದಾರು ಎಂಬ ಅಂಶವನ್ನು ಕಿತ್ತು ಹಾಕಲಾಗುತ್ತಿತ್ತು. ಐದು ದಿನಗಳ ವಾಸ್ತವ್ಯದಲ್ಲಿ, ಕೊನೆಯ ಘಟ್ಟ ಹುಬ್ಬಳ್ಳಿಯಲ್ಲಿ ಕೆಲವು ಗಂಟೆಗಳನ್ನು ಕಳೆಯುವುದೂ ವಾಡಿಕೆಯಾಗಿತ್ತು. ಅಲ್ಲಿ ಗುರಣ್ಣನ ಅಕ್ಕ ಬಕುಲಾ ಇದ್ದಾಳೆ. ಅವಳ ಗಂಡ



ಮನೋಹರರಾಯರು ಹುಬ್ಬಳ್ಳಿಯ ಬಸ್ ಸ್ಟ್ಯಾಂಡಿನ ಇನ್‌ಚಾರ್ಜ್ ಇದ್ದು, ರಂಗಣ್ಣನಿಗಿಂತ ವಯಸ್ಸಾದವರು. ಅವರಿಗೆ ಮಕ್ಕಳಿಲ್ಲದ್ದರಿಂದ ಅವರಿವರನ್ನು 'ಹಚ್ಚಿ'ಕೊಂಡು, ಆಗೀಗ, ಅದಿದರಲ್ಲಿ ತೊಡಗಿಸಿಕೊಂಡಿರುತ್ತಿದ್ದರು. ಬಕುಲಾನನ್ನು ಒಮ್ಮೆ ನೋಡಿ, ಬಾಲ್ಯದ ಸುದ್ದಿಗಳಲ್ಲಿ ಕೆಲವನ್ನಾದರೂ ಹಂಚಿಕೊಂಡು, ಹುಬ್ಬಳ್ಳಿಯಿಂದ ತಮ್ಮ ನೌಕರಿಯ ಠಾಣ್ಯಕ್ಕೆ ಗಾಡಿಯನ್ನೇರಿದರ ರಂಗಣ್ಣನವರಿಗೆ ಮುಂದಿನ ಪ್ರಯಾಣದಲ್ಲಿ ಏನೋ ಒಂದು ಸಮಾಧಾನ. ಗುರಣ್ಣ ಮತ್ತು ಬಕುಲಾ ಹುಟ್ಟಿದೂರಿಗೆ ಸಮೀಪದವರಾದುದರಿಂದ ಗುರುತಿನ ಮನೆತನಗಳ, ಹಳೆಯ ಸ್ನೇಹಿತರ ಸಮಾಚಾರಗಳೆಲ್ಲಾ ರಂಗಣ್ಣನವರಿಗೆ ಅವರಿಂದ ತಿಳಿಯುತ್ತಿದ್ದವು.

ಈ ಹಲವಾರು ವರ್ಷಗಳಲ್ಲಿ ರಂಗಣ್ಣನವರು ತಮ್ಮನ್ನೇನೇ ಹಲವಾರು ಸಲ ಪ್ರಶ್ನಿಸಿಕೊಂಡಿದ್ದಾರೆ -ಈ ವಾರ್ಷಿಕ ದ್ರವಿಡ ಪ್ರಾಣಾಯಾಮ ಬೇಕೆ? ಯಾರಿಗಾಗಿ ಹುಟ್ಟಿದೂರಿನ ಈ ಪ್ರಯಾಣ? ಗುರಣ್ಣ ಮೊದಲಿನಷ್ಟು ಸದರವಾಗಿ ಮಾತನಾಡುವುದಿಲ್ಲ. ಅವನ ಹೆಂಡತಿಗಂತೂ ತನ್ನ ಗಂಡನಿಗೆ ರಂಗಣ್ಣನವರು ಹಿಂದೆ ಮಾಡಿರಬಹುದಾದ ಸಹಾಯದ ಅಡಿಯಲ್ಲಿ ಎಲ್ಲಿ ತಮ್ಮನ್ನೆಲ್ಲಾ ಹೂತುಬಿಡುತ್ತಾರೋ ಎಂಬ ಕಾಯಂ ಹೆದರಿಕೆಯ ಧೋರಣೆ ಬೇರೆ. ಇನ್ನು ಬಕುಲಾಳಿಗಂತೂ ಮನೋಹರರಾಯರ ಊಟದ ರುಚಿಯೇ ತನ್ನ ರುಚಿ, ಅವರ ಆಸಕ್ತಿಗಳೇ ತನ್ನ ಆಸಕ್ತಿಗಳು, ಅವರ ಜೀವನ ಧೋರಣೆಯೇ ತನ್ನ ಜೀವನ ಧೋರಣೆಯೇ ಎಂಬಂತಾಗಿಬಿಟ್ಟದೆ. ತಾನು, ಗುರಣ್ಣ, ವಕೀಲ ಚಾಳಿನ ಹಳೆಯ ಗದುಗಿನ ಮನೆಯಲ್ಲಿ ಆಡಿ ಬೆಳೆದು ದೊಡ್ಡವರಾಗುತ್ತಿದ್ದಾಗ ನಡೆದ ಘಟನೆಗಳ ನೆನಪಿನ ಮಾಲೆಗಳು ಬಕುಲಾಳಲ್ಲಿ ಈಗ ಹೊತ್ತಿಕೊಳ್ಳಬೇಕಾದರೆ, ಅದು ರಂಗಣ್ಣನ ಈ ವಾರ್ಷಿಕ ಭೇಟಿಯ ಕೆಲವು ಗಂಟೆಗಳಲ್ಲೇ ನಡೆಯಬೇಕು. ಪ್ರಾಯಶಃ ಅವಳಿಗೂ, ಈ ಕೆಲ ಗಂಟೆಗಳೇ ಮುಂದೆ ಹಲವಾರು ತಿಂಗಳವರೆಗೆ ರಂಗಣ್ಣನಿಗೆ ಕೆಲವೊಂದು ಪತ್ರಗಳನ್ನು ಬರೆಯಲು ಪ್ರೇರೆಪಿಸುತ್ತವೆಂತಲೂ ಗೊತ್ತಿರಬಹುದು. ಗುರಣ್ಣನಿಗೂ ಅಷ್ಟೆ. ಮರೆಯಲು ಪ್ರಯತ್ನಿಸುವ ಮತ್ತು ಬೇಕೆಂತಲೇ ಮರೆತ ಹಲವಾರು ವಿಷಯಗಳು ರಂಗಣ್ಣನ ಈ ವಾರ್ಷಿಕ ಭೇಟಿಯ ಕಾಲದಲ್ಲಿ ಮತ್ತೆ ನೆನಪಿನಂಗಳಕ್ಕೆ ಬರುತ್ತವೆಂದು ಅವನಿಗೂ ಗೊತ್ತು. ಆದರೆ ಇದೆಲ್ಲವನ್ನೂ ಕುರಿತು ಬಕುಲಾಳಷ್ಟು ಖಚಿತವಾಗಿ ಎಂದೂ ಯೋಚಿಸಿದವನಲ್ಲ ಗುರಣ್ಣ. ತಾನಾಯಿತು ತನ್ನ ಸರಕಾರಿ ಗ್ರಾಮೋದ್ಯೋಗದ ನೌಕರಿಯಾಯಿತು. ಇರುವ ಎರಡು ಹೆಣ್ಣು ಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸಿ, ಮದುವೆ ಮಾಡಿದರೆ ಮುಗಿಯಿತು. ರಂಗಣ್ಣನವರ ಹೆಚ್ಚಿನ ಸ್ನೇಹಿತರು, ಸಹಪಾಠಿಗಳು ಅವರಂತೆಯೇ ಊರುಬಿಟ್ಟು ಹೊರಟುಹೋಗಿದ್ದರು. ತೀರ ಆತ್ಮೀಯರಾದ ಒಬ್ಬಿಬ್ಬರು ಉಳಿದಿದ್ದರೂ, ಅವರೂ, ಗುರಣ್ಣನಂತೆ ನೌಕರಿ, ಸಂಸಾರ, ನೀರಿನ ಅಭಾವ ಇತ್ಯಾದಿಗಳ ಒತ್ತಡಕ್ಕೆ ಸಿಲುಕಿ ನಲುಗಿಹೋಗಿದ್ದರು. ಅಥವಾ, ಹೊರಗಿನ ಜಗತ್ತು ಗದುಗಿನ ಜಗತ್ತಿಗಿಂತ ಯಾವೊತ್ತೂ ಬಹುಸುಂದರ ಎಂಬ ಖಚಿತ ನಿರೀಕ್ಷೆಯ ಆಸೆಗಳನ್ನು ಹೊತ್ತು ಬದುಕಿದ್ದರು. ಇಂಥ ಕಡೆ ರಂಗಣ್ಣನವರು ಬಂದು, ಲಾಜಿಂಗ್‌ನಲ್ಲಿ ಉಳಿದುಕೊಂಡು, ಆ ಒಬ್ಬಿಬ್ಬರು ಪರಿಚಯದವರನ್ನು ಕಂಡು, ತಾವು ಕಲಿತ ಶಾಲೆಗಳಲ್ಲಿ ಒಬ್ಬರೇ ಓಡಾಡಿ, ಆಡಿದ ಸ್ಥಳಗಳಲ್ಲಿ ಕುಳಿತು, ಯಾರಿಗೂ ಗೊತ್ತಾಗದಂತೆ ಹಿಂದೆ ಹೋದ ಹೋಟೆಲ್‌ಗಳಿಗೇ ನುಸುಳಿ, ಅಲ್ಲಿಯ ಕೊಳಕಾದ ತಿಂಡಿ-ಚಹಾಗಳನ್ನೇ ಸೇವಿಸಿ, ಅದರಲ್ಲಿಯೇ ಆಪ್ಯಾಯಮಾನವಾದ ಸಂತೋಷವನ್ನು ಕಾಣುತ್ತಿದ್ದುದರ ಹಿಂದಿನ ಗುಟ್ಟೇನು ಎಂಬುದನ್ನು ಕೆದಕಿ ನೋಡಲು ಹಲವಾರು ಸಲ ಪ್ರಯತ್ನಪಟ್ಟು



ಖುತ

ವಿಫಲರಾಗಿದ್ದರು. ತಮ್ಮ ಜೀವನದಲ್ಲಿ ಸಾಹಿತ್ಯಾಭಿಮಾನದಿಂದ ಬರೆದ ನಾಲ್ಕಾರು ಕತೆಗಳಿಗೆ ಇನ್ನೊಂದು ಕತೆಯನ್ನು ಜೋಡಿಸುವ ಪ್ರಯತ್ನ ಇದು ಇರಬಹುದೆ ಎಂದು ಕೂಡ ಕೇಳಿಕೊಂಡಿದ್ದಾರೆ. ಆದರೆ ಈ ಅಂತರಂಗದ ಪ್ರಶ್ನೆಯನ್ನು ಯಾರೊಡನೆಯೂ ಹೇಳಿಕೊಂಡಿರಲಿಲ್ಲ. ಕೇಳಿದರೆ ನಕ್ಕಾರೆಂಬ ಭಯ. ಹೆಂಡತಿಯಂತೂ ಮರಾಠಿಯಲ್ಲೇ ನಕ್ಕಾಳು! ಎಷ್ಟೋ ವರ್ಷಕ್ಕೊಂದು ಬರೆದ ಕತೆಗಳಿಗೆ, ರಂಗಣ್ಣನವರ ಅಂತರಂಗದಲ್ಲಿ, ಹಕ್ಕಿಗಳು ಗೂಡುಕಟ್ಟಿದಷ್ಟೇ ಆದರವಿದ್ದರೂ ಮನೆಯಲ್ಲಿ ಅವುಗಳನ್ನು ಓದಿದವರಿಲ್ಲ, ಮನೆಯ ಹೊರಗೆ ಅವುಗಳನ್ನು ಓದಿ ನೆನಪಿಟ್ಟವರಿಲ್ಲ. ಹೀಗಾಗಿ, ಅಂಥ ಇನ್ನೊಂದು ಕತೆಯ ಹುಡುಕಾಟಕ್ಕೆ ಹುಟ್ಟೂರಿನ ಈ ವಾರ್ಷಿಕ ಪ್ರಯಾಣ ಎಂದರೆ ಯಾರಾದರೂ ರಂಗಣ್ಣನವರನ್ನು ಸಂಶಯದಿಂದಲೇ ಕಂಡಾರು. ನೋಟುಗಳನ್ನು ಎಣಿಸಿಯೊ, ಲೆಕ್ಕಗಳನ್ನು ಸರಿಪಡಿಸಿಯೊ ದಣಿದ ಮನಸ್ಸಿಗೆ, ಗದುಗಿನ ತೋಂಟದಾರ್ಯಮಠದ ಎದುರಿನ ಮಿರ್ಚಿ ಭಜಿಗಳು, ಮಹಡಿ ಚಹಾದಂಗಡಿಯ ಕುರುಕಲು ದೋಸೆಗಳು, ಕಾಮತ್ ಹೋಟೆಲಿನ ಇಡ್ಡಲಿಗಳು, ಮಹೇಂದ್ರಕರ ಸರ್ಕಲ್ಲಿನಲ್ಲಿ ಸಿಗುವ ತೇರದಾಳದ ಚಪ್ಪಲಿಗಳು, ಹಿಂದೆ ನಡೆಯುತ್ತಿದ್ದ ಅಖಿಲಭಾರತ ಹಾಕಿ ಆಟದಲ್ಲಿ ಭಾರತೀಯ ಒಲಂಪಿಕ್ ತಂಡದ ಮೇಲೆ ಗೋಲು ಹೊಡೆದ ಘಟಾನುಘಟಿ ಹಾಕಿ ಆಟಗಾರರು ಮನಸ್ಸಿಗೆ ಮುದಕೊಡುತ್ತಾರೆಂಬ ಸಂಗತಿಯನ್ನು ಮಾತ್ರ ರಂಗಣ್ಣ ತನ್ನ ಜೀವನದಲ್ಲಿ ಕಷ್ಟಪಟ್ಟು ಉಳಿಸಿಕೊಂಡು ಬಂದ ಠೇವಣಿ ಎಂದೇ ಭಾವಿಸಿದ್ದಾರೆ. ಯಾರೊಡನೆಯೂ ಹಂಚಿಕೊಳ್ಳಲಾಗದ ಈ ಭಾವನೆಗಳನ್ನು ತನ್ನೊಡನೆ ಪ್ರಾರಂಭದಲ್ಲಿ ಬದುಕಿದ ಕೆಲವೇ ಜನರೊಡನಲ್ಲವೆ ಹಂಚಿಕೊಳ್ಳುವುದು! ಇದಕ್ಕೆಲ್ಲಾ ಕಥೆ, ಕವನಗಳ ರೂಪ ಕೊಟ್ಟರೆ ಗದುಗಿನಲ್ಲೇ ನೆಲೆಯೂರಿದ ಬಾಲ್ಯ ಸ್ನೇಹಿತರಾದ ಕುಂದಗೋಳ ಮಾಸ್ತರಾಗಲಿ, ಮೊನ್ನೆ ಮೊನ್ನೆ ಸತ್ತ ಡ್ರಾಯಿಂಗ ಮಾಸ್ತರರಾಗಿದ್ದ ದೇಸಾಯಿಯವರಾಗಲಿ, ಹೊಲಮನಿ ಅಂತ ಓಡಾಡುವ ಅಂಗಡಿ ಕಳಶಪ್ಪನಾಗಲಿ ಅದರ ತಲೆಬುಡ ಅರ್ಥವಾಗದೆ ಒದ್ದಾಡಬಹುದು. ನೆನಪುಗಳು, ವಸ್ತುಗಳು ಮತ್ತು ಜನರು ಹೀಂಗ ತಳಕಿ ಹಾಕ್ಕೊಂಡಿರತಾವೆಂದರೆ ಅವರು ನಂಬುವುದಿಲ್ಲ. ಏಕೆಂದರೆ ಅವರಿಗೆ ತಮ್ಮ ಸುತ್ತಲಿನ ಬದುಕು ಎಂದೆಂದಿಗೂ ಕೇವಲ ನೆನಪಲ್ಲ. ಪ್ರತ್ಯಕ್ಷ ವಾಸ್ತವ.

ಕಳೆದ ಸಾರಿಯಂತೆಯೇ ರಂಗಣ್ಣ ಎಲ್ಲರನ್ನೂ ಭೇಟಿಯಾಗಿದ್ದರು, ಒಬ್ಬರೇ ಸಂದಿಗೊಂದಿಗಳಲ್ಲಿ ಓಡಾಡಿದ್ದರು, ವಕೀಲಚಾಳಿನ ಕಳಸದ ಬಂಗಲೆಯ ಸುತ್ತಲೂ ಕಳೆದ ಬಾಲ್ಯದ ಸ್ಥಳಗಳನ್ನು ಮತ್ತು ಅಂಗಡಿಗಳನ್ನು ಸಂದರ್ಶಿಸಿದ್ದರು. ತಂದೆ ಕೆಲಸ ಮಾಡಿದ ಮುನಸಿಪಲ್ ಹೈಸ್ಕೂಲಿನ ಕಟ್ಟಡ ಮತ್ತು ಅದರ ಮೈದಾನವನ್ನು ಎರಡೆರಡು ಸಲ ಸುತ್ತಿ ಬಂದರು. ಮುಳುಗುಂದ ಜಕಾತಿಕಟ್ಟೆಯ ಬಳಿಯ ಲಾಜಿಂಗ್‌ನಿಂದ ಗುರಣ್ಣನ ಮನೆ ದೂರವೆ. ಆದರೂ ರಿಕ್ಷಾದಲ್ಲಿ ಎರಡು ಮೂರು ಸಲ ಹೋಗಿ ಬಂದಿದ್ದರು. ಹೊರಡುವ ಹಿಂದಿನ ದಿನ ಹೋದಾಗಲೂ, ಅಲ್ಲಿ ಮೊದಲಿನ ಆತ್ಮೀಯತೆ ಇಲ್ಲವೆಂಬುದು ಖಚಿತವಾಯಿತು. ಇಂಥ ಸಲ್ಲದ ಸಂಬಂಧಗಳನ್ನು ಹುಡುಕಿಕೊಂಡು

ಹೋಗುವುದೇತಕ್ಕೆ ಎಂದು ಚಿಂತಿಸಿ, ಕಹಿ ಚಹ ಕುಡಿದು ಅಲ್ಲಿಂದ ಬಂದಿದ್ದರು. ಬಾಯಿತುಂಬ ಉಪಚಾರದ ಮಾತುಗಳಿದ್ದರೂ, 'ಊಟಕ್ಕೆ ಉಳಿಯಿರಿ' ಎಂಬ ಮಾತೊಂದನ್ನುಳಿದು ಎಲ್ಲ ಮಾತುಗಳೂ ಬಂದಿದ್ದವು. ಗುರಣ್ಣ ಮಾತ್ರ, ಎಲ್ಲಿ ತನ್ನ ಮೇಲೆ ಇಲ್ಲದ ಗುನ್ಹೆಯ ಆರೋಪ ಬರುತ್ತದೊ ಎಂಬಂತೆ, ವಿನಾಕಾರಣ ಸೊಟ್ಟ ಮುಖ ಮಾಡಿ ಕುಳಿತಿದ್ದ. ಶಾಲೆಗೆ ಹೊರಟಿದ್ದ ಆತನ ಮಕ್ಕಳು ರಂಗಣ್ಣನನ್ನು ಕಣ್ಣೆತ್ತಿ ಕೂಡ ನೋಡಲಿಲ್ಲ.

ರಂಗಣ್ಣನಿಗೆ ಗದುಗಿನಿಂದ ಹುಬ್ಬಳ್ಳಿಗೆ ಬಸ್‌ನಲ್ಲಿ ಹೋಗುವುದೇನು ಕಷ್ಟವಲ್ಲ. ಈಗೇನು ಬೇಕಾದಷ್ಟು ಒಳ್ಳೆಯ ಬಸ್ಸುಗಳು ಓಡಾಡುತ್ತವೆ. ಆದರೆ ರೈಲ್ವೆ ಸ್ಟೇಷನ್ನು ವಕೀಲಚಾಳಿಗೆ ಸಮೀಪವಾದ ಭಾಗ. ಹೀಗಾಗಿ, ಬಾಲ್ಯದಲ್ಲಿ ಹೊತ್ತು ಕಳೆಯಲು ಸೂಟಿಯಲ್ಲಿ ಸ್ನೇಹಿತರೊಡನೆ ಪದೇ ಪದೇ ಕಂಡ ಸ್ಥಳ. ಹಲವಾರು ನೆನಪುಗಳು ರೈಲ್ವೆಸ್ಟೇಷನ್ನಿನೊಡನೆ ಹೊಂದಿಕೊಂಡಿವೆ. ಸ್ಟೇಷನ್ನಿಗೆ ಬರುವಾಗ ಹನುಮಂತದೇವರ ಗುಡಿಯೊಂದಿದೆ. ರೇಲ್ವೆ ಹನುಮಪ್ಪನೆಂದೇ ಪ್ರಸಿದ್ಧ ಆ ಗುಡಿ. ಇಡೀ ಮನೆತನದ ನೆನಪುಗಳೇ ಆ ಗುಡಿಯೊಂದಿಗೆ ತಾದಾತ್ಮ್ಯ ಹೊಂದಿವೆ. ಹೀಗಾಗಿ ಮುಳುಗುಂದ ಜಕಾತಿಕಟ್ಟೆ ಊರಿನ ಒಂದು ತುದಿ ಮತ್ತು ರೇಲ್ವೆ ಸ್ಟೇಷನ್ನು ಇನ್ನೊಂದು ತುದಿಯಾದರೂ, ರಿಕ್ಷಾ ಹಿಡಿದು ಸ್ಟೇಶನ್ನಿಗೇ ಹೊರಟರು. ಅಲ್ಲದೆ ಬೆಂಗಳೂರಿನಂಥ ದೊಡ್ಡ ಊರಿನಲ್ಲಿ ಬದುಕಿದವರಿಗೆ ಇದಾವ ಮಹಾ ದೂರ! ಸ್ಟೇಶನ್ನು ಹೆಚ್ಚು ಬದಲಾಗಿರಲಿಲ್ಲ. ಆದರೆ ಜನರ ಮುಖಗಳು ಮಾತ್ರ ಹೊಸವು. ಹಿಂದೆ ಇಲ್ಲಿ ಮಾಲ್ಯಾ ಎಂಬ ದೋಸ್ತ ಚಹಾ ಮಾರುತ್ತಿದ್ದ. ಅವನು ಒಮ್ಮೊಮ್ಮೆ ಬೇರೆ ಸ್ಟೇಶನ್ನಿನಲ್ಲಿ ಠಿಕಾಣಿ ಹೂಡಿ, ಅಲ್ಲೇ ಚಹಾ ಮಾರುತ್ತಾನೆಂದು ಯಾರೋ ಹೇಳಿದ್ದರು. ಬಹಳ ವರ್ಷಗಳಾದ್ದರಿಂದ, ಅವನು ಚಹಾ ಮಾರು ತ್ತಿದ್ದರೂ ಅವನ ಮುಖದ ಚಹರೆಯ ಗುರುತು ಸಿಗಲಿಕ್ಕಿಲ್ಲ ಎನ್ನಿಸಿತು. ಆದರೂ ಅಲ್ಲೇ ಚಹಾ ಮಾರುತ್ತಿದ್ದ. ಒಬ್ಬ ಹುಡುಗನ ಬಳಿ ಚಹಾ ತೆಗೆದುಕೊಂಡು, ''ಇಲ್ಲೆ ಮಾಲ್ಯಾ ಅಂತ ಒಬ್ಬ ಚಹಾ ಮಾರುತ್ತಿದ್ದ. ಅಂವಾ ಈಗ ಎಲ್ಲಿದಾನ ಗೊತ್ತೇನೊ ತಮ್ಮಾ?'' ಎಂದು ಊರಿನ ಶುದ್ಧ ಭಾಷೆಯಲ್ಲೇ ರಂಗಣ್ಣನವರು ಕೇಳಿದರು.

''ಮಾಲಣ್ಣವರೇನ್ರಿ? ಅವರದು ಅಲ್ಲಿಗೇರಿ ಸ್ಟೇಶನ್ನದಾಗ ಈಗ ದೊಡ್ಡ ಕ್ಯಾಂಟೀನೈತ್ರಿ....'' ಎಂದು ಪ್ಲಾಸ್ಟಿಕ್ ಕಪ್‌ನಲ್ಲಿ ಬಿಸಿ ಚಹಾ ಕೊಟ್ಟು ಹುಡುಗ ಹೊರಟುಹೋದ. ರೈಲು ಬರಲು ಇನ್ನು ಕೆಲವೇ ನಿಮಿಷಗಳಿದ್ದವು. ಹಳ್ಳಿಯ ಜನ ಲೋಕಲ್ ಟ್ರೇನಿಗೆ ಹುಬ್ಬಳ್ಳಿಗೆ ಹೊರಟಿದ್ದರು. ಗುರುತಿನ ಮುಖಗಳಾವವೂ ಕಾಣಲಿಲ್ಲ. ರೈಲು ಬಂದೊಡನೆ, ಕಿಟಕಿಯೊಂದನ್ನು ಹುಡುಕಿ ಕೊಂಡು, ತಮ್ಮ ಪುಟ್ಟ ಸೂಟ್‌ಕೇಸನ್ನು ಮೇಲಿಟ್ಟು, ಸುಮಾರು ಎಂಭತ್ತು-ನೂರು ವರುಷಗಳ ಹಿಂದೆ ಕಟ್ಟಿರಬಹುದಾದ ಆ ಕೆಂಪು ಬೋಗಿಯಲ್ಲಿ ಕುಳಿತರು. ಹಿಂದೆ ಊರಲ್ಲಿದ್ದಾಗ, ಲೋಕಲ್ ಟ್ರೇನಿನ ಬೋಗಿಗಳನ್ನು ಕಟ್ಟಿದ ದಿನಾಂಕವನ್ನು ಮುದ್ರಿಸಿದ ಕಬ್ಬಿಣದ ಬಿಲ್ಲೆಗಳನ್ನು ಓದುತ್ತಿದ್ದರು. ಅವು ಸುಮಾರು ನೂರು ವರ್ಷ ಹಳೆಯವೇ ಆಗಿರುತ್ತಿದ್ದವು. ಗದಗು ಜಂಕ್ಷನ್. ಹೀಗಾಗಿ ಸ್ವಲ್ಪ ಹೆಚ್ಚು ಸಮಯ ನಿಂತು ರೈಲು ಚಲಿಸಲಾರಂಭಿಸಿತು. ಸುತ್ತಲೂ ಬೀಡಿ ಸೇದು ವವರು, ಎಲೆ ಅಡಿಕೆ ಹಾಕಿ ಕಿಟಕಿಯಿಂದ ಉಗಿಯುವವರು, ಬುಟ್ಟಿ ಅಡ್ಡ ಇಟ್ಟು ಕುಳಿತ ವರು. ರೈಲಿನ ಶಬ್ದ ಕಿವಿಗೆ ಆತ್ಮೀಯವೆನ್ನಿಸಿತು. ಕಿಟಕಿಯ ಹೊರಗಿನ ಬಯಲುಸೀಮೆಯ ದೃಶ್ಯ ಎಷ್ಟೋ ಸಲ ನೋಡಿದ್ದಾಗಿದ್ದರೂ, ಯಾವು ದಾದ ಮೇಲೆ ಯಾವುದು ಬರುತ್ತದೆಂದು ಮನಸ್ಸು ತನಗರಿವಿಲ್ಲದಂತೆಯೇ ಹೇಳಿಕೊಳ್ಳ ತೊಡಗಿತ್ತು.

ಹುಲಿಕೋಟಿ ಸ್ಟೇಶನ್ ಬಂದಿತು. ಕೆಲವರು ಇಳಿದರು, ಕೆಲವರು ಹತ್ತಿದರು. ಆ ಕಡೆಯಿಂದ-ಅಂದರೆ ಹುಬ್ಬಳ್ಳಿ ಕಡೆಯಿಂದ-ಬಂದ ರೈಲೊಂದು ಆಗಲೇ ಬಂದು ನಿಂತಿತ್ತು. ಕ್ರಾಸಿಂಗ್‌ಗಾಗಿ ಕಾಯುತ್ತಿತ್ತು. ಈ ಗಾಡಿ ಬಂದಿರುವುದರಿಂದ ಲೈನ್ ಕ್ಲಿಯರ್ ಆಗಿ ಎರಡೂ ಹೊರಡಬೇಕು. ಇದೇ ಸಮಯದಲ್ಲೇ, ರಂಗಣ್ಣ ಕಂಡು ಕೇಳರಿಯದ ಮತ್ತು ನಿರೀಕ್ಷಿಸಿರದ ಘಟನೆಯು ನಡೆಯಿತು. ರಂಗಣ್ಣ ತನ್ನ ಕಿಟಕ್ಕಿಯಿಂದ, ಪಕ್ಕದಲ್ಲಿ ನಿಂತಿದ್ದ ರೈಲಿನಲ್ಲಿರುವ ಜನರನ್ನು ನೋಡತೊಡಗಿದರು. ಅಲ್ಲಿ ಇಲ್ಲಿಗಿಂತ ಜನಸಂದಣಿ ಕಡಿಮೆ. ಫಕ್ಕನೆ ಅವರ ದೃಷ್ಟಿಯು ತನ್ನ ಎದುರಿನ ಆ ಬೋಗಿಯ ಕಿಟಕಿಯಲ್ಲಿ ಕುಳಿತ ವ್ಯಕ್ತಿಯೆಡೆಗೆ ಹೋಯಿತು. ಆ ವ್ಯಕ್ತಿಯು ಕೈಯಲ್ಲೊಂದು ಪೇಪರನ್ನು ಹಿಡಿದಿದ್ದರೂ ಇವರನ್ನೇ ನೋಡತೊಡಗಿತ್ತು. ಅದೇ ಕರಿ ಟೊಪ್ಪಿಗೆ, ಕೊನೆಗೆ ಹೊಲಿಸಿದ ಕೋಟು, ನೀಲವರ್ಣದ ಚಿಕ್ಕ ಚಿಕ್ಕ ಕಣ್ಣುಗಳು, ಪೂರ್ತಿ ನೆರೆತ ಕೂದಲುಗಳು, ಸ್ವಲ್ಪ ಬಾಗಿದ ಬೆನ್ನು, ಸಿಡುಬಿನ ಕಲೆಗಳ ಮುಖ, ಬಿಳಿಯ ವರ್ಣ, ಕಂದು ಬಣ್ಣದ ಕಟ್ಟಿನ ಕನ್ನಡಕ! ರಂಗಣ್ಣನವರು ಕಣ್ಣು ತಿಕ್ಕಿಕೊಂಡು ನೋಡಿದರು. ಹೌದು ಅವರೆ! ಎರಡೂ ರೈಲುಗಳೂ ಸಿಳ್ಳೆ ಹಾಕಿದವು. ರಂಗಣ್ಣ ಕೈ ಬೀಸಿದರು. ಪೂರ್ವಾಪರ, ಭೂತ-ವರ್ತಮಾನಗಳು ಕಲಸಿಹೋಗಿ, ಒಂದು ಕ್ಷಣ ಕಾಲವೇ ನಿಂತುಬಿಟ್ಟಂಥ ಘಳಿಗೆ. ಆ ರೈಲು ಚಲಿಸಲು ಪ್ರಾರಂಭಿಸಿತು. ಮತ್ತೆ ಕೈಬೀಸಿದರು. ಆ ವ್ಯಕ್ತಿಯಿಂದ ಯಾವುದೇ ಪ್ರತಿಕ್ರಿಯೆ ಇಲ್ಲ.

''ಅಪ್ಪಾ!'' ಎಂದು ಚಿಕ್ಕಮಕ್ಕಳಂತೆ ರಂಗಣ್ಣ ಕೂಗಿದರು. ಆ ವ್ಯಕ್ತಿ ಇವರನ್ನು ನೋಡುತ್ತಿತ್ತೆ ಹೊರತು ಯಾವುದೇ ಪ್ರತಿಕ್ರಿಯೆ ವ್ಯಕ್ತ ಪಡಿಸಲಿಲ್ಲ. ರೈಲು ನಿಧಾನಕ್ಕೆ ಸರಿಯುತೊಡಗಿತು. ಆ ಕಿಟಕಿ ಮೊದಲು ಸರಿದು, ಇವರ ರೈಲು ಇನ್ನೂ ಸ್ತಬ್ಧವಾಗಿತ್ತು. ಕಣ್ಮರೆಯಾಗುವವರೆಗೂ ನೋಡಿದರು. ನಂತರ ಎದ್ದು, ಓಡಿ ಹೋಗಿ ಬಾಗಿಲ ಬಳಿ ನಿಂತು, ಕೈಬೀಸತೊಡಗಿದರು. ಯಾವುದೇ ಪ್ರತಿಕ್ರಿಯೆ ಇಲ್ಲ. ಅದೇ ಘಳಿಗೆಯಲ್ಲಿ ಇವರ ರೈಲು ಕೂಡ ವಿರುದ್ಧ ದಿಶೆಯಲ್ಲಿ ಚಲಿಸಲು ಪ್ರಾರಂಭಿಸಿತು. ರಂಗಣ್ಣನವರ ಕಣ್ಣಿಂದ ಧಾರಾಕಾರವಾಗಿ ಕಣ್ಣೀರು ಇಳಿಯತೊಡಗಿತ್ತು. ಅದೇ ಸ್ಥಿತಿಯಲ್ಲಿ ಅವರು ನಿಧಾನಕ್ಕೆ ನಡೆಯುತ್ತ, ತನಗೆ ಎಚ್ಚರ ತಪ್ಪಬಾರದೆಂಬ ಅರಿವಿನಿಂದ ಬಂದು, ತಮ್ಮ ಕಿಟಕಿಯ ಸೀಟಿನಲ್ಲಿ ಕುಳಿತರು. ಆ ಬೋಗಿಯಲ್ಲಿದ್ದ ಎಲ್ಲರೂ ಅವರ ಈ ಸ್ಥಿತಿಯನ್ನು ನೋಡುತ್ತಿದ್ದರು. ಅವರ ಪಕ್ಕದಲ್ಲಿ ಕುಳಿತ ರೈತನು, ''ಏನಾರ ಕಿಮ್ಮತ್ತಿನ ಸಾಮಾನು ಕೆಳಗ ಬಿತ್ತೇನ್ರಿ?'' ಎಂದು ಕೇಳಿದ. ಇಹದ ಸ್ಥಿತಿಯ ಅರಿವು ನಿಧಾನಕ್ಕೆ ರಂಗಣ್ಣನವರಲ್ಲಿ ಮೂಡ ತೊಡಗಿತ್ತು. ಕರವಸ್ತ್ರದಿಂದ ಕಣ್ಣೀರನ್ನು ಒರೆಯಿಸಿ ಕೊಂಡು ಇಲ್ಲ ಎಂಬಂತೆ ತಲೆ ಅಲ್ಲಾಡಿಸಿದರು. ಎಲ್ಲರೂ ನೋಡುತ್ತಿದ್ದರು. ಬೀಡಿ ಸೇದು ತ್ತಿದ್ದವರು ತಮ್ಮ ಬೀಡಿ ಕೂಡ ಹೊರಗೆಸೆದರು. ರಂಗಣ್ಣನವರ ಮುಖ ಪೂರ್ತಿಯಾಗಿ ಬಿಳುಚಿ ಕೊಂಡಿತ್ತು.

''ಸಾಹೇಬರ, ಆರಾಮ ಇಲ್ಲಂದ್ರ ಮಕ್ಕೊಳ್ರಿ'' ಎಂದು ಹೆಣ್ಣು ಮಗಳೊಬ್ಬಳು ಎದ್ದು ಸೀಟು ಖಾಲಿ ಮಾಡಲು ಪ್ರಯತ್ನಿಸಿದಳು. ಅವಳ ಅಕ್ಕಪಕ್ಕದವರೂ ಏಳತೊಡಗಿದರು.

''ಇಲ್ಲವ್ವಾ ಕೂಕ್ಕೊ. ಯಾರೋ ಭಾಳ ಬೇಕಾದವರು, ವರ್ಷಗಟ್ಟಲೇ ನೋಡಲಿಕ್ಕ ಸಿಗದವರು ಆ ಗಾಡ್ಯಾಗ ಕಂಡರು'' ರಂಗಣ್ಣ ನವರು ತೊದಲುತ್ತ ನುಡಿದರು.

''ಇಳದ ಬಿಡಬೇಕಾಗಿತ್ತು ಸಾಹೇಬರ''

''ಸುಚಾಸಲಿಲ್ಲ. ಅದು ಎಲ್ಲಿ ಹೋಗತದ?''

''ಅದು ಗದಗಿಗೇ ಹೊಕ್ಕೈತ್ರಿ- ನೀವು ಅಣ್ಣೀಗೇರ್ಯಾಗ ಇಳದು ಬಸ್ ಹಿಡದ್ರ, ಆ ಗಾಡಿ ಮುಟ್ಟೋದ್ರಾಗ ಗದಗಿನಾಗ ಇದ್ರೂ ಇರ ಬಹುದು'' ಹಿರಿಯನೊಬ್ಬ ಹೇಳಿದ.

ರೈಲು ನಿಧಾನಕ್ಕೆ ತನ್ನ ವೇಗವನ್ನು ಹೆಚ್ಚಿಸಿಕೊಂಡು ಅಣ್ಣಿಗೇರಿಯತ್ತ ಧಾವಿಸುತ್ತಿತ್ತು. ರೈಲಿನ ವೇಗ ಬಹಳ ಕಡಿಮೆ ಎನ್ನಿಸಿತು ರಂಗಣ್ಣನವರಿಗೆ. ಆದರೆ ವಾಸ್ತವದಲ್ಲಿ, ಬ್ರಾಡ್ ಗೇಜಿಗೆ ಪರಿವರ್ತನೆಯಾದುದರಿಂದ, ಆ ರೂಟನಲ್ಲಿ ರೈಲು ಅವರು ಹಿಂದೆಂದೂ ಕಂಡಿರದಷ್ಟು ವೇಗವಾಗಿಯೇ ಚಲಿಸುತ್ತಿತ್ತು.

ಅಣ್ಣಿಗೇರಿ ಬರಲು ಹೆಚ್ಚು ಸಮಯ ಹಿಡಿಯಲಿಲ್ಲ. ಆದರೆ ವಾಸ್ತವ ಪ್ರಪಂಚದಿಂದ ಬೇರೊಂದು ಲೋಕದಲ್ಲಿ ಬದುಕುತ್ತಿರುವಂತೆ ಅನ್ನಿಸತೊಡಗಿದ್ದರಿಂದ ಸುತ್ತಲೂ ಕುಳಿತ ಜನರು ವಾಸ್ತವದ ಜನರಲ್ಲದಿರಬಹುದೆನ್ನಿಸತೊಡಗಿತು. 'ಅಪ್ಪ' ತನ್ನನ್ನು ತದೇಕ ಚಿತ್ತರಾಗಿ ನೋಡುತ್ತಿದ್ದ ಆ ಎರಡು ಕಣ್ಣುಗಳು ಮಾತ್ರ ಪದೇ ಪದೇ ತನ್ನೆದುರೇ ಮೂಡಿದಂತೆ ಅನ್ನಿಸುತ್ತಿತ್ತು. ಅಣ್ಣಿಗೇರಿಯಲ್ಲಿ ರೈಲು ಸ್ವಲ್ಪ ಹೆಚ್ಚು ಸಮಯ ನಿಂತಿತು. ರಂಗಣ್ಣನವರು ಮೈ ಮೇಲೆ ಪ್ರಜ್ಞೆ ಇಲ್ಲದವರಂತೆ, ನಿಧಾನಕ್ಕೆ ಎದ್ದು, ತನ್ನ ಸೂಟ್‌ಕೇಸನ್ನು ಹಿಡಿದುಕೊಂಡು ರೈಲಿನಿಂದ ಇಳಿದರು. ಅವರು ಗಾಡಿಯಲ್ಲಿ ಕುಳಿತು ಅಣ್ಣಿಗೇರಿ ಸ್ಟೇಶನ್ನನ್ನು ನೋಡಿದ್ದರೆ ಹೊರತು ಒಮ್ಮೆಯೂ ಅಣ್ಣಿಗೇರಿ ಸ್ಟೇಶನ್ನಿನಲ್ಲಿ ಇಳಿದಿರಲಿಲ್ಲ. ಅವರಿಗೆ ಅರಿವಿಲ್ಲದಂತೆಯೇ ಕಾಲುಗಳು ಅವರನ್ನು ಇದಿರು ಕಾಣುತ್ತಿದ್ದ ಕ್ಯಾಂಟೀನಿಗೆ ಕರೆದೊಯ್ದವು. ಅರ್ಧವಯಸ್ಸನ್ನು ಮೀರಿದ ವ್ಯಕ್ತಿಯೊಬ್ಬ ಜನರಿಗೆ ಚಹ ಕೊಡುತ್ತಿದ್ದ. ಕೂದಲುಗಳು ನೆರೆತಿದ್ದವು. ಕಣ್ಣುಗಳು ಗುಳಿ ಬಿದ್ದಿದ್ದವು. ಕುರುಚಲು ಗಡ್ಡ ಮುಖವನ್ನು ಅರ್ಧ ಮುಚ್ಚಿದ್ದವು.

''ನೀ ಮಾಲ್ಯಾ ಏನು?'' ರಂಗಣ್ಣ ಸ್ವಲ್ಪ ದೊಡ್ಡ ದನಿಯಲ್ಲೇ ಕೇಳಿದರು. ಆ ವ್ಯಕ್ತಿ ಚಹದ ಅಲ್ಯುಮಿನಿಯಮ್‌ನ ಕೆಟಲ್‌ನಿಂದ ತನ್ನ ದೃಷ್ಟಿಯನ್ನು ಕಿತ್ತಿ, ಆ ಜನರ ಗದ್ದಲದಲ್ಲಿ ನಿಂತಿದ್ದ ರಂಗಣ್ಣನತ್ತ ನೋಡಿದ. ಅವನಿಗೆ ರಂಗಣ್ಣನ ಗುರುತು ಹತ್ತಲಿಲ್ಲ.

''ಯಾರು ನೀವು?'' ಎಂದು ಸ್ವಲ್ಪ ಜಬರದಸ್ತಿನಿಂದಲೇ ಕೇಳಿದ. ವ್ಯಾಪಾರದ ಆ ಸಮಯದಲ್ಲಿ ಗಿರಾಕಿಗಳನ್ನು ಬಿಟ್ಟು ಬೇರೆ ಮಾತನಾಡುವ ಮನಸ್ಸು ಆತನಿಗೆ ಇದ್ದಂತಿರಲಿಲ್ಲ.

''ನಾನು ರಂಗ... ಗದುಗಿನ ವಕೀಲ ಚೌಳಿನ ರಂಗ, ಕುಲಕರ್ಣಿ ಮಾಸ್ತರ ಮಗ...''

''ಓ! ರಂಗ್ಯಾ ಏನೊ! ಬಾ ಒಳಗ ಬಾ. ಇಚ್ಚಾ ಕಡೆ ಬಾ. ಕೂತ್ಕೊ. ಒಂದೀಟು ಗದ್ದಲ ಕಡಿಮ್ಯಾಗಲಿ. ಇನ್ನೇನು ಗಾಡಿ ಹೊಕ್ಕೈತಿ'' ಎಂದು ಮಾಲ್ಯಾ ಒಳಗೆ ಬರುವ ಬಾಗಿಲು ತೆರೆದ. ರಂಗಣ್ಣ ಒಳಗೆ ನಡೆದು ಅವನು ತೋರಿಸಿದ ಕುರ್ಚಿಯ ಮೇಲೆ ಕುಳಿತರು. ಮಾಲ್ಯಾನ ಕೈಗಳು ಚಹ ಸುರುವುವ ಕೆಲಸವನ್ನು ಮಾಡುತ್ತಲೇ ಇದ್ದವು. ರಂಗಣ್ಣನ ಟೇಬಲ್ ಮೇಲೆ ಒಂದು ಕಪ್ ಚಹಾ ಬಂದಿತು. ಅಷ್ಟರಲ್ಲಿ ರೈಲು ಹೊರಡುವ ಮುನ್ಸೂಚನೆಯಾಗಿ ದೊಡ್ಡ 'ಕೂss.....' ಶಬ್ದವಾಯಿತು. ಜನ ಓಡಿದರು. ರೈಲು ಹೊರಟಿತು. ಮಾಲ್ಯಾ ತಾನೂ ಒಂದು ಕಪ್ ಚಹಾ ಹಿಡಿದುಕೊಂಡು ರಂಗಣ್ಣನ ಎದುರಿನ ಕುರ್ಚಿಯಲ್ಲಿ ಕುಳಿತ.

''ಎಷ್ಟು ದಿನಾ ಆತಲೆ ರಂಗ್ಯಾ? ನೀನು ಬ್ಯಾಂಕನ್ಯಾಗ ಇದ್ದೀಯಂತ ಗೊತ್ತದ. ಮತ್ತ ಅಣ್ಣಿಗೇರ್‍ಯಾಗ ನಿಮ್ಮ ಹತಗಡಿ ಇದ್ದಾರೇನು?'',



ಮಾಲ್ಯಾ ಒಂದೇ ಉಸಿರಿನಲ್ಲಿ ಎಲ್ಲಾ ಕೇಳಿದ. ಅವನ ಪೂರ್ವಾಪರಗಳನ್ನು ಕೇಳಿ ತಿಳಿದು ಕೊಳ್ಳುವ ಮನಸ್ಥಿತಿ ಈಗ ರಂಗಣ್ಣನವರಲ್ಲಿ ಉಳಿದಿರಲಿಲ್ಲ.

''ಇಲ್ಲಪಾ. ಹುಬ್ಬಳ್ಳಿಗೆ ಹೋಗಿ, ಇವತ್ತ ರಾತ್ರಿ ಬೆಂಗಳೂರಿಗೆ ಹೋಗಬೇಕಿತ್ತು. ಆದರೆ ಗಾಡ್ಯಾಗ ಸ್ವಲ್ಪ ಆರಾಮ ತಪ್ಪಿತು. ಅರ್ಜೆಂಟ್ ವಾಪಸು ಗದಗಿಗೆ ಹೋಗಬೇಕು. ಇಲ್ಲೆಲ್ಲರ ಟ್ಯಾಕ್ಸಿ ಸಿಗತಾವೇನು? ಅದರ ಗುರುತಿನ ಮನಸ್ಯಾ ಅಂತ ನಿನ್ನ ಹತ್ರ ಬಂದೆ'' ಎಂದರು ರಂಗಣ್ಣ. ಅವರ ಬಿಳಿಚಿಕೊಂಡ ಮುಖ, ಕಣ್ಣಲ್ಲಾಡುತ್ತಿದ್ದ ನೀರು ಇವುಗಳನ್ನು ಕಂಡು ಮಾಲ್ಯಾನಿಗೆ ಅವರ ಸ್ಥಿತಿ ಗಂಭೀರವಾಗಿರಬಹುದೆಂದು ಅನ್ನಿಸಿತು.

''ಐದು ಮಿನಿಟ್‌ನ್ಯಾಗ ಟ್ಯಾಕ್ಸಿ ತರಸ್ತೇನಿಬಿಡು. ಬೇಕಂದ್ರ ನಾನೂ ಬರಲೇನು ನಿನ್ನ ಜೋಡಿ? ಅಷ್ಟು ಆರಾಮದಿ ಹೌದಲ್ಲೊ?''

''ಬ್ಯಾಡ, ನಾ ಹೋಗ್ತಿನಿ. ಇನ್ನೊಂದೆರಡು ದಿನ ಆರಾಮ ತಗೊಂಡು ಮತ್ತ ಹೋಗ್ತೀನಿ.''

''ಕುಂತಿರು ಬರ್ತೀನಿ'' ಎಂದು ಮಾಲ್ಯಾ ಹೋದ.

ಚಹ ಕುಡಿದದ್ದಕ್ಕೊ ಅಥವಾ ತಮ್ಮ ಆಗಿನ ಮನಸ್ಥಿತಿಗೊ, ರಂಗಣ್ಣನವರಿಗೆ ತಲೆಸುತ್ತಿ ವಾಂತಿ ಯಾಗುವಂತಾಗತೊಡಗಿತು. ಅಷ್ಟರಲ್ಲಿ ಮಾಲ್ಯಾ ಬಂದ. ಅವನೆದುರು ಏನನ್ನೂ ತೋರಿಸಿ ಕೊಳ್ಳಲಿಲ್ಲ. ವಾಂತಿ ಮಾಡಿಕೊಂಡರೆ ಅವನು ತನ್ನನ್ನು ಅಲ್ಲಿಂದ ಹೋಗಲು ಬಿಡಲಾರ ಅನ್ನಿಸಿತು. ಟ್ಯಾಕ್ಸಿಯವನಿಗೆ ಕೊಡಬೇಕಾದ ಹಣ ಇತ್ಯಾದಿಗಳನ್ನು ತಿಳಿಸಿ ಮಾಲ್ಯಾ ಸ್ಟೇಶನ್ ಹೊರಗೆ ಬಂದು, ಸೂಟ್‌ಕೇಸ್ ಅವರ ಕೈಗೆ ಕೊಟ್ಟು ಬೀಳ್ಕೊಟ್ಟ. ಟ್ಯಾಕ್ಸಿಯವನಿಗೂ ಜರೂರ ಬಿದ್ರ ಏನೇನು ಮಾಡಬೇಕೆಂದು ತಿಳಿಸಿದ. ಎಷ್ಟೊ ವರ್ಷಗಳ ನಂತರ ದೊರೆತ ಬಾಲ್ಯ ಸ್ನೇಹಿತನೊಡನೆ ಮಾತನಾಡಲಾಗಲಿಲ್ಲವಲ್ಲ ಎಂದು ಮಾಲ್ಯಾ ವಿಷಾದಿಸಿದ. ರಂಗಣ್ಣನವರಿಗೆ ಇದಾವುದರ ಕಡೆಗೂ ಲಕ್ಷ್ಯವಿರಲಿಲ್ಲ. ಟ್ಯಾಕ್ಸಿಯು ಗದುಗಿನ ಕಡೆ ಹೊರಟೊಡನೆ ಸ್ವಲ್ಪ ನೆಮ್ಮದಿ ಎನ್ನಿಸಿತು. ಟ್ಯಾಕ್ಸಿಯವನಿಗೆ ವೇಗವಾಗಿ ಗದುಗಿನ ಸ್ಟೇಶನ್ನಿಗೆ ಹೋಗಲು ತಿಳಿಸಿದರು. ಬಸ್‌ನಲ್ಲಾದರೆ ಇಪ್ಪತ್ತು ಮೂವತ್ತು ನಿಮಿಷಗಳ ದಾರಿ. ಟ್ಯಾಕ್ಸಿಯು ಸಾಕಷ್ಟು ವೇಗವಾಗಿ ಚಲಿಸುತ್ತ ಗದುಗಿನ ರೇಲ್ವೆ ಸ್ಟೇಶನ್ ತಲುಪಿದಾಗ ಅದೇ ಆಗ ಗಾಡಿ ಬಂದು ನಿಂತಿತ್ತು. ಜನರು ನಿಧಾನಕ್ಕೆ ಹೊರಬರ ತೊಡಗಿದ್ದರು. ಅದೇ ಕೊನೆಯ ನಿಲ್ದಾಣ. ಹೀಗಾಗಿ ಯಾರಿಗೂ ತರಾತುರಿ ಇರಲಿಲ್ಲ. ಟ್ಯಾಕ್ಸಿಯವನಿಗೆ ಅಲ್ಲಿಯೇ ಕಾಯಲು ಹೇಳಿ ರಂಗಣ್ಣ ಸ್ಟೇಶನ್ ಒಳಗಡೆ ಧಾವಿಸಿದರು. ತಾವು ನೋಡಿದ ಆ ಬೋಗಿ ಯಾವುದಿರಬಹುದೆಂದು ಅಂದಾಜಿನ ಮೇಲೆ ಧೇನಿಸಿಕೊಂಡು ಅತ್ತ ಕಡೆ ಧಾವಿಸಿದರು. ಅದರಲ್ಲಿ ಇನ್ನೂ ಕೆಲವು ಜನರಿದ್ದರು. ಆದರೆ ಅವರು ಹುಡುಕುತ್ತಿದ್ದ ವ್ಯಕ್ತಿ ಅಲ್ಲಿರಲಿಲ್ಲ. ಬೋಗಿಯಿಂದ ಇಳಿಯುತ್ತಿದ್ದ ಒಬ್ಬ ಮುದುಕರನ್ನು ರಂಗಣ್ಣ ಕೇಳಿದರು: ''ಇಲ್ಲೆ ಕಿಡಕಿ ಹತ್ರ ಕರಿಟೊಪ್ಪಿಗೆ ಹಾಕ್ಕೊಂಡು ಒಬ್ಬರು ಕೂತಿದ್ರಲ್ರಿ, ಅವರು ಇಳದ ಹೋದರೇನ್ರಿ?''

''ಯಾರ್ಯಾರೂ ಗಾಡ್ಯಾಗ ಬರ್ತಾರ ಹೋಗತಾರ. ಎಲ್ಲಾ ಎಲ್ಲಿ ನೋಡಿಕೋತ ಕೂಡಲಿಕ್ಕಾಗತದ ಹೇಳ್ರಿ. ಸ್ವಲ್ಪ ಲಗೂನ ಬರಬೇಕಿತ್ತು ನೀವು. ಇಳದಿದ್ದರ ಇಲ್ಲೆ ಸ್ಟೇಶನ್ ದಾಟಿರಲಿಕ್ಕಿಲ್ಲ ನೋಡ್ರಿ ಅವರು'' ಎಂದು ಅಡ್ಡಗೋಡೆಯ ಮೇಲಿಟ್ಟ ದೀಪದ ಉತ್ತರ ಕೊಟ್ಟ ಮುದುಕ.

ದೆಸಬಾಯಿ ಬಿಟ್ಟುಕೊಂಡು ರಂಗಣ್ಣನವರು ಇಡೀ ರೈಲು ನಿಲ್ದಾಣವನ್ನು ಎರಡು ಸಲ ಸುತ್ತುಹಾಕಿದರು. ಅವರು ಕಂಡ ಆ ವ್ಯಕ್ತಿ ಎಲ್ಲಿಯೂ ಕಾಣಲಿಲ್ಲ. ವಾಪಸು ಟ್ಯಾಕ್ಸಿಯ ಬಳಿ ಬಂದೊಡನೆ, ಅದುವರೆಗೆ ಅದುಮಿ ಹಿಡಿದಿದ್ದ ವಾಂತಿಯು ಬುಳುಕ್ಕನೆ ಹೊರಬಂದಿತು. ನೋಡು ನೋಡುತ್ತಿದ್ದಂತೆಯೇ ಹೊಟ್ಟೆಯಲ್ಲಿದ್ದು

ದೆಲ್ಲವೂ ಹೊರಬಂದಿತು. ಟ್ಯಾಕ್ಸಿಯವನು ಬಂದು ಅವರನ್ನು ಹಿಡಿದುಕೊಂಡ. ಯಾರೋ ನೀರು ತಂದು ಕೊಟ್ಟರು. ಬಾಯಿ ಮುಕ್ಕಳಿಸಿದ ಮೇಲೆ ಸ್ವಲ್ಪ ಆರಾಮ ಅನ್ನಿಸಿತು. ಗುರಣ್ಣನ ಮನೆಗೆ ಹೋಗಲೂ ಎಂದು ಆ ಮೊದಲು ಯೋಚಿಸಿದವರು ತಮ್ಮ ಮನಸ್ಸನ್ನು ಬದಲಾಯಿಸಿದ್ದರು. ಟ್ಯಾಕ್ಸಿಯವನಿಗೆ ನೇರವಾಗಿ ಮುಳುಗುಂದ ಜಕಾತಿ ಕಟ್ಟೆಯ ಬಳಿಯ ಲಾಜಿಂಗಗೆ ಹೋಗಲು ತಿಳಿಸಿದರು. ಅವನೂ ಗಾಬರಿಯಾಗಿದ್ದ. ಡಾಕ್ಟರರೊಬ್ಬರ ಬಳಿ ಹೋಗೋಣವೆ ಎಂದು ಅವನು ಕೇಳಿದಾಗ ರಂಗಣ್ಣ ಬೇಡವೆಂದರು. ಅವನಿಗೆ ಹಣಕೊಟ್ಟು ಕಳುಹಿಸಿ, ಲಾಜಿಂಗ ಒಳಗೆ ಬಂದಾಗ, ತಾವು ಬೆಳಗ್ಗೆ ಖಾಲಿಮಾಡಿದ ರೂಮು ಇನ್ನೂ ಖಾಲಿ ಇದೆ ಎಂದು ಗೊತ್ತಾಗಿ, ಅದೇ ರೂಮಿಗೆ ಬಂದರು. ಬಟ್ಟೆ ಬದಲಾಯಿಸಿ ಹಾಸಿಗೆಯ ಮೇಲೆ ಒರಗಿಕೊಂಡಾಗ ಅವರಿಗೆ ಸ್ವಲ್ಪ ಸಮಾಧಾನವಾಯಿತು.

ತಾವು ಕಂಡದ್ದನ್ನು ಹೇಳಿದರೆ ಜನರು ಏನೆನ್ನಬಹುದು ಎಂಬ ಯೋಚನೆ ಆಗ ಅವರ ಮನಸ್ಸಿನಲ್ಲಿ ಮೂಡತೊಡಗಿತು. ಹಾಗೆಯೇ ಹುಬ್ಬಳ್ಳಿಯಲ್ಲಿ ಬಕುಲಾ ಕಾಯುತ್ತಿರುತ್ತಾಳೆ ಮತ್ತು ರಾತ್ರಿ ಮಡದಿಯು ಬೆಳಗಾವಿಯಿಂದ ಹುಬ್ಬಳ್ಳಿಯ ರೇಲ್ವೆ ಸ್ಟೇಶನಗೆ ಬಂದು ಕಾಯುತ್ತಾಳೆ ಎಂಬ ಯೋಚನೆಗಳು ಮೂಡಿದವು. ಅವರಿಬ್ಬರಿಗೂ ತಿಳಿಸಬೇಕು, ಏನು ತಿಳಸಬೇಕು? ಗುರಣ್ಣ ಈಗ ಮನೆಯಲ್ಲಿ ಇರುವುದಿಲ್ಲ. ಅವನು ತನ್ನ ಸ್ಟೇಶನ್ ರಸ್ತೆಯ ಆಫೀಸನ್ನು ಇಷ್ಟರೊಳಗ ತಲುಪಿರುತ್ತಾನೆ. ಅವನ ಆಫೀಸಿನ ಫೋನ್ ನಂಬರು ತಮ್ಮ ಬಳಿ ಇಲ್ಲ. ಬಕುಲಾ ಮತ್ತು ಹೆಂಡತಿಗೆ ಫೋನ್‌ನಲ್ಲಿ ತಿಳಿಸಬಹುದು. ಗುರಣ್ಣನ ಆಫೀಸಿನ ಫೋನ್ ನಂಬರು ಹುಡುಕಬಹುದು. ಮಲಗಿದ ಮಂಚದಿಂದ ಎದ್ದೇಳಲು ಆಗದ ಕೈಕಾಲುಗಳು ಮರಗಟ್ಟಿದಂತೆ ಆಗಿದ್ದವು. ಆದರೆ ದೈಹಿಕವಾಗಿ ತನಗೇನೂ ಆಗಿಲ್ಲವೆಂಬ ಧೈರ್ಯವಿತ್ತು. ಕೈಕಾಲುಗಳಲ್ಲಿ ಚೈತನ್ಯ ತಾನಾಗಿ ಮೂಡುವವರೆಗೆ ಏಳುವುದೇ ಬೇಡವೆನ್ನಿಸಿ ಕಣ್ಣು ಮುಚ್ಚಿದರು.

ಒಂದು ಗಂಟೆಯ ನಂತರ ಅವರಿಗೆ ವಿಷಯಗಳು ಒಂದೊಂದಾಗಿ ಸ್ಪಷ್ಟವಾಗ ತೊಡಗಿದವು. ಬಕುಲಾಳಿಗೆ ಮತ್ತು ಮಡದಿಗೆ ಫೋನ್ ಮೂಲಕ ತಮ್ಮ ಮುಂದೂಡಿದ ಪ್ರಯಾಣವನ್ನು ತಿಳಿಸಬೇಕು. ಗುರಣ್ಣನಿಗೆ ಫೋನ್ ಮಾಡಬೇಕು. ಅವರು ಎದ್ದು ಕೌಂಟರ್ ಬಳಿ ಬಂದರು. ಬಕುಲಾ ಮನೆಯಲ್ಲೇ ಸಿಕ್ಕಳು. ತನಗೆ ಆರಾಮ ಇಲ್ಲದ್ದರಿಂದ ಪ್ರಯಾಣ ಮುಂದೂಡಿರುವುದಾಗಿ ತಿಳಿಸಿದರು. ಅವಳಿಗೆ ವಿಷಯ ತಿಳಿದು ಸ್ವಲ್ಪ ಗಾಬರಿಯಾದಂತಾಯಿತು.

"ಗುರಣ್ಣನ ಮನೀಗರ ಹೋಗಲ್ಲ. ಅದ್ಯಾಕ ಲಾಜಿಂಗನಾಗ ಇರ್ತೀದಿ?" ಎಂದಳು.

"ಇಲ್ಲ ಅವನ್ನ ಇಲ್ಲಿಗೆ ಕರಸ್ತೀನಿ. ರಾತ್ರಿಗಾಡೀಗೆ ಹೋಗಲಿಕ್ಕೆ ಕುಸುಮಾಗ ಹೇಳಿದ್ದೆ. ಅವಳು ಸ್ಟೇಶನ್ನಿಗೆ ಬರಬಹುದು. ಆಕಿಗೂ ಫೋನ್ ಮಾಡ್ತೀನಿ."

"ನೋಡು ರಂಗಣ್ಣ, ನೀರು ಬದಲಾಗಿರಬೇಕು. ಕುಸುಮಾಗ ನಾಲ್ಕು ಗಂಟೆಕ್ಕ ನಮ್ಮ ಮನೀಗೆ ಬಾ ಅಂತ ತಿಳಿಸು. ನಾವಿಬ್ಬರೂ ಕೂಡಿ ಸಂಜಿ ಬಸ್ಸಿಗೆ ಗದಗಿಗೆ ಬರ್ತೀವಿ. ಮುಳುಗುಂದ ಜಕಾತಿಕಟ್ಟೆ ಹತ್ರ ಇಳದು, ಸೀದಾ ಲಾಜಿಗೇ ಬರ್ತೀವಿ."

ಬಕುಲಾ ಮುಂದೆ ಮಾತನಾಡಲು ಬಿಡಲಿಲ್ಲ. ಅವಳ ಸ್ವಭಾವವೇ ಹಾಗೆ. ಫೋನು ಕೆಳಗಿಟ್ಟುಬಿಟ್ಟಳು. ಮಡದಿ ಕುಸುಮಾಳಿಗೂ ಆರಾಮಿಲ್ಲೆಂದು ತಿಳಿಸಿ ಬಕುಲಾಳೊಡನೆ ಗದುಗಿಗೆ ಬರಲು ತಿಳಿಸಿದರು. ಆರಾಮಿಲ್ಲದಿದ್ದರೆ ಪ್ರಯಾಣ ಮುಂದೂಡಿದ್ದು ಅವಳಿಗೆ ಸರಿ ಎನ್ನಿಸಲಿಲ್ಲ. ಆದರೂ ಬಕುಲಾಳೊಡನೆ ಸಂಜೆ ಒಳಗೆ ಗದುಗಿಗೆ ಬರುವುದಾಗಿ ತಿಳಿಸಿದಳು.



ಅವಳೂ ಸ್ವಲ್ಪ ಗಾಬರಿಯಾಗಿದ್ದಳು. ಗುರಣ್ಣನಿಗೆ ಫೋನ್ ಮಾಡಿದಾಗ ಆಫೀಸಿನಲ್ಲೇ ಸಿಕ್ಕ. ಅವನಿಗೆ, ಆರಾಮ ಇಲ್ಲದ್ದಕ್ಕ ಊರಿಗೆ ಹೋಗಲಿಲ್ಲ ಎಂದು ಮಾತ್ರ ತಿಳಿಸಿದರು. ಗುರಣ್ಣ ಕೂಡಲೇ ಬಂದು ರಂಗಣ್ಣನನ್ನು ನೋಡುವ ತವಕವನ್ನು ತೋರಲಿಲ್ಲ. ತನ್ನ ಮನೆ ಬಿಟ್ಟು ಲಾಜಿಂಗ್‌ನಲ್ಲಿ ಇಳಿದುಕೊಂಡಿರುವುದರಿಂದ ತಾನ್ಯಾಕೆ ಅಲ್ಲಿಗೆ ಹೋಗಲಿ ಎಂಬ ಗೌಜು ಅವನ ಧ್ವನಿಯಲ್ಲಿ ಸ್ಪಷ್ಟವಾಗಿ ವ್ಯಕ್ತವಾಗುತ್ತಿತ್ತು. ವಿಷಯ ತಿಳಿಸಿ ರಂಗಣ್ಣನವರು ಫೋನು ಕೆಳಗಿಟ್ಟರು. ರೂಮಿಗೆ ಬಂದು ಮಲಗಿದಾಗ ಮನಸ್ಸು ಮೊದಲಿಗಿಂತ ಹೆಚ್ಚು ನಿಚ್ಚಳವಾಗಿತ್ತು. ಯಾರ ಬಳಿ ವಿಷಯ ಹೇಳುವುದು ಮತ್ತು ಯಾರೊಡನೆ ಚರ್ಚಿಸುವುದು ಎಂಬ ಸಮಸ್ಯೆ ಎದುರಿಗಿದೆ ಎಂಬುದು ಸ್ಪಷ್ಟವಾಯಿತು. ಯಾರಿಗೆ ಹೇಳಿದರೂ ತನ್ನನ್ನು ಸಂಶಯದಿಂದ ನೋಡಬಹುದು. ತಾನು ಕಂಡದ್ದು ಕೇವಲ ಭ್ರಮೆ ಎಂದಾರು. ಆದರೆ ತಾನು ನೋಡಿದ್ದು ಮಾತ್ರ ವಾಸ್ತವ. ತನಗೆ ವಾಸ್ತವವಾದದ್ದು ಇತರರಿಗೆ ಕೇವಲ ಅವಾಸ್ತವವಲ್ಲ, ಅವರಿಗೆ ಅದು ಅಸಾಧ್ಯ ಕೂಡ. ತಲೆ ಬರೋಬರಿ ಇರುವವರು ಎಂದೂ ಕಾಣದ ದೃಶ್ಯ ಅದು. ನೆನಪಿಸಿಕೊಂಡಂತೆಲ್ಲಾ 'ಅಪ್ಪ'ನ ಆ ನೀಲವರ್ಣದ ಕಣ್ಣುಗಳು, ಆ ಕಪ್ಪುಕೋಟು, ಆ ಚಾಳೀಸ, ತಲೆಯ ಮೇಲಿನ ಕರಿಟೊಪ್ಪಿಗೆ ಮತ್ತು ನೋಡುತ್ತಿದ್ದ ರೀತಿ ಎಲ್ಲವೂ ಮತ್ತೆ ಮತ್ತೆ ಮನಸ್ಸಿನ ಪಟಲದ ಮೇಲೆ ಮೂಡುತ್ತ ಹೋದವು. ಅಪ್ಪ ಬದುಕಿದ್ದಾಗ ಕೊನೆಯಬಾರಿ ಅವರನ್ನು ನೋಡಿದ ದೃಶ್ಯವೂ ಮನಸ್ಸಿನ ಮೇಲೆ ಮೂಡಿತು. ಅಂದು ಶನಿವಾರ, ರೇಲ್ವೆ ಹನಮಪ್ಪನಿಗೆ ತೆಂಗಿನಕಾಯಿ ಒಡೆಯಿಸಿಕೊಂಡು ಬರಬೇಕು. ಸಂಜೆ ಯಾರಾದರೂ ಪ್ರತಿ ಶನಿವಾರ ಆ ಕೆಲಸ ಮಾಡಲೇಬೇಕು. ರಂಗಣ್ಣ ಹೋಗುವುದಿಲ್ಲವೆಂದು ಅಪ್ಪ ಅವ್ವನಿಗೆ ಗೊತ್ತು. ಅವ್ವ ಅಷ್ಟೊತ್ತಿಗೆ ಹಾಸಿಗೆ ಹಿಡಿದಿದ್ದಳು. ಅಪ್ಪನೇ ಹೋಗಬೇಕಾಯಿತು. ಅದೇ ಕರಿಕೋಟು, ಕರಿಟೊಪ್ಪಿಗೆ, ಚಾಳೀಸು, ತೇರದಾಳದ ಚಪ್ಪಲಿಗಳು. ಸೋತವರಂತೆ ಕಂಡರೂ ಹೋಗಲೇಬೇಕು. ಮೊದಲು ಕೆಲವೊಮ್ಮೆ ರಂಗಣ್ಣ ಹೋಗುತ್ತಿದ್ದ. ಆದರೆ ಇಂಥದೇ ಒಂದು ಶನಿವಾರ, ಹೀಗೆಯೇ ಸ್ಟೇಶನ್ನಿನ ಹನುಮಪ್ಪನಿಗೆ ಕಾಯಿ ಒಡೆಸಲು ಹೋದ ಅಕ್ಕ ಗೋದಾವರಿ ಮನೆಗೆ ಬರಲೇ ಇಲ್ಲ! ಆ ಗಾಯ ಮಾಸಲಾರದ್ದು. ಅವಳಿಗೆ ಐದನೇ ವರ್ಷಕ್ಕಲ್ಲವೆ ಕೈಮೇಲೆ ಕಾಣಿಸಿಕೊಂಡದ್ದು. ಆ ಒಂದು ರೂಪಾಯಿಯಾಕಾರದ ಬಿಳಿ ತೊನ್ನು ಚಿಹ್ನೆ. ಅದು ಅವಳೊಡನೆಯೇ ಕೆಲವು ವರ್ಷ ಬೆಳೆಯುತ್ತಲೇ ಹೋಗಿ ಬಲಗೈ ಮೇಲೆ ಸ್ಥಾಪಿತವಾಯಿತು. ಪುಣ್ಯಕ್ಕೆ ಮುಂದೆ ಬೆಳೆಯಲಿಲ್ಲ. ಎಷ್ಟು ಬಗೆಯ ಚಿಕಿತ್ಸೆಗಳು, ಅಷ್ಟು ಬಗೆಯ ದೇವರು ದಿಂಡರು.

ಅವಳು ಬೆಳೆದಂತೆಲ್ಲ ಅಪ್ಪನ ಮುಖದ ಮೇಲಿನ ನೆರಿಗೆಗಳೂ ಜಾಸ್ತಿಯಾಗುತ್ತ ಹೋದವು. ಅಪ್ಪನೇನೋ ವಕೀಲ ಜಾಳನ ಮನೆಯಿಂದ ಸ್ವಲ್ಪವೇ ದೂರದಲ್ಲಿದ್ದ ಶಾಲೆಗೆ ಹೋಗಿ ಬರುತ್ತಿದ್ದ. ಬಂದೊಡನೆ ಒಂದಿಷ್ಟು ಜನರಿಗೆ ಟ್ಯೂಶನ್ ಹೇಳುತ್ತಿದ್ದ. ಹೀಗಾಗಿ ಅವರಿಗೆ ಹೊತ್ತು ಹೋಗುತ್ತಿತ್ತು. ಗೋದಾವರಿ ಬೆಳೆದಂತೆ ಅಪ್ಪ ಹೊರಗೆ ಹೋಗುವುದೇ ಕಡಿಮೆಯಾಯಿತು. ಅವಳು ಹುಡುಗಿಯರು ಮಾತ್ರ ಹೋಗುವ ಸ್ಕೂಲಿಗೇ ಹೋದಳು. ರಂಗಣ್ಣನಿಗೆ ಇನ್ನೂವರೆಗೂ ಅವಳಿಗೆ ಎಸ್.ಎಸ್.ಎಲ್.ಸಿ.ಯಲ್ಲಿ ಯಾವಾವ ವಿಷಯಕ್ಕೆ ಎಷ್ಟೆಷ್ಟು ಮಾರ್ಕ್ಸ್ ಬಂದಿತ್ತು ಎಂಬುದು ನೆನಪಿದೆ. ಅವಳು ಕಾಲೇಜಿಗೂ ಹೋದಳು. ಯಾವ ಕಾರ್ಯಕ್ರಮದಲ್ಲಿ ಭಾಗವಹಿಸದಿದ್ದರೂ ಗೋದಾವರಿ ಓದಿನಲ್ಲಿ ಮಾತ್ರ ಜಿದ್ದಿಗೆ ಬಿದ್ದು ಮುಂದೆ ಇರುತ್ತಿದ್ದಳು. ಅವಳಿಗೂ ಕ್ರಮೇಣ ಗೊತ್ತಾಗಿತ್ತು ತನ್ನ ಮದುವೆ ಆಗುವುದಿಲ್ಲವೆಂದು. ಒಂದೆರಡು ಅವಳಂಥದೇ ಹುಡುಗನನ್ನು ನೋಡಿ ಅಪ್ಪ ಸುಮ್ಮನಾದರು. ಅಷ್ಟು ಪ್ರೀತಿಯಿಂದ ಬೆಳೆಯಿಸಿದ ಗೋದಾವರಿಯ ಬಗ್ಗೆ ಅಷ್ಟೊಂದು ತುಚ್ಛವಾಗಿ ಮಾತನಾಡುವ ಆ ಗಂಡಿನ ಕಡೆಯವರ ಬೇಡಿಕೆಯನ್ನು ತಾನು ಪೂರೈಸಲಾರೆ ಎಂದು ಮನಸ್ಸಿನಲ್ಲಿ ಸಂಕಲ್ಪವನ್ನೇ ಮಾಡಿದರು. ಮಾನಸಿಕವಾಗಿ ಜಗತ್ತನ್ನು ಎದುರಿಸಲು ಸಿದ್ಧವಾಗಿಯೇಬಿಟ್ಟರು. ಅವ್ವನಿಗೆ ಮಾತ್ರ ಹಾಗಾಗಲಿಲ್ಲ. ಸದಾ ಅರೆ ತಲೆಶೂಲೆಯೆಂದು ಹಾಸಿಗೆ ಹಿಡಿದಿರುತ್ತಿದ್ದಳು. ಅವಳ ಅರೆ ತಲೆಶೂಲೆಯ ಸಣ್ಣಗಿನ ನರಳುವಿಕೆಯ ಮಧ್ಯದಲ್ಲೇ ಆ ಬಾಡಿಗೆಯ ಕಿಷ್ಕಿಂದದಂಥ ಮನೆಯಲ್ಲಿ ಟ್ಯೂಶನ್ ಜೋರಿ ಸಾಗುತ್ತಿತ್ತು. ಅದರಿಂದ ತನ್ನ ಓದು ಸರಿಯಾಗುವುದಿಲ್ಲವೆಂದು ರಂಗಣ್ಣ, ಸದಾ ತನ್ನ ಮಿತ್ರರ ಮನೆಯಲ್ಲೇ ಇರುವುದು ವಾಡಿಕೆಯಾಯಿತು. ಮನೆಯಲ್ಲಿ ಇಷ್ಟೊಂದು ಸಮಸ್ಯೆಗಳಿದ್ದರೂ, ಅದರ ಬಗ್ಗೆ ಕಾಳಜಿ ಇಲ್ಲದ ಮಾಸ್ತರ ಮಗ ರಂಗಣ್ಣ, ಬೇಜವಾಬ್ದಾರಿ ಹುಡುಗ ಎಂಬ ಅಭಿಪ್ರಾಯವನ್ನು ಅವ್ವ ನರಳುತ್ತಲೇ ಮೂಡಿಸುತ್ತಿದ್ದಳು. ಆದರೆ ಮೂಲ ಸಮಸ್ಯೆ ಮಾತ್ರ ಗೋದಾವರಿಯದು. ಅದನ್ನು ಎತ್ತಿ ಯಾರೂ ಆಡುವ ಹಾಗಿಲ್ಲ ಮತ್ತು ಆಡುತ್ತಿರಲಿಲ್ಲ.

ಎಸ್.ಎಸ್.ಎಲ್.ಸಿ.ಯಲ್ಲೇ ರಹಮಾನ ಮನೆಗೆ ಟ್ಯೂಶನ್‌ಗೆ ಬರುತ್ತಿದ್ದ. ಅವನನ್ನು ನೋಡಿದ ನೆನಪು ಮಾತ್ರ ರಂಗಣ್ಣನಿಗೆ ತೀರ ಮಸುಕು ಮಸುಕಾಗಿದೆ. ಆದರೆ ಮುಂದೆ ಮೂರು ವರ್ಷಕ್ಕೆ, ತನ್ನ ಡಿಗ್ರಿ ಮುಗಿಸುವ ವೇಳೆಗೆ ಗೋದಾವರಿಯು ಆಗೀಗ ಅವನೊಡನೆ ರಸ್ತೆಯ ಮೂಲೆಯಲ್ಲಿ ನಿಂತು ಮಾತನಾಡುವುದನ್ನು ಅಪ್ಪ ಕಂಡಿದ್ದರು. ಆದರೆ ಅವನು ಅಪ್ಪನ ಸಹೋದ್ಯೋಗಿ ಕಾಗದಗಾರ ಮಾಸ್ತರರ ಮಗ. ಬಾಲ್ಯದಿಂದ ಗೋದಾವರಿ ಮತ್ತು ರಹಮಾನ್ ಒಬ್ಬರನ್ನೊಬ್ಬರು ಬಲ್ಲವರು. ಹೀಗಾಗಿ ಅಪ್ಪ ಅದರ ಬಗ್ಗೆ ಅಷ್ಟೊಂದು ತಲೆ ಕೆಡಿಸಿಕೊಂಡವರಂತೆ ಕಾಣಲಿಲ್ಲ. ಗೋದಾವರಿಯ ತೊನ್ನು ಒಂದು ಕೈಗೆ ಮಾತ್ರ ಹಬ್ಬಿ ಮುಂದೆ ತನ್ನಷ್ಟಕ್ಕೇ ನಿಂತುಬಿಟ್ಟಿತ್ತು. ರಹಮಾನ ನೋಡಲು ಸ್ಫುರದ್ರೂಪಿ. ಫೋಟೋ ತೆಗೆಯುವುದು ಸಿನಿಮಾ ಹಾಡು ಹೇಳುವುದು ಡ್ರಾಯಿಂಗ್ ಬಿಡಿಸುವುದು ಮುಂತಾದವುಗಳಲ್ಲಿ ನಿಸ್ಸೀಮ. ಶನಿವಾರ ರೇಲ್ವೇ ಹನುಮಪ್ಪನಿಗೆ ಕಾಯಿ ಒಡೆಸಲು ಹೋದ ಗೋದಾವರಿ ಮನೆಗೆ ಬರಲಿಲ್ಲ. ಏನೋ ಕೆಲಸದ ಮೇಲೆ ಹುಬ್ಬಳ್ಳಿಗೆ ಹೋದ ರಹಮಾನನೊಡನೆ ಅವಳು ಹೋಗಿರಬಹುದೆಂದು ಅಪ್ಪ ಮತ್ತು ಕಾಗದಗಾರ ಮಾಸ್ತರರಿಬ್ಬರೂ ನಂಬಲಿಲ್ಲ. ಒಂದು ವಾರದ ನಂತರ ಯಾರೂ ಅವರಿಬ್ಬರನ್ನೂ ಗಾಡಿಯಲ್ಲಿ ಹುಬ್ಬಳ್ಳಿಯ ರೈಲು ನಿಲ್ದಾಣದಲ್ಲಿ ನೋಡಿದ ಸುದ್ದಿ ತಂದಾಗಲೇ ಅವರಿಬ್ಬರೂ ಒಟ್ಟಿಗೆ ಹೋದುದು ಖಚಿತವಾಗತೊಡಗಿತು. ರಹಮಾನ ಮತ್ತು

ಗೋದಾವರಿಯ ಸುದ್ದಿ ಮತ್ತೆ ಒಂದು ವರ್ಷದವರೆಗೆ ಬರಲೇ ಇಲ್ಲ. ವಕೀಲ ಚಾಳಿನ ಮಧ್ಯಮ ವರ್ಗದ ಬ್ರಾಹ್ಮಣರ ಬಾಯಿಗೆ ತುತ್ತಾದ ಈ ಸುದ್ದಿ ಒಂದು ವರ್ಷದ ನಂತರ ತನ್ನ ಸತ್ವವನ್ನು ಕಳೆದುಕೊಳ್ಳುತ್ತಹೋಯಿತು. ಆದರೆ ಅಪ್ಪ, ಅವ್ವನನ್ನು ಒಳಗೊಳಗೆ ಹಣ್ಣುಗಾಯಿ ನೀರುಗಾಯಿ ಮಾಡಿತು. ಅವ್ವ ಹಾಸಿಗೆ ಬಿಟ್ಟು ಏಳುವುದೇ ಕಡಿಮೆಯಾಯಿತು. ಶನಿವಾರ ದಿನ ರೇಲ್ವೆ ಹನುಮಪ್ಪನಿಗೆ ತೆಂಗಿನಕಾಯಿ ಒಡೆಯಿಸುವುದು ಮಾತ್ರ ತಪ್ಪಲಿಲ್ಲ. ರಂಗಣ್ಣ ಆ ಸುದ್ದಿ ತೆಗೆದರೆ ಬೆಂಕಿಯಾಗುತ್ತಿದ್ದ. ಹೀಗಾಗಿ ಅಪ್ಪನೇ ಹೋಗುತ್ತಿದ್ದ. ಇಂಥದೇ ಒಂದು ಶನಿವಾರ ಕಾಯಿ ಒಡೆಸಿಕೊಂಡು ಗುಡಿಯ ಮೆಟ್ಟಲಿಳಿಯುತ್ತಿದ್ದವರು ಅಲ್ಲೇ ಕುಸಿದರು. ಎದೆಗೆ ಕೈಹಿಡಿದು ಕುಳಿತವರು ಏಳಲೇ ಇಲ್ಲ. ಶವವೇ ಮನೆಗೆ ಬಂದಿತ್ತು. ಗೋದಾವರಿಯ ಪ್ರಕರಣವು ಎರಡು ವರ್ಷಗಳಲ್ಲಿ ಅಷ್ಟು ತೀವ್ರವಾದ ಪರಿಣಾಮವನ್ನು ಬೀರಿತ್ತು. ಅವ್ವ ಮಾತ್ರ ಅರೆ ತಲೆಶೂಲೆಯಿಂದ ಮುಕ್ತಿ ಹೊಂದಲೇ ಇಲ್ಲ. ಅವಳು ನೌಕರಿ ಸಿಕ್ಕ ರಂಗಣ್ಣನೊಡನೆ ಊರುಬಿಟ್ಟ ಮೇಲೆ ಗೆಲುವಾಗಿದ್ದಳು. ಅಷ್ಟೊತ್ತಿಗೆ ಮನಸ್ಸು ಹಗುರವಾಗಿದ್ದರೂ ದೇಹದಲ್ಲಿ ಏನೂ ಉಳಿದಿರಲಿಲ್ಲ. ಎಷ್ಟೊಂದು ಲವಲವಿಕೆಯಿಂದ ಹೊಸ ಊರುಗಳಿಗೆ ಮತ್ತು ನಂತರ ಕುಸುಮಾಳೊಡನೆ ಹೊಂದಿಕೊಂಡಳು! ಕೊನೆಯ ಎಂಟು ದಿನ ಶ್ವಾಸ ಕೂಡಿತ್ತು. ರಂಗಣ್ಣ ಸೊಲ್ಲಾಪುರ ಬ್ರಾಂಚಿನಲ್ಲಿದ್ದಾಗಲೇ ಕೊನೆ ಉಸಿರೆಳೆದಳು.

ಸಂಜೆ ಐದು ಗಂಟೆಗೆ ಕುಸುಮಾ, ಬಕುಲಾ, ಗುರಣ್ಣ, ಅವನ ಹೆಂಡತಿ ಶಾಂತಾ ಎಲ್ಲರೂ ಒಟ್ಟಿಗೇ ಬಂದರು. ಬಕುಲಾ ಇದರಲ್ಲಿ ಮಹತ್ವದ ಪಾತ್ರ ಆಡಿದ್ದಳು. ಕುಸುಮಾ ಎಂದಿನಂತೆ ಭಯಗ್ರಸ್ತಳಾಗಿದ್ದಳು. ಗುರಣ್ಣ ಏನೂ ನಡೆದಿಲ್ಲ ಎಂಬಂತೆ ಒಳಗೆ ಒಂದು ಕುರ್ಚಿಯ ಮೇಲೆ ಕುಳಿತ.

''ಡಾಕ್ಟರ ಹತ್ರ ಹೋಗಿದ್ರೊ, ಇಲ್ರೊ?'', ಕುಸುಮಾ ಏದುಸಿರು ಬಿಡುತ್ತ ಕೇಳಿದಳು.

''ಜ್ವರ ಏನೊ ರಂಗಣ್ಣ?'', ಬಕುಲಾ ಕೇಳಿದಳು.

''ಮೊದ್ಲ ಕೂಡ್ರಿ. ನನಗ ಅಂಥಾದೇನಾಗಿಲ್ಲ.'' ರಂಗಣ್ಣ ಹೀಗೆ ಹೇಳಿದರೂ ನಡೆದ ವಿಷಯವನ್ನು ಹೇಗೆ ತಿಳಿಸುವುದೆಂದು ತಿಳಿಯದೆ ಅವರ ಮನಸ್ಸು ಒದ್ದಾಡುತ್ತಿತ್ತು. ಅವರು ನಡೆದ ಸಂಗತಿಯನ್ನು ವಿವರವಾಗಿ ತಿಳಿಸಿದಾಗ ಬಕುಲಾಳೊಬ್ಬಳನ್ನು ಬಿಟ್ಟು ಉಳಿದವರಾರೂ ಅದನ್ನು ಗಂಭೀರವಾಗಿ ತೆಗೆದುಕೊಂಡಂತೆ ತೋರಲಿಲ್ಲ. ಅವಳ ಕಣ್ಣಿಂದ ಮಾತ್ರ ನೀರು ಧಾರಾಕಾರವಾಗಿ ಸುರಿಯ ತೊಡಗಿತ್ತು. ಅವಳು ಮತ್ತು ಗುರಣ್ಣ ರಂಗಣ್ಣನ ತಂದೆಯನ್ನು 'ದಾದಾ' ಎಂದು ಕರೆಯುತ್ತಿದ್ದರು. ಏಕೆಂದರೆ ಅವರ ತಂದೆ ಹಾಗೆ ಕರೆಯುತ್ತಿದ್ದರು.



''ದಾದಾ, ಬದುಕ್ಯಾರಂತ ನಿನ್ನ ಅಭಿಪ್ರಾಯೇನೊ ರಂಗಣ್ಣ'' ಎಂದು ಬಕುಲಾ ತನ್ನ ಕಣ್ಣೀರನ್ನು ಒರೆಯಿಸಿಕೊಳ್ಳುತ್ತ ಕೇಳಿದಳು.

''ಆ ಗಾಡ್ಯಾಗ ನಾ ಅವನ್ನ ನೋಡಿದ್ದಂತೂ ಸುಳ್ಳಲ್ಲ. ಮತ್ತ ಇದು ಭ್ರಮಾ ಅಲ್ಲಂತ ನನಗ ಅಗದಿ ಖಚಿತ ಆಗೇದ'', ರಂಗಣ್ಣ ಹೇಳಿದರು.

''ನಿಮಗ ಮನಸು ಛೊಲೊ ಇಲ್ಲ. ಬೆಂಗಳೂರಿಗೆ ಹೋಗೋಣ ನಡಿರಿ'' ಕುಸುಮಾ ಬೇಡಿಕೊಳ್ಳೋ ಧ್ವನಿಯಲ್ಲಿ ಹೇಳಿದಳು.

''ಸಾಧ್ಯನ ಇಲ್ಲ. ನನಗ ಇದರ ಬಗ್ಗೆ ಒಂದಿಷ್ಟು ವಿಚಾರ ಮಾಡಿ ಅಥವಾ ಏನಾರ ಪ್ರಯತ್ನ ಮಾಡೇ ಹೋಗಬೇಕಾಗೇದ'' ರಂಗಣ್ಣ ನಿರ್ಧಾರದಿಂದ ಹೇಳಿದರು.

''ಏನಾರ ಅಂದ್ರ, ಏನು? ಸತ್ತವರನ್ನ ಹುಡುಕತಿಯೇನು? ನಮ್ಮಪ್ಪನೂ ಕನಸಿನಾಗ ಬರತಾನ. ಅವನ್ನ ಹುಡುಕಿಕೊಂಡು ಹೋದ್ರ, ಮಂದಿ ತಲಿಕೆಟ್ಟದ ಇವಗ ಅಂತಾರ'', ಗುರಣ್ಣ ಹೇಳಿದ.

''ನಾ ನೋಡಿದ್ದು ಕನಸಲ್ಲ. ಪ್ರತ್ಯಕ್ಷ ಅಪ್ಪನ್ನ ನೋಡೆನಿ''

''ನಾವ ಹೌದಲ್ಲೊ ದಾದಾನ್ನ ಸುಟ್ಟ ಬಂದದ್ದು? ಅಂದ ಮ್ಯಾಲ ಅವರು ಕಾಣಸಲಿಕ್ಕ ಹೆಂಗ ಸಾಧ್ಯದ?'', ಗುರಣ್ಣ ಸ್ವಲ್ಪ ಒರಟಾಗಿಯೇ ತನ್ನ ವಾದವನ್ನು ಮಂಡಿಸಿದ.

''ಗುರು, ನೀನು ಯಾಸಿ ಅಡ್ಡಿ ಮಾತಾಡ ಬ್ಯಾಡ. ಅಂವಗ ದಾದಾ ದರ್ಶನ ಕೊಟ್ಟಿರ ಬಹುದು. ಅವರು ದೇವರಂಥ ಮನುಷ್ಯಾರು. ಮಗಗ ದರ್ಶನ ಕೊಟ್ಟು ಹೋಗಿರಬಹುದು'', ಬಕುಲಾ, ಎಷ್ಟೇ ತಡೆದುಕೊಂಡರೂ ಹೊರ ಬರುತ್ತಿದ್ದ ಬಿಕ್ಕಳಿಕೆ ತಡೆಯದೆ ಹೇಳಿದಳು.

''ಬಕುಲಕ್ಕ ರಂಗಣ್ಣನವರು ನಾಲ್ಕು ದಿನ ಸುಧಾರಿಸಿಗೊಳ್ಳಿ. ಆಮೇಲೆ ಅವರ ಮನಸಿಗೇ ಖರೆ ಏನು ಅಂತ ಪಟಾಯಿಸಬಹುದು'', ಶಾಂತಾ ಹೇಳಿದಳು.

''ಇಲ್ಲ. ನಾನು ಹುಡುಕಬೇಕು'', ರಂಗಣ್ಣ ಸ್ವಲ್ಪ ಗಟ್ಟಿಯಾಗೇ ಹೇಳಿದರು.

ಯಾರೂ ಮಾತನಾಡಲಿಲ್ಲ. ಏನು ಹುಡುಕ ಬೇಕು, ಎಲ್ಲಿ ಹುಡುಕಬೇಕು ಎಂಬುದು ಯಾರಿಗೂ ಗೊತ್ತಾಗದೇ ಮೌನವಾಗಿ ಕುಳಿತರು.

ಸ್ವಲ್ಪ ಸಮಯದ ನಂತರ, ಬಕುಲಾ ನಿಧಾನಕ್ಕೆ ಹೇಳಿದಳು ''ನಾವು ಯಾರೂ ಅಜ್ಜನ್ನ ನೋಡಿರಲಿಲ್ಲ. ಅವರು ಬೆಟಗೇರಾಗ ಇದ್ರಂತ. ಸಣ್ಣ ವಯಸ್ಸಿನಾಗ ಹೆಂಡತಿನ್ನ ಕಳಕೊಂಡವ್ರಕ್ಕ ಒಬ್ಬಾಕಿನ್ನ ಇಟಗೊಂಡಿದ್ರಂತ. ಮುಸುಲ್ಮಾನ ರಾಕಿ. ನಮ್ಮ ಅಪ್ಪ-ಅಮ್ಮ ಈ ಸುದ್ದಿ ಏನಾದರೂ ನಮ್ಮ ಕಿವಿಗೆ ಬೀಳಬಾರದಂತ ಎಚ್ಚರ ವಹಿಸಿ ದರು. ಈಗ ನಿಮ್ಮ ಅಪ್ಪ, ಅವ್ವ ಇಲ್ಲ, ನಮ್ಮ ಅಪ್ಪ, ಅವ್ವಾನೂ ಇಲ್ಲ. ಅದನ್ನ ಕೇಳಬೇಕು. ತಿಳಕೋ ಬೇಕು''

''ಅವರು ಯಾರೊ ಏನೊ. ಎಲ್ಲಿದ್ದಾರೊ...'', ಗುರಣ್ಣ ಹೇಳಿದ.

ಶಾಂತಾಗೆ ಕುತೂಹಲ ಹುಟ್ಟಿತ್ತು. ಆದರೆ ಕುಸುಮಾಳಿಗೆ ಜಿಗುಪ್ಸೆ ಹುಟ್ಟಿತ್ತು.

''ಕೇಳಿದರ ಗೊತ್ತಾಗಬಹುದು'', ಶಾಂತಾ ಹೇಳಿದಳು.

''ಅದನ್ನೆಲ್ಲಾ ಕೆದಕಿ ಮಂದ್ಯಾಗ ನಗ್ಗೇಡಾದೀತು ನೋಡ್ರಿ. ಅದಕ್ಕ ಇದಕ್ಕ ಏನು ಸಂಬಂಧ ಅದ ಅಂತೀನಿ'', ಕುಸುಮಾ ಸಂಯಮ ಕಳೆದುಕೊಂಡಂತೆ ನುಡಿದಳು.

''ಸಂಬಂಧ ಅದ. ಖರೆ ಸಂಬಂಧ ಅದ. ಬಕುಲಾ, ಅವರ ಪೈಕಿ ಯಾರಿದ್ದಾರಂತ ನಿನಗ ಗೊತ್ತಿದ್ರ...'' ರಂಗಣ್ಣನ ಧ್ವನಿಯ ಆತುರ ಎಲ್ಲಾರನ್ನು ದಂಗುಬಡಿಸಿತು.

''ನನಗೂ ಲಗ್ನಾಗಿ ಹೋಗೋತನಕ ಗೊತ್ತಿದ್ದಿದ್ದಿಲ್ಲ. ನಮ್ಮ ದೂರದ ಸಂಬಂಧಿಕರು, ವಾಮನ ಮಾಮಾ, ಈಗ ಮಗನ ಹತ್ರ ಹುಬ್ಬಳ್ಯಾಗ ನಮ್ಮ ಮನಿ ಹತ್ರ ಇದ್ದಾರ. ಇಲ್ಲೆ ಗದಗಿನಾಗ ಕುರುಡರ ಆಶ್ರಮದ ಹತ್ರ ಇಟ್ಟಂಗಿಭಟ್ಟ ಅದ ಅಂತ. ರಸೂಲಸಾಬ ಅಂತ ಅದನ್ನ ನಡಸ್ತಾನಂತ. ಅವ ನಿಮಗ ಹತಗಡಿ ಆಗಬೇಕು ಅಂತ ವಾಮನ ಮಾಮಾ ಒಮ್ಮೆ ನಕ್ಕು ಹೇಳಿದ್ದರು...''

''ರಸೂಲಸಾಬನ್ನ ಹುಡುಕಬಹುದು...'', ರಂಗಣ್ಣ ಹೇಳಿದ.

''ಹೌದಪಾ ಹುಡುಕಿರಿ. ಮುಂದೇನು? ಬ್ಯಾಡೊ ರಂಗಣ್ಣ, ಇಂಥಾದೆಲ್ಲಾ ಹುಡುಕಲಿಕ್ಕೆ ಹೋಗಿ ಇನ್ನೇನಾರ ಆದೀತು'', ತನಗೆ ಯಾವುದರ ಭಯ ಎಂದು ಗೊತ್ತಾಗದೆ ಗುರಣ್ಣ ಹೇಳಿದ.


ಬಸವರಾಜ್

''ಹುಡುಕೋಣ ಬಿಡ್ರಿ. ಒಮ್ಮೆ ನೋಡಿ ದಂಗರ ಆಗತದ'', ಶಾಂತಾ ಹೇಳಿದಳು.

ಇದಾವುದರ ಹಿಂದು ಮುಂದು ಗೊತ್ತಾಗದೆ ಕುಸುಮಾ ದಂಗುಬಡಿದು ಕುಳಿತಿದ್ದಳು. ರಂಗಣ್ಣನಿಗೆ ಮಾತ್ರ ಯಾಕೋ ತನಗೆ ಸಣ್ಣದಾಗಿ ಜ್ವರ ಬರಲಾರಂಭಿಸಿದೆ ಎನ್ನಿಸಿತು. ಯಾರಿಗೂ ಹೇಳಲಿಲ್ಲ. ತಾಯಿ-ತಂದೆ ಇಬ್ಬರೂ ತಮ್ಮನ್ನೆಲ್ಲಾ ಇದರಿಂದ ದೂರ ಇಟ್ಟುಬಿಟ್ಟುದದರಿಂದ ತಾವೆಲ್ಲ ಏನೋ ಕಳೆದುಕೊಂಡುಬಿಟ್ಟಿದ್ದೇವೆ ಎಂಬ ಭಾವನೆಯು ರಂಗಣ್ಣನಲ್ಲಿ ಬಹು ವರ್ಷಗಳಿಂದ ಮನೆ ಮಾಡಿತ್ತು.

ಬಕುಲಾ, ರಂಗಣ್ಣನೊಡನೆ ಆ ರಾತ್ರಿ ಅಲ್ಲೇ ಇದ್ದು, ಮರುದಿನ ರಸೂಲ ಸಾಬನತ್ತ ಹೋಗುವುದೆಂದು ನಿರ್ಧರಿಸಿದಾಗ ಗುರಣ್ಣ ಮತ್ತು ಶಾಂತಾರಿಗೆ ವ್ಯಥೆಯಾಯಿತು. ಬಕುಲಾಗೆ ರಂಗಣ್ಣನ ತಂದೆ 'ದಾದಾ' ತನ್ನ ತಂದೆಗಿಂತ ಸಮೀಪದವರಾಗಿದ್ದರು. ಗುರಣ್ಣನ ತಂದೆಗೆ 'ದಾದಾ' ತಮ್ಮ ಪಾಲಿನ ಹೊಲಗಳನ್ನೂ ಬಿಟ್ಟು ಕೊಟ್ಟಿದ್ದರು. 'ದಾದಾ' ತಮ್ಮನಿಗಾಗಿ ಅಷ್ಟೆಲ್ಲಾ ಮಾಡಿದ್ದರೂ ತನ್ನ ತಂದೆ, ಓಸಿ ಆಟದಲ್ಲಿ ಹೊಲಗಳನ್ನೆಲ್ಲಾ ಅಡವಿಟ್ಟರು. ಮನೆಯನ್ನು ಬೆಟಗೇರಿಯಲ್ಲೇ ಇಟ್ಟರೆ ತಮ್ಮ ಇನ್ನಷ್ಟು ಹಾಳಾದಾನೆಂದು ಅವನನ್ನೂ ಗದುಗಿಗೆ ತಂದರು. ಒತ್ತಿ ಇಟ್ಟ ಹೊಲದಿಂದ ಉತ್ಪನ್ನವೇ ಇಲ್ಲವೆಂದಾಗ ಗುರಣ್ಣ ಮತ್ತು ಬಕುಲಾರನ್ನು ತಮ್ಮ ಮಕ್ಕಳೆಂಬಂತೆಯೇ ನೋಡಿಕೊಂಡರು ದಾದಾ. ಆದೆಲ್ಲದರ ಸ್ಮರಣೆ ಬಕುಲಾಗೆ ಇದ್ದಷ್ಟು ಗುರಣ್ಣನಿಗೆ ಇರಲಿಲ್ಲ. ಆದರೂ ಅಕ್ಕ, ತಮ್ಮ ಕೂಡಿದಾಗ ರಂಗಣ್ಣ, ಪ್ರಾಯಶಃ ಅವರ ಮನಸ್ಸಿನ ಅಂಚಿನಲ್ಲೇ ನಿಂತುಬಿಡುತ್ತಿದ್ದರು. ಇವತ್ತು ಮಾತ್ರ ಬಕುಲಾ ಬೇರೆ ಮನಸ್ಥಿತಿಯನ್ನೇ ತಲುಪಿದಂತಿತ್ತು. ಅವಳ 'ದಾದಾ' ರಂಗಣ್ಣನಿಗೆ ಕಂಡುದಕ್ಕಿಂತಲೂ ಹೆಚ್ಚಾಗಿ, ಅವರು ತನ್ನ ಅಪ್ಪನಿಗೆ ಮಾಡಿದ ಸಹಾಯಗಳು ಸ್ಮೃತಿ ಪಟಲದಲ್ಲಿ ಹಾದು ಹೋದವು. ಒತ್ತಿ ಹಾಕಿದ ಹೊಲ ಬಿಡಿಸಲು 'ದಾದಾ' ಮಾಡಿದ ಸಾಲಗಳ ಹೊರೆ ಕೊನೆಗೆ ರಂಗಣ್ಣನ ತಲೆಗೇ ಬಂತು. ತನ್ನ ತಂದೆತಾಯಿಗಳು ಯಾತ್ರೆಗೆಂದು ಹೋದವರು, ಹರಿದ್ವಾರದ ಬಳಿ ಉಂಟಾದ ಬಸ್ ಅಪಘಾತದಲ್ಲಿ ತೀರಿಹೋದರು. ಅವರ ಹೆಣಗಳೂ ದೊರೆಯಲಿಲ್ಲ. ಹನುಮಪ್ಪನ ಗುಡಿಕಟ್ಟೆಯ ಮೇಲೆ ದಾದಾ ಗೋಣು ಚೆಲ್ಲಿದಾಗ ಬಕುಲಾ ಭೋರ್ಯಾಡಿ ಅತ್ತಿದ್ದಳು.

ಗುರಣ್ಣ ಮತ್ತು ಶಾಂತಾ ಒಲ್ಲದ ಮನಸ್ಸಿನಿಂದ ಲಾಜಿಂಗ್‌ನಿಂದ ತಮ್ಮ ಮನೆಗೆ ಹೋದರು. ರಾತ್ರಿಯಿಡೀ ರಂಗಣ್ಣ ಮತ್ತು ಬಕುಲಾ ಹಳೆಯ ಹಲವಾರು ನೆನಪುಗಳನ್ನು ಮತ್ತು ಸುದ್ದಿಗಳನ್ನು ಮೆಲಕುಹಾಕಿದರು. ಕೇಳುವಷ್ಟು ಕೇಳಿ, ಕುಸುಮಾ, ಊಟ ಮಾಡಿ ಗಡದ್ದಾಗಿ ನಿದ್ದೆ ಹೋದಳು.

ಮರುದಿನ ಸ್ನಾನ, ತಿಂಡಿ ಮುಗಿಸಿಕೊಂಡು ಬಕುಲಾ, ರಂಗಣ್ಣ ಮತ್ತು ಕುಸುಮಾ ಆಟೋ ಮಾಡಿಕೊಂಡು ಹೊರಟರು. ಗುರಣ್ಣ ಹಿಂದಿನ ದಿನ ಎಲ್ಲಿಗೆ ಬರಬೇಕೆಂದು ಕೇಳಿಕೊಂಡು ಹೋಗಿರಲಿಲ್ಲ. ಹೀಗಾಗಿ ಬಕುಲಾ, ''ಬೇಕಂದ್ರ ಹುಡುಕಿಕೊಂಡು ಬರ್‍ತಾನ ನಡಿ'' ಎಂದು ಹೊರಡಿಸಿಯೇ ಬಿಟ್ಟಿದ್ದಳು. ರಸೂಲಸಾಬನ ಇಟ್ಟಂಗಿ ಭಟ್ಟಿಯನ್ನು ಕಂಡುಹಿಡಿಯುವುದು ಕಷ್ಟವಾಗಲಿಲ್ಲ. ಕುರುಡರ ಆಶ್ರಮದ ಹಿಂದೆ

ಎರಡೇ ಅಂಥ ಭಟ್ಟಿಗಳಿದ್ದವು. ಇವರು ಹೋದಾಗ ರಸೂಲ ಸಾಬನೆಂಬ ವ್ಯಕ್ತಿಯೊಂದು ಭಟ್ಟಿಯ ಎದುರೇ ನಿಂತಿತ್ತು. ಧೋತರ, ಅಂಗಿ ತಲೆಗೊಂದು ಕೆಂಪು ಬಣ್ಣದ ರುಮಾಲು. ವಯಸ್ಸು ಎಂಭತ್ತರ ಆಸುಪಾಸಿನಲ್ಲಿ ಇರಬಹುದು. ಜೆಸ್ಸು ಬಾಗಿರಲಿಲ್ಲ. ಕಣ್ಣಿಗೆ ಕನ್ನಡಕವಿರಲಿಲ್ಲ. ರಂಗಣ್ಣನ ಕಣ್ಣುಗಳು ಮಾತ್ರ ಅವನ ಮುಖದಲ್ಲಿ ಕಾಣಬಹುದಾದ ಎಲ್ಲ 'ಚಹರೆ'ಗಳನ್ನು ತನಗೆ ಗೊತ್ತಿಲ್ಲದಂತೆಯೇ ಅರಸತೊಡಗಿದ್ದವು. ಆ ಜರದ ಕೆಂಪು ಬಣ್ಣದ ರುಮಾಲೊಂದನ್ನು ಬಿಟ್ಟರೆ ಅವನ ವೇಷ ಭೂಷಣವೆಲ್ಲ ಹೆಚ್ಚು ಕಡಿಮೆ ಅಪ್ಪನಂತೆಯೇ ಇತ್ತು. ಆದರೆ ಮುಖದ ಚಹರೆಯಲ್ಲಿ ಮಾತ್ರ. ದೊಡ್ಡ ಅಗಲವಾದ ಮೂಗನ್ನು ಬಿಟ್ಟು ಉಳಿದಾವ ಮನೆತನದ ಚಹರೆಯನ್ನು ಹೊಂದಿರಲಿಲ್ಲ.

ರಸೂಲ ಸಾಬನಿಗೆ ಬಕುಲಾ, ತಾವು ಯಾರೆಂದು ಹೇಳಿದಳು. ಅಷ್ಟೊತ್ತಿಗೆ ಗುರಣ್ಣ ಮತ್ತು ಶಾಂತಾ ಅಲ್ಲಿಗೆ ಬಂದರು. ಗುರಣ್ಣ ಬಹು ಮೆದುವಾಗಿದ್ದಂತೆ ಕಂಡ.

''ಅಲ್ಲಿ ನೆಳ್ಳಾಗ ಹೋಗೂಣ ಬರ್ರಿ. ಇಲ್ಲಿ ಬಾಳ ಬಿಸಲೈತಿ'' ಎಂದು ಸ್ವಲ್ಪ ದೂರದಲ್ಲಿರುವ ಬೇವಿನ ಮರವನ್ನು ರಸೂಲಸಾಬನು ತೋರಿಸಿದ. ಎಲ್ಲರೂ ಮೌನವಾಗಿ ಅವನನ್ನು ಹಿಂಬಾಲಿಸಿದರು. ಅಂಥ ಬಿಸಿಲಿನಲ್ಲಿ ಮತ್ತು ಅಂಥ ಬಯಲು ಬೆಂಗಾಡಿನಲ್ಲಿ ಅಷ್ಟೊಂದು ತಂಪುನೆರಳನ್ನು ಹೊಂದಿದ ವಿಶಾಲವಾದ ಬೇವಿನಮರವೊಂದಿದೆ ಎಂಬುದನ್ನು ಊಹಿಸಲೂ ಸಾಧ್ಯವಿರಲಿಲ್ಲ. ಆ ಮರದ ಕೆಳಗೆ ಅಲ್ಲಲ್ಲಿ ಹಸಿರು ಹುಲ್ಲು ಇತ್ತು. ರಸೂಲಸಾಬನ ದಿನ ನಿತ್ಯ ಕೂಡುವ ಸ್ಥಳ ಅದಾಗಿರಬೇಕು. ಎಲ್ಲರೂ ಕುಳಿತರು. ಈಗ ವಿವರಣೆಯನ್ನು ನೀಡುವ ಸರದಿ ರಂಗಣ್ಣನದಾಗಿತ್ತು. ತಾನು ಗಾಡಿಯಲ್ಲಿ ಕಂಡ ದೃಶ್ಯವನ್ನು ವಿವರಿಸಿ ನಂತರ ಹೇಳಿದರು, ''ನೀವು ಇದನ್ನ ನಂಬಲಿಕ್ಕಿಲ್ಲ. ಆದರ ಕಣ್ಣಲೆ ಕಂಡದ್ದನ್ನ ಇಲ್ಲ ಅಂತ ಹ್ಯಾಂಗ ಹೇಳ್ಳಿ ಹೇಳರಿ''

''ನೀವು ಕಂಡದ್ದು ಖರೇನ ಇರಬೌದು. ಆದರ ನೀವು ಕಂಡವರು ನಿಮ್ಮ ಅಪ್ಪ ಅಲ್ಲ. ಅಂವ ನನ್ನ ತಮ್ಮ ಅಹಮದ ಇರಬೇಕು. ಅವನೂ ನೋಡಲಿಕ್ಕೆ ಥೇಟ್ ನಿಮ್ಮ ಅಪ್ಪನ ಥರಾನ ಅದಾನ. ಎಷ್ಟಂದರೂ ಒಂದೇ ತಂದಿ ಮಕ್ಕಳು.''

''ಅಂದ್ರ ಅವರು ಈಗ ನಿಮ್ಮ ಮನ್ಯಾಗ ಇದ್ದಾರೇನ್ರಿ?'', ರಂಗಣ್ಣ ತನ್ನ ಕುತೂಹಲ ಹತ್ತಿಕ್ಕಲಾರದ ಕೇಳಿದರು.

''ಅಹಮದಗೂ ನಮಗೂ ಸಂಬಂಧ ಕಡದು ಹೋಗಿ ಬಾಳ ವರ್ಷಾನ ಆತು. ನನಗ ಮನಿ ಅಂಬೋದು ಇಲ್ಲ. ಯಾಕಂದ್ರ ನಂದು ಮದುವಿ-ಗಿದವಿ ಆಗಿಲ್ಲ. ಅವಗ ಮಾತ್ರ ಮೊದ್ಲಿಂದಲೂ ನಿಮ್ಮ ಅಪ್ಪವರ ಥರಾನ ಆಗಬೇಕು ಅಂತ ಇತ್ತು. ಅವರ ಹಂಗ ಡ್ರೆಸ್ ಹಾಕ್ಕೊತಿದ್ದ. ವಯಸ್ಸಾದರೂ ಅವ ಹಾಗ ಅದಾನ. ಸಿಕಂದ್ರಾಬಾದವಾಗ ಅವನೂ ರೇಲ್ವೆ ಸ್ಕೂಲಿನಾಗ ಮಾಸ್ತರ ಆಗ್ಯಾನ. ಅವಗ ಮದುವಿ ಆಗೇತಿ. ಮಕ್ಕಳದಾವ. ನಿಮ್ಮ ಗೋದಾವರಿ ಆ ಹುಡುಗನ ಜೊತಿ ಹೋದಳಲ್ಲ, ಅವ, ಸುದ್ದಾ ಅಹಮದನ ಹೆಂಡತಿಗೆ ಬಾಳ ದೂರದ ಹತಗಡಿ ಇರಬೇಕು''

''ಅಂದ್ರ ನಮ್ಮ ಗೋದಾವರಿ ಎಲ್ಲಿದ್ದಾಳಂತ ಅವರಿಗೆ ಗೊತ್ತಿರಬಹುದೇನ್ರಿ?'', ಬಕುಲಾ ಕೇಳಿದಳು.

''ಸಾಧ್ಯನ ಇಲ್ಲ. ಅವ ಇಲ್ಲಿ ಸಂಪರ್ಕ ಪೂರ್ತಿ ಕಡ್ಡ ಕೊಂಡಾನ. ನಿಮ್ಮಪ್ಪ ಸತ್ತಾಗ ಅವ ಬಂದಿದ್ದ. ಅವರನ್ನ ಸುಟ್ಟ

ಜಾಗಾಕ್ಕ ಮರು ದಿನ ಅವ ಬರ್‍ತಾನಂತ ನನಗ ಅನಿಸಿತ್ತು. ನಾ ದೂರ ಹೋಗಿ ನಿಂತಿದ್ದೆ. ನಾ ಧ್ಯಾನಿಸಿದಾಂಗ ಅವ ಅಲ್ಲಿ ಬಂದು ತುಸು ಹೊತ್ತು ಕುಂತಿದ್ದ. ನೀವು ಅವನ್ನ ನಿನ್ನೆ ಹೌದಿಲ್ಲೊ ಗಾಡ್ಯಾಗ ನೋಡಿದ್ದು?''

''ಹೌದು'' ಎಂದ ರಂಗಣ್ಣ.

''ಬರೋಬರಿ ಆತು. ಇವತ್ತ ನಮ್ಮ ಅವ್ವ ಸತ್ತ ದಿನ. ಅಕಿ ಸತ್ತ ದಿನ, ಒಂದೊಂದು ವರ್ಸ, ಅಕಿ ಗೋರಿ ಹತ್ರ ರಾತ್ರಿ ಬಂದು, ಸ್ವಲ್ಪ ಹೊತ್ತು ಕುಂತುಗೊಂಡು ಹೊಕ್ಕಾನ. ಆದ್ರ ಇಲ್ಲೆ ಯಾರ ಜೊತಿ ಮಾತಾಡೊದಿಲ್ಲ. ಬಾರಿ ಸಿಟ್ಟಿನ ಮನಸ್ಯಾ ಅವ.''

''ಇವತ್ತ ರಾತ್ರಿ ಆ ಗೋರಿ ಹತ್ರ ಹೋದರ ಅವರನ್ನ ನೋಡಬಹುದೇನ್ರಿ?''

ರಸೂಲ ಸಾಬನ ಮುಖದ ಮೇಲೆ ಚಿಂತೆಯ ಗೆರೆಗಳು ಮೂಡಿದವು. ಮೊದಲೇ ಸುಕ್ಕುಗಟ್ಟಿದ ಆ ಮುಖದ ಮೇಲೆ ಮೂಡಿದ ಆ ಗೆರೆಗಳು ಅವನು ನೋಡಿದ ಮತ್ತು ಅನುಭವಿಸಿದ ಯಾತನೆಗಳಿಗೆಲ್ಲ ಮುಖವಾಣಿಯಾಗಿ ನಿಂತಂತಿದ್ದವು.

''ನಿಮ್ಮ ತಾಯಿ, ನಿಮ್ಮನ್ನ ಹಳೆದರಿಂದ ಇಷ್ಟು ವರ್ಸ ದೂರ ಇಟ್ಟಾರ. ಈಗ ಯಾಕ ಅವನ್ನ ನೋಡಾಕ ಹೊಕ್ಕಿರಿ. ಅವಗ ಹಳೆದರ ಬಗ್ಗೆ ಪ್ರೀತಿ ಐತೊ, ದ್ವೇಷ ಐತೊ ಅನ್ನೋದು ನನಗ ಸುದ್ದಾ ಬರೋಬರಿ ಗೊತ್ತಿಲ್ಲ. ನಿಮ್ಮ ಅಜ್ಜಾರು ನಮಗೇನು ಕಡಿಮಿ ಮಾಡಿರಲಿಲ್ಲ. ಕಣಗಿನ ಹಾಳದ ಹತ್ತಿ ಹೊಲ ಎಲ್ಲಾ ನಿಮ್ಮವ ಅದಾವ. ಅದರ ಮ್ಯಾಲ ನಾವು ಬಾಳೆ ಮಾಡಿಕೊಂತ ಬಂದಿವಿ...''

''ಆದ್ರ, ನಾನು ಅವರನ್ನ ನೋಡಲಿಕ್ಕ ಬೇಕು'' ಎಂದು ರಂಗಣ್ಣ ಹಟ ಹಿಡಿದರು.

''ಆತು. ಇವತ್ತ ಸಂಜಿ ಮುಂದ ಏಳು ಗಂಟೆಕ್ಕ ಬೆಟಗೇರಿ ತೆಂಗಿನಕಾಯಿ ಜಣ್ಯಾಗ ಆಲದ ಮರದ ಹತ್ಯಾಕ ಬರ್ರಿ. ನಾ ಕಾಯಿತಿರ ತೇನಿ. ಸ್ವಲ್ಪ ದೂರ ಹೋದರ ಗೋರಿ ಅದಾವ. ಅವಾ ಎಂಟು ಎಂಟೂವರಿ ಹೊತ್ತಿಗೆ ಅಲ್ಲಿ ಬರ್‍ತಾನ''

ಈ ರೀತಿ ಕಾರ್ಯಕ್ರಮ ನಿಶ್ಚಿತವಾದ ಮೇಲೆ ನಾಲ್ವರೂ ಅಲ್ಲಿಂದ ಹೊರಟರು. ರಂಗಣ್ಣನಿಗೇನೋ ರಸೂಲಸಾಬನ ಹತ್ತಿರ ಇನ್ನೂ ಒಂದಿಷ್ಟು ಹೊತ್ತು ಮಾತನಾಡುವ ಆಸೆ ಇತ್ತು. ಆದರೆ ರಂಗಣ್ಣ ಅಲ್ಲೇ ಇರುವವ. ಬಕುಲಾ ಇದನ್ನೆಲ್ಲಾ ಅರಿತವಳಂತೆ ಅವರನ್ನು ಹೊರಡಿಸಿದಳು. ಮಕ್ಕಳು ಸ್ಕೂಲಿಗೆ ಹೋದುದರಿಂದ ರಂಗಣ್ಣ ಮತ್ತು ಶಾಂತಾ ಕೂಡ ಲಾಜಿಗೆ ಬಂದರು. ಸಂಜೆಯವರೆಗೆ ಊಟ, ಚಹಾ, ತಿಂಡಿ-ತಿನಿಸುಗಳ ಕಾರ್ಯಕ್ರಮ ಮುಗಿಸಿಕೊಂಡು ಅವರು, ಮಕ್ಕಳ ವ್ಯವಸ್ಥೆ ಮಾಡಿ ಬೆಟಗೇರಿಗೆ ಬರುವುದಾಗಿ ತಿಳಿಸಿ ಹೋದರು. ಗದಗ-ಬೆಟಗೇರಿ ಒಂದೇ ಊರು. ರೈಲು ಹಳಿ ಮಾತ್ರ ಈ ಎರಡು ಹೆಸರುಗಳನ್ನು ಭೇದಿಸಿದೆ. ಕುಸುಮಾ ಬರುವುದು ಬೇಡವೆನ್ನಿಸಿತ್ತು ರಂಗಣ್ಣನಿಗೆ. ಆದರೆ ಅವಳೂ ಬರುವ ಹಟ ಹಿಡಿದಳು. ಸಂಜೆ ಇವರು ಆ ಆಲದ ಮರದ ಬಳಿ ಹೋಗುವ ವೇಳೆಗೆ ರಸೂಲಸಾಬ ಕಾದುನಿಂತಿದ್ದ. ಆತನ ಕೈಲೊಂದು ಲಾಂಧ್ರವಿತ್ತು. ರಂಗಣ್ಣ ಮತ್ತು ಶಾಂತಾ ಬಂದು ಸೇರಿಕೊಂಡರು. ರಸೂಲಸಾಬ ಹೆಚ್ಚು ಮಾತನಾಡದೆ ನಡೆದ. ರಸ್ತೆಯ ಬೆಳಕಿರುವ ತನಕ ಲಾಂಧ್ರದ ಅವಶ್ಯಕತೆ ಉಂಟಾಗಲಿಲ್ಲ. ಆದರೆ ಊರು ದಾಟಿದ ಮೇಲೆ ಕವಲು ದಾರಿಯೊಂದನ್ನು ತುಳಿಯುವಾಗ ಆ ಲಾಂಧ್ರದ ಬೆಳಕು ಆಪ್ಯಾಯಮಾನವಾಗಿ ತೋರಿತು. ಹೋಗುವಾಗ ರಸ್ತೆಯ ಬದಿಯ ದೊಡ್ಡ ಮನೆಯನ್ನು ತೋರಿಸಿ, ''ಅದು ನಮ್ಮ ಅವ್ವನ ಗೋರಿ'' ಎಂದು ಲಾಂಧ್ರದ ಬೆಳಕನ್ನು ಚಿಕ್ಕದು ಮಾಡಿದ.

ಸುಮಾರು ಹದಿನೈದು ನಿಮಿಷ ಕಾದಿರಬಹುದು. ರಸೂಲಸಾಬನ ಊಹೆ ಸುಳ್ಳಾಗಲಿಲ್ಲ.

ಬ್ಯಾಟರಿಯ ಬೆಳಕೊಂದು ನಿಧಾನಕ್ಕೆ ಗೋರಿಯ ಬಳಿ ಬಂದಿತು. ನಾಲ್ವರೂ ಉಸಿರು ಬಿಗಿ ಹಿಡಿದು ಕಾದರು. ಬಂದ ವ್ಯಕ್ತಿಯು ಟಾರ್ಚ್‌ನ್ನು ಗೋರಿಯ ಮೇಲಿಟ್ಟ. ಬೆಳಕು ಸ್ಪಷ್ಟವಾಗಿ ಅವನ ಮುಖದ ಮೇಲೆ ಬೀಳುತ್ತಿತ್ತು. ರಂಗಣ್ಣ ಗಾಡಿಯಲ್ಲಿ ಕಂಡ ದೃಶ್ಯ ಮತ್ತೆ ಕಂಡಿತು. ''ಹುಬೇಹುಬ ದಾದಾ'', ಬಕುಲಾ ಪಿಸುದನಿಯಲ್ಲಿ ನುಡಿದಳು. ಗುರಣ್ಣ ತನಗೆ ಗೊತ್ತಿಲ್ಲದಂತೆ ರಂಗಣ್ಣನ ಕೈಹಿಡಿದುಕೊಂಡಿದ್ದ. ಆ ವ್ಯಕ್ತಿ ಸ್ವಲ್ಪ ಹೊತ್ತು ಅಲ್ಲಿ ಕುಳಿತಿದ್ದು, ನಂತರ ಕರ್ಚೀಫಿನಿಂದ ಒಂದು ಸಲ ಆ ಗೋರಿಯನ್ನು ಸ್ವಚ್ಛಗೊಳಿಸಿತು. ತಲೆಗೆ ಕರಿಟೋಪಿಯಂತೂ ಇದ್ದೇ ಇತ್ತು. ನಮಾಜು ಮಾಡುವವರಂತೆ ಕುಳಿತಿತು. ಸ್ವಲ್ಪ ಸಮಯ ಹಾಗೆ ಧೇನಿಸಿ, ಹೇಗೆ ಬಂದಿತ್ತೋ ಹಾಗೇ ಹೊರಟುಹೋಯಿತು. ರಂಗಣ್ಣ ತನಗರಿವಿಲ್ಲದಂತೆಯೇ ಆ ಗೋರಿಯ ಬಳಿ ಸಾಗಿದರು. ಉಳಿದವರೂ ಹಿಂಬಾಲಿಸಿದರು. ಮುಟ್ಟಿದರು, ಪ್ರದಕ್ಷಿಣೆ ಹಾಕಿದರು. ಅವರು ಯಾಕೆ ಹಾಗೆ ಮಾಡುತ್ತಿದ್ದಾರೆಂದು ಅವರಿಗೂ ಗೊತ್ತಿರಲಿಲ್ಲ, ರಸೂಲಸಾಬನಿಗೂ ಗೊತ್ತಿರಲಿಲ್ಲ.

ಬೆಟಗೇರಿಯ ಗಾಳಿ ಹಳಿಯವರೆಗೆ ರಸೂಲ ಸಾಬ ಕಳಿಸಲು ಬಂದ.

''ಇನ್ನೊಮ್ಮೆ ಬಂದಾಗ ಬರ್ತೀನಿ'', ಎಂದ ರಂಗಣ್ಣ.

''ಬರ್ರಿ. ಅಗತ್ಯ ಬರ್ರಿ'' ಎಂದಿಷ್ಟೇ ಹೇಳಿ ಆ ಮುದುಕ ಮರಳಿ ಹೊರಟ. ಕೈಯಲ್ಲಿ ಅವಶ್ಯವಿಲ್ಲದಿದ್ದರೂ ಲಾಂಧ್ರವು ದೊಡ್ಡದಾಗಿ ಉರಿಯುತ್ತಿತ್ತು.

''ಮಕ್ಕಳನ್ನ ಕರಕೊಂಡು ನಾವೂ ಲಾಜಿಗೇ ಬರ್ತೀವಿ. ಅಂದ್ರ ಎಲ್ಲಾರೂ ಅಲ್ಲೇ ಊಟಾ ಮಾಡಿ ಮಾತಾಡ್ತ ಕೂಡಬಹುದು...'' ಶಾಂತಾ ಹೇಳಿದಳು.

''ಹೌದು'' ಎಂದ ರಂಗಣ್ಣ.

ರಂಗಣ್ಣ ಮತ್ತು ಬಕುಲಾ ಆಟೋ ಹತ್ತಿ ಲಾಜಿಗೆ ನಡೆದರು. ಆ ನಾಲ್ವರಲ್ಲಿ ಈಗ ಸಣ್ಣ ಪುಟ್ಟ ಯಾವ ಭಿನ್ನಾಭಿಪ್ರಾಯಗಳೂ ಇದ್ದಂತೆ ತೋರಲಿಲ್ಲ. ಗುರಣ್ಣನಿಗೆ ಆದಷ್ಟು ಬೇಗ ರಂಗಣ್ಣ ಮತ್ತು ಬಕುಲಾರನ್ನು ಕೂಡಿಕೊಳ್ಳುವ ಆತುರವಿದ್ದಂತಿತ್ತು.



ಆದರೆ ಚಿತ್ರ ರಾಜ ನೋಡುತ್ತಿದ್ದ ಆ ಎರಡು ಕಣ್ಣುಗಳು
ಮಾತ್ರ ಏಕೋ ಹಾಗೇ ತನ್ನನ್ನೇ
ನೋಡಿದಂತೆ- ಅನ್ನಿಸುತ್ತಿತ್ತು.



ಮಾಧವ ಕುಲಕರ್ಣಿ.




# ಡಬಲ್ ತಪ್ಪು?!

ನಮ್ಮ ತಂದೆ ಸ್ಟೇಶನ್ ಮಾಸ್ಟರ್. ನಾವು ಏಳು ಜನ ಮಕ್ಕಳು. ಪ್ರತಿ ಮೂರು ವರ್ಷಕ್ಕೆ ವರ್ಗಾವಣೆಯಿಂದ ಬದಲಾಗುತ್ತಿದ್ದ ರೈಲ್ವೆ ನಿಲ್ದಾಣ, ವಿದ್ಯುಚ್ಛಕ್ತಿಯ ಪರಿಚಯವೇ ಇಲ್ಲದ ಊರು-ಮನೆಗಳಿಂದ ದೂರವಾದ, ಗಿಡ, ಮರ, ಪ್ಲಾಟ್‌ಫಾರಂ, ಬ್ರಿಟಿಷರ ಕಾಲದ ಎತ್ತರದ ಮಂಗಳೂರು ಹೆಂಚಿನ ಸ್ಟೇಶನ್ ಮತ್ತು ಕ್ವಾರ್ಟರ್ಸ್ ಇವುಗಳ ಸುತ್ತ ನಮ್ಮ ಬಾಲ್ಯ, ಆಟಪಾಠಗಳು. ನಮ್ಮ ಮನೆಯಲ್ಲದೆ, ಪಾಯಿಂಟ್ಸ್‌ಮನ್‌ಗಳೆಂದು ಕರೆಯಲ್ಪಡುವ ನಾಲ್ಕನೇ ದರ್ಜೆಯ ಇಬ್ಬರು ನೌಕರರ ಮನೆಗಳು, ನಿಯಮಿತವಾಗಿ ಎರಡು ಪ್ರಯಾಣಿಕರ ರೈಲು, ಒಂದು ಗೂಡ್ಸ್ ರೈಲನ್ನು ಬಿಟ್ಟರೆ, ಬೇರ್ಯಾವ ರೈಲೂ ಬರದ ನ್ಯಾರೋ ಗೇಜ್‌ನ ಆ ಊರಿನಲ್ಲಿ, ವಾರಕ್ಕೊಮ್ಮೆಯಷ್ಟೇ ನಮ್ಮ ತಂದೆಗೆ ರಜೆ ಕೊಡುತ್ತಿದ್ದ ಮತ್ತೊಬ್ಬ ಸ್ಟೇಶನ್‌ಮಾಸ್ಟರ್. ಹೀಗಾಗಿ ನಮಗೆ ಮನೆ, ನಮ್ಮ ತಂದೆಯ ಆಫೀಸು ಎಲ್ಲವೂ ಒಂದೇ.

ಮನೆಯಲ್ಲಿದ್ದ ಹಸುಕರುಗಳು ಮತ್ತು ಚಿಕ್ಕಮಕ್ಕಳು ನಮ್ಮ ಓದಿಗೆ ತೊಂದರೆಯಾಗಬಾರದೆಂದು ದೊಡ್ಡವರಾದ ನಾವು ನಾಲ್ಕು ಜನಕ್ಕೆ, ಸ್ಟೇಶನ್ನಿನಲ್ಲೇ ಓದುವ, ಮಲಗುವ ವ್ಯವಸ್ಥೆ ಮಾಡಲಾಗಿತ್ತು. ಶಿಸ್ತಿನ ಸಿಪಾಯಿಯಾದ ನಮ್ಮ ತಂದೆಯ ಕ್ರಮಬದ್ಧ, ಶ್ರದ್ಧಾಪೂರ್ವಕ ಸ್ವಭಾವದಿಂದಾಗಿ, ರೈಲು ಸಂಚಾರಕ್ಕಾಗಲೀ, ನಮ್ಮ ವಿದ್ಯಾಭ್ಯಾಸಕ್ಕಾಗಲೀ ಯಾವ ತಡೆಯೂ ಇರಲಿಲ್ಲ. 9ನೇ ತರಗತಿಯಲ್ಲಿದ್ದ ನಮ್ಮಣ್ಣ ಹಿರಿಯವನಾದರೆ, ಕೊನೆಯವನಾದ ನನ್ನ ತಮ್ಮ ತುಂಟ. ನಮ್ಮ ತಂದೆ ರಾತ್ರಿ ಮನೆಗೆ ಹೋದಮೇಲೆ, ನಾವು ನಾಲ್ಕೂ ಜನ ಎಷ್ಟರ ಮಟ್ಟಿಗೆ ಓದುತ್ತಿದ್ದೇವೆಂಬುದು ಈಗಲೂ ನಗು ತರುವ ವಿಷಯ.

ಒಂದು ರಾತ್ರಿ ದೊಡ್ಡದಾದ, ಆ ಕಾಲದ ಸೀಮೆಎಣ್ಣೆ ದೀಪದ ಸುತ್ತ ಕುಳಿತು ಓದುವಾಗ, ನಮ್ಮ ತುಂಟತನ, ತರಲೆ, ಜಗಳಗಳಲ್ಲಿ, ನನ್ನ ತಮ್ಮ ದೀಪದ ಚಿಮಣಿಯನ್ನು ಒಡೆದುಹಾಕಿದ. ಸುತ್ತಲೂ ಕತ್ತಲೆ. ನಮ್ಮಪ್ಪಾಜಿಗೆ ತಿಳಿದರೆ ಏನು ಮಾಡಬಹುದೆಂದು ಯೋಚಿಸಿ, ನನ್ನ ಕಾಲುಗಳು ನಡುಗಹತ್ತಿದವು. ತಕ್ಷಣ ನಮ್ಮಣ್ಣ, ನನ್ನನ್ನುದ್ದೇಶಿಸಿಯೇ ಹೇಳಿದ, ''ಯಾರೂ ಈ ವಿಷಯ ಅಪ್ಪಾಜಿಗೆ ತಿಳಿಸುವುದು ಬೇಡ. ನಾ[…] ಪಕ್ಕದ ಸ್ಟೇಶನ್ ಮಾಸ್ಟರರಿಂದ ಇನ್ನೊಂದನ್ನು ತರುತ್ತೇನೆ''. ನನಗಂತೂ ಹೇಳುವುದನ್ನು ಹೇಳಿ[…]




ನಿರಾಳವಾಗಿಬಿಡುವ ಮನಸ್ಸು. ಧೈರ್ಯಮಾಡಿ, ಆ ಕತ್ತಲಿನಲ್ಲೇ ಮನೆಗೆ ಓಡಿದೆ. ಇವರೆಲ್ಲಾ ನನ್ನ ಬೆನ್ನ ಹಿಂದೆಯೇ ಬಂದರು. ಕಿಟಕಿಯಲ್ಲಿ ನಮ್ಮಮ್ಮನಿಗೆ ವರದಿ ಒಪ್ಪಿಸಿದೆ. ಪರಿಸ್ಥಿತಿಯ ಗಂಭೀರತೆಯನ್ನರಿತ ನಮ್ಮಮ್ಮ, ಹಿಂದಿನ ಬಾಗಿಲಿಂದ ನಮ್ಮನ್ನೆಲ್ಲಾ ಒಳಗೆ ಕರೆಸಿ, ಒಳಕೋಣೆಯಲ್ಲಿ ಸಾಲಾಗಿ ಮಲಗುವ ವ್ಯವಸ್ಥೆ ಮಾಡಿದರು. ನಮ್ಮಣ್ಣ ನನ್ನನ್ನು ಬೈಯ್ಯುತ್ತಲೇ ಇದ್ದ. ವಿಷಯ ತಿಳಿದ ನಮ್ಮ ತಂದೆ, 'ನಾಳೆ ಇವರಿಗೆಲ್ಲ ಸರಿಯಾಗಿ ಮಾಡುತ್ತೇನೆ' ಎಂದು ಸ್ಟೇಶನ್ನಿಗೆ ಹೋಗಿ, ಬೀಗ ಹಾಕಿಕೊಂಡು ಬಂದರು.

ಅಂದಿನ ರಾತ್ರಿ, ಜನಗಳೇ ಇಲ್ಲದ, ಆ ಕಗ್ಗಾಡಿನಲ್ಲಿ ಎಂತಹ ಭೀಕರ ಮಳೆ ಗಾಳಿಯೆಂದರೆ, ಮನೆ ಮೇಲಿನ ಕೆಲವು ಹೆಂಚುಗಳು ಬಿದ್ದು, ಮನೆ ಮುಂದಿನ ಪಾರಿಜಾತ ಮರಗಳು ದೂರದ ರೈಲುಹಳಿಗಳನ್ನು ಮುಚ್ಚಿ, ಹಿಂದಿರುವ ಕೊಟ್ಟಿಗೆಯ ತಗಡುಗಳು ಚೆಲ್ಲಾಪಿಲ್ಲಿಯಾಗಿ, ಹಸುಕರುಗಳು ರಾತ್ರಿಯೆಲ್ಲಾ ಗಾಬರಿಯಿಂದ ಅರಚುತ್ತ ಅದೊಂದು ಕರಾಳರಾತ್ರಿಯಾಯಿತು. ಆ ಅನುಭವ ಈಗಲೂ ಭಯ ಹುಟ್ಟಿಸುವಂತಿದೆ. ರಾತ್ರಿಯೆಲ್ಲಾ ಸಣ್ಣಮಕ್ಕಳನ್ನು ಹಿಡಿದುಕೊಂಡು ನಮ್ಮಮ್ಮ, ಅಪ್ಪಾಜಿ ಹೇಗೆ ಕುಳಿತಿದ್ದರೆಂದರೆ, ಇಂದಿನ ನಗರದ ಬದುಕಿನಲ್ಲಿ ನಾವೆಷ್ಟು ಸುರಕ್ಷಿತರು ಎನಿಸುತ್ತದೆ.

ಮರುದಿನ ಬೆಳಗಾಗುವುದನ್ನೇ ಕಾದು, ನಾವೆಲ್ಲರೂ, ಜೊತೆಗೆ ಆ ಇಬ್ಬರು 'ಪಾಯಿಂಟ್ಸ್‌ಮನ್'ಗಳೂ ಸ್ಟೇಶನ್ ಬಳಿ ಹೋದೆವು. ಅಲ್ಲೇನಿದೆ? ಬರಿಯ ನಾಲ್ಕು ಗೋಡೆಗಳು, ಇನ್ನೆಲ್ಲ ಬಟಾಬಯಲು. ಅಷ್ಟು ಎತ್ತರದಲ್ಲಿದ್ದ ಹೆಂಚುಗಳು ಚೂರುಚೂರಾಗಿ, ಇಡೀ ಸ್ಟೇಶನ್ನಿನ ಒಳ ಆವರಣ ನೀರು. ಅಲ್ಲಿದ್ದ ಸಾಮಾನು ಚೆಲ್ಲಾಪಿಲ್ಲಿಯಾಗಿ, ಟೆಲಿಗ್ರಾಫಿ ಪುಸ್ತಕಗಳು ನುಚ್ಚುನೂರಾಗಿದ್ದವು. ನನ್ನ ತಮ್ಮನ ಮುದ್ದು ತಪ್ಪಿನಿಂದಾಗಿ ನಮ್ಮೆಲ್ಲರ ಪ್ರಾಣ ಉಳಿದ ಬಗ್ಗೆ ಎಲ್ಲರೂ ಕೊಂಡಾಡುವರೇ ಹೊರತು, ನನ್ನ ಚಾಡಿಯನ್ನು ಯಾರೂ ಸ್ಮರಿಸಲೇ ಇಲ್ಲ. ಒಟ್ಟಿನಲ್ಲಿ ನಮ್ಮಿಬ್ಬರಲ್ಲಿ ಯಾರದು ಮುದ್ದು ತಪ್ಪು?



**ರೇಣುಕಾ ಮಂಜುನಾಥ್**



## ಅಷ್ಟಮೂರ್ತಿ

# ರಾಗ ಚಂದ್ರಮಧು

ಕನ್ನಡಕ್ಕೆ: ಎಂ.ಎಸ್. ಲಕ್ಷ್ಮಣಾಚಾರ್

ಬಾಗಿಲು ತಟ್ಟಿದ ಶಬ್ದವನ್ನು ಕೇಳಿದಾಗ ಉಸ್ತಾದ್ ಅಮೀರ್ ಖಾನ್ ಎದ್ದರು. ಆ ತಟ್ಟುವ ಶಬ್ದದೊಂದಿಗೇ ಗಾಜಿನ ಬಳೆಗಳ ಗಲ ಗಲ ಶಬ್ದವೂ ಕೇಳಿಸಿದಾಗ ಗೊತ್ತಾಯಿತು - ಜೂತಿಕಾ ಬಂದಿದ್ದಾಳೆ. ರಾತ್ರಿ ನಿದ್ದೆ ಮಾಡದ ವ್ಯಥೆಯನ್ನೇ ತೊಳೆದುಹಾಕಿ ಜೂತಿಕಾ ಬಂದಿದ್ದಾಳೆ.

ವೇಶ್ಯೆಯರು ಬಳೆ ಹಾಕಿಕೊಳ್ಳುತ್ತಾರೆಯೇ? ಮೊಟ್ಟ ಮೊದಲು ಅವಳನ್ನು ಕಂಡಾಗಲೇ, ಉಸ್ತಾದರಿಗೆ ಆ ಸಂದೇಹ ಉಂಟಾಗಿತ್ತು. ಪುರುಷ ಕಾಮವೇದನೆಯಿಂದ ತುಡಿಯುತ್ತಿರಬೇಕಾದರೆ ಗಲ ಗಲ ಶಬ್ದಮಾಡಬಾರದೆಂದೂ, ಅಪಸ್ವರಗಳು ಏಳದಿರಲು ಬಳೆಗಳನ್ನೋ, ಕಾಲು ಗೆಜ್ಜೆಗಳನ್ನೋ ಧರಿಸಬಾರದೆಂದೂ ಆಯಾಗಳು ವೇಶ್ಯೆಯರನ್ನು ಎಚ್ಚರಿಸುವುದುಂಟೆಂದು ಉಸ್ತಾದ್ ಕೇಳಿದ್ದರು.

ಜೂತಿಕಾಳ ಪರಿಚಯವಾಗಿ ಬಹು ವರ್ಷಗಳು ಕಳೆದ ನಂತರ ಉಸ್ತಾದ್‌ರು ತಮ್ಮ ಸಂಶಯ ಅವಳ ಬಳಿ ಹೇಳಿಕೊಂಡಿದ್ದರು. ಜೂತಿಕಾ ನಕ್ಕುಬಿಟ್ಟಿದ್ದಳು.

ಅವಳು ಹೇಳಿದ್ದಳು: ''ಉಸ್ತಾದ್, ತಮ್ಮ ಸನ್ನಿಧಿಗೆ ಬಂದು ಸೇರುವಾಗ ನಾನು ವೇಶ್ಯೆಯಲ್ಲ. ರಾತ್ರಿಯ ಒಂದೊಂದು ನಿಮಿಷ ಕಳೆಯುವಾಗಲೂ ನಾನು ಕಿವಿಗೊಟ್ಟು ಮಲಗಿರುವುದೇ ನನ್ನ ಪದ್ಧತಿ. ನನ್ನ ದೇಹದಲ್ಲಿ ಪ್ರೇಮವನ್ನು ಕಂಡುಹಿಡಿಯುವವರ ರಭಸದ ಮೇಲುಸಿರುಗಳಲ್ಲಿ ನಾನು ಕ್ಷಣಗಳನ್ನು ಎಣಿಸುತ್ತೇನೆ. ಐದು ಗಂಟೆಯಾದರೆ ಸಾಕೆಂದು ನಾನು ಅವಸರ ಪಡುತ್ತಿರುತ್ತೇನೆ, ಉಸ್ತಾದ್''

ಅಮೀರ್‌ಖಾನ್ ಬಾಗಿಲು ತೆರೆದರು. ಜೂತಿಕಾ ರೂಢಿಯಂತೆ ಶುಭ್ರಸ್ನಾತಳಾಗಿ ಬಂದಿದ್ದಳು.

''ನಮಸ್ಕಾರ, ಉಸ್ತಾದ್. ನಿಮಗೆ ನಿದ್ದೆ ಚೆನ್ನಾಗಿ ಬಂತೆ?''

''ಹೌದು ಜೂತಿಕಾ, ಬಂತು. ನಿನಗೆ?''

''ನಾನೂ ಚೆನ್ನಾಗಿ ನಿದ್ದೆ ಮಾಡಿದೆ, ಉಸ್ತಾದ್.''

ಎಂದಿನಂತಿನ ಪ್ರಶ್ನೆಗಳು, ಉತ್ತರಗಳು.

''ರಾತ್ರಿಯೆಲ್ಲಾ ನಿನಗೆ ನಿದ್ದೆ ಇಲ್ಲವೆಂದು ನನಗೆ ತಿಳಿಯದೆ ಏನೂ ಇಲ್ಲ ಜೂತಿಕಾ. ನಿನ್ನ



ಮೇಲೆ ಕಾಮದ ಭಯವನ್ನು ಸುರಿಸುವ ಹೆಡೆಗಳನ್ನಾಡಿಸುತ್ತಾ ಅಂಕೆಗೆ ಸಿಲುಕದ ಜನ್ಮಗಳು ಕಾದಿರುವಾಗ ನೀನು ಹೇಗೆ ತಾನೆ ನಿದ್ರಿಸಬಲ್ಲೆ? ಆದರೂ ಉಪಚಾರದ ಮಾತುಗಳಿಗೆ ಕೊರತೆ ಇರಬಾರದಲ್ಲಾ? ಆದ್ದರಿಂದ ಅರ್ಥವಿಲ್ಲವೆಂದು ತಿಳಿದಿದ್ದೂ ಅವಿವೇಕಿಯಂತೆ ಕೇಳುತ್ತಿದ್ದೇನೆ.

''ಆದರೆ ನಿನಗೆ ಗೊತ್ತಿಲ್ಲದ ರಹಸ್ಯವೊಂದಿದೆ. ನಾನೂ ಇತ್ತೀಚೆಗೆ ರಾತ್ರಿಗಳಲ್ಲಿ ಸರಿಯಾಗಿ ನಿದ್ದೆ ಮಾಡುವುದೇ ಇಲ್ಲ. ಬೆಳಕು ಹರಿಯುವವರೆಗೂ, ಬೆಳಗಾಗುವವರೆಗೂ ಸುಮ್ಮನೆ ಹಾಸಿಗೆಯಲ್ಲಿ ಹೊರಳಾಡುತ್ತಾ ಮಲಗಿರುವೆ. ಅರ್ಧರಾತ್ರಿಯವರೆಗೂ ಸೇತುವೆಗಳ ಮೇಲೆ ಹಾದು ಹೋಗುವ ವಿದ್ಯುತ್ ಟ್ರೈನ್‌ಗಳ ಉಸಿರಾಟಗಳನ್ನು ಕೇಳುತ್ತಲೂ, ಬೇಟೆಯನ್ನು ಹುಡುಕಿ ನಡೆಯುವವರೊಂದಿಗೆ ಮಾತನಾಡುವ ತಲೆಹಿಡುಕರ ಮೆಲ್ಲಗಿನ ಮಾತುಕತೆಗಳನ್ನು ಕೇಳುತ್ತಲೂ, ಸುತ್ತಲೂ ಇರುವ ವೇಶ್ಯೆಯರ ಮನೆಗಳಲ್ಲಿನ ಪುರುಷರು ಬೀಳ್ಕೊಂಡು ಹೋಗುವ ಮಾತುಗಳನ್ನು ತಿಳಿಯುತ್ತಲೂ... ಹೀಗೆ ಐದು ಗಂಟೆ ಹೊಡೆಯುವವರೆಗೂ ನಾನೂ ಕಾದು ಮಲಗುವುದು ರೂಢಿಯಾಗಿಹೋಗಿದೆ.''

ಜೂತಿಕಾ ಅಡಿಗೆ ಮನೆಯನ್ನು ಪ್ರವೇಶಿಸಿದಳು. ಉಸ್ತಾದರು ಮಿಂದು ಶುಭ್ರವಾಗಿ ಬರುವುದಕ್ಕೆ ಮುಂಚೆ ಹಾಲಿಲ್ಲದ ಕಪ್ಪು ಕಾಫಿ ಕುಡಿಯು

ತ್ತಾರೆ. ಅವರಿಗೆ ಅದು ರೂಢಿಯಾಗಿತ್ತು. ಅದನ್ನು ಅವರು ಕುಡಿದು ಮುಗಿಸುವವರೆಗೂ, ಅವಳು ಆತನ ಹತ್ತಿರವೇ ಇರುವಳು. ಆ ಸಮಯದಲ್ಲೇ ಉಸ್ತಾದ್ ಮಹಾಗಾಯಕರ ಬಗ್ಗೆ, ಅವರ ಕೃತಿಗಳ ಬಗ್ಗೆ ಧಾರಾಳವಾಗಿ ಮಾತಾಡುವರು.

"ಬಿಲಾಸ್‌ಖಾನೀ ತೋಡಿ ಎಂಬ ರಾಗ ಕೇಳಿದ್ದೀಯಾ?", ಉಸ್ತಾದ್ ಹಿಂದಿನ ದಿನ ಜೂತಿಕಾಳನ್ನು ಕೇಳಿದ್ದರು. ಜೂತಿಕಾ ಆ ರಾಗ ಕೇಳೇ ಇರಲಿಲ್ಲ. ಅದರಲ್ಲಿ ಆಸ್ಥೆಯೂ ಇರಲಿಲ್ಲ. ನಿದ್ದೆಯಿಲ್ಲದ, ಕ್ಷೀಣವಾಗಿರುವ ಹಗಲುಗಳಲ್ಲಿ ಯಾವ ಉತ್ಸಾಹವೂ ತೋರುವುದಿಲ್ಲ. ರೂಢಿಯಾದ ಕ್ರಮವನ್ನನುಸರಿಸಿ ಡಾ.ಹರ್‌ಬಾಡ್‌ರ ಕ್ಲಿನಿಕ್‌ಗೆ ಹೋಗುವುದು, ಹಿಂದಿರುಗುವುದು, ಕೊಳೆಬಟ್ಟೆಗಳನ್ನು ಒಗೆಯುವುದು, ಸಮಯ ತಪ್ಪಿಸಿ ಬರುವ ಅತಿಥಿಗಳಿಲ್ಲದಿದ್ದಲ್ಲಿ, ಎಲ್ಲವನ್ನೂ ಮರೆಯಲೆತ್ನಿಸಿ ಮಲಗಿ ನಿದ್ದೆ ಮಾಡುವುದು. ದಾರಿದೀಪಗಳು ತಮ್ಮ ಅಂಟಿಕೊಂಡಿರುವ ಕಣ್ಣುಗಳನ್ನು ಬಿಡಿಸಿ ತೆಗೆಯುವ ಸಂಧ್ಯಾ ಸಮಯದಲ್ಲಿ ಅವಳು ಎಚ್ಚೆತ್ತೇಳುವಾಗ ರಕ್ಷಣೆಯಿಲ್ಲದ ಪ್ರಜ್ಞೆ. ಈ ಮಧ್ಯೆ ಅವಳಿಗೆ ಸಂಗೀತ ಕೇಳಲು ಸಮಯವೆಲ್ಲಿಂದ ಬರಬೇಕು?

ಅವಳು ಮಾತೇ ಆಡಿರಲಿಲ್ಲ. ಆಗ ಉಸ್ತಾದ್ ಹೇಳಿದ್ದರು: "ತಾನ್‌ಸೇನ್ ತೀರಿಕೊಂಡಾಗ ಅವನ ಮಗ ಬಿಲಾಸ್‌ಖಾನ್ ಚರಮ ಶ್ಲೋಕ ಹಾಡಿದ ರಾಗಕ್ಕೇ ಆ ಹೆಸರಿರುವುದು." ಅನಂತರ ಉಸ್ತಾದರು ಬಿಲಾಸ್ ತೋಡಿಯನ್ನು ಹಾಡಿದರು.

ಜೂತಿಕಾ ಅಡಿಗೆ ಮನೆಯಿಂದ ಕಾಫಿಯೊಂದಿಗೆ ಉಸ್ತಾದ್‌ರ ಬಳಿ ಬಂದಳು. ಅವಳು ಬಂದದ್ದು ಉಸ್ತಾದರಿಗೆ ಗೊತ್ತಾಗಲೇ ಇಲ್ಲ. ಅವರು ಕಿಟಕಿಯ ಮೂಲಕ ಹೊರಗೆ ನೋಡುತ್ತಾ ಕುಳಿತಿದ್ದರು. ಜೂತಿಕಾ ಸದ್ದು ಮಾಡಿ ಅವರ ಗಮನ ಸೆಳೆದಳು.

"ಯಾರೋ ಬಾಗಿಲು ತಟ್ಟಿದಂತಾಯಿತಲ್ಲಾ", ಉಸ್ತಾದ್ ಕೇಳಿದರು.

"ನನಗೆ ಕೇಳಿಸಲಿಲ್ಲ", ಜೂತಿಕಾ ಹೇಳಿದಳು.

"ಸ್ವಲ್ಪ ಹೋಗಿ ನೋಡು", ಉಸ್ತಾದ್ ಕೇಳಿಕೊಂಡರು.

ಜೂತಿಕಾ ಬಾಗಿಲು ತೆರೆದು ನೋಡಿದಳು. ಯಾರೂ ಇರಲಿಲ್ಲ. ಉಸ್ತಾದ್‌ರು ತೆರೆದ ಬಾಗಿಲಿನತ್ತ ಉತ್ಸುಕತೆಯಿಂದ ನೋಡುತ್ತಾ ಕುಳಿತರು. ಅನಂತರ ನಿಶ್ಶಬ್ದವಾಗಿ ಕಾಫಿಯನ್ನು ಹೀರಿ ಕುಡಿಯುತ್ತೊಡಗಿದರು. ಜೂತಿಕಾ ಉಸ್ತಾದರ ಮುಂದೆ ಪದ್ಮಾಸನ ಹಾಕಿಕೊಂಡು ಕುಳಿತಳು. ಉಸ್ತಾದ್‌ರು ಕಥೆ ಹೇಳಲು ಯಾವಾಗ ಆರಂಭಿಸುತ್ತಾರೋ ಏನೋ? ಅವಳು ಅವರ ಮುಖವನ್ನೇ ದಿಟ್ಟಿಸಿ ನೋಡುತ್ತಿದ್ದಳು.

ಜೈತಲೆ ತೆಗೆದು ಇಬ್ಭಾಗವಾಗಿ ಕ್ರಾಪ್ ಮಾಡಿ ಬಾಚಿದ್ದ ತಲೆಗೂದಲು. ಗಾಂಭೀರ್ಯ ತುಂಬಿ ತುಳುಕಾಡುವ ಕಣ್ಣುಗಳು, ದಪ್ಪ ಕನ್ನಡಕ-ಇಂತಹ ರೂಪವು ಒಂದು ಫ್ಯಾಕ್ಟರಿಯ ಲೆಖ್ಖ ಬರೆಯುವ ಕಾರಕೂನನದ್ದಾಗಿದ್ದು ಒಬ್ಬ ಸಂಗೀತಗಾರರ ರೂಪವಾಗಿರಲೇ ಇಲ್ಲ. ಸಾಯಂಕಾಲಗಳಲ್ಲಿ ಚೀಲಗಳನ್ನು ಹಿಡಿದು ತರಕಾರಿಯನ್ನು ಕೊಳ್ಳಲು ಹೊರಕ್ಕಿಳಿಯುವ ಉಸ್ತಾದ್ ಅಮೀರ್‌ಖಾನರನ್ನು ಇಲ್ಲಿಯವರೆಗೂ ಯಾರೂ ಗುರುತಿಸಿರಲಿಲ್ಲ.

ಉಸ್ತಾದ್ ಅಮೀರ್‌ಖಾನ್ ಕಾಫಿ ಕುಡಿದ ನಂತರ ಕಪ್ಪನ್ನು ನೆಲದ ಮೇಲಿಟ್ಟರು. ಉಸ್ತಾದರು ತಮ್ಮ ಎಂದಿನಂತಿನ ಭಾವದಲ್ಲಿರಲಿಲ್ಲವೆಂದು ಜೂತಿಕಾಳಿಗನ್ನಿಸಿತು. ಕಾಫಿಯ ಒಂದೊಂದು ಗುಟುಕು ಕುಡಿಯುವಾಗೂ, ಮುಗುಳ್ನಗುತ್ತಾ, ಕಥೆಗಳನ್ನು ಹೇಳುತ್ತಾ ಇರುವುದು ಅವರ ಪದ್ಧತಿ. ಇಂದು ಒಂದೇ ಗುಟುಕಿಗೆ ಕಾಫಿ ಕುಡಿದು ಮುಗಿಸಿಬಿಟ್ಟಿದ್ದಾರೆ.

ಉಸ್ತಾದ್ ಎದ್ದರು. ಖಾಲಿಯಾದ ಕಪ್ಪನ್ನು ಕೈಯಲ್ಲಿ ತೆಗೆದುಕೊಂಡು ಜೂತಿಕಾ, ಅಡಿಗೆ ಮನೆಯತ್ತ ನಡೆದಳು. ಇನ್ನು ಉಸ್ತಾದ್ ಮೀಯಲು ಹೊರಡುವ ಸಮಯ. ಅವರು ಮಿಂದು ಬರುವತನಕ ಮನೆಯಲ್ಲೆಲ್ಲಾ ಜೂತಿಕಾ

ಒಬ್ಬಳೇ. ಅವಳು ತರಕಾರಿಯ ಬುಟ್ಟಿಯನ್ನು ತೆರೆದಳು. ಮೂರು ಟೊಮ್ಯಾಟೋ, ಎರಡು ಈರುಳ್ಳಿ, ನಾಲ್ಕು ಹಸೀ ಮೆಣಸಿನಕಾಯಿ ಅದ ರಿಂದ ತೆಗೆದುಕೊಂಡಳು. ಎಲ್ಲವನ್ನೂ ಉದ್ದುದ್ದ ವಾಗಿ ಕತ್ತರಿಸಿ ಹೆಚ್ಚಿದಳು. ಚೀಲದಲ್ಲಿ ಮುಚ್ಚಿಟ್ಟಿದ್ದ ಬಿಳೀ ಬ್ರೆಡ್ ಅನ್ನು ತೆಗೆದುಕೊಂಡು, ಅಗಲ ವಾದ ತೆಳುವಾದ ಚೂರುಗಳನ್ನಾಗಿ ಕತ್ತರಿಸಿದಳು. ಉಸ್ತಾದ್‌ರು ಸಾಧಾರಣವಾಗಿ ಬೆಳಗ್ಗೆ ಸ್ಯಾಂಡ್ ವಿಚ್ ಅನ್ನು ತೆಗೆದುಕೊಳ್ಳುವರು. ಅದೂ ಸರಿ ಯಾಗಿ ನಾಲ್ಕು ಚೂರುಗಳು.

ಜ್ಯೂತಿಕಾ ಸ್ಯಾಂಡ್‌ವಿಚ್ ಅನ್ನು ಒಂದು ಪೋರ್ಸ್‌ಲೈನ್ ಬಟ್ಟಲಿನಲ್ಲಿ ಇಟ್ಟು ಇನ್ನೊಂದು ಬಟ್ಟಲಿನಿಂದ ಅದನ್ನು ಮುಚ್ಚಿಟ್ಟಳು.

ಉಸ್ತಾದ್‌ರು ಸ್ನಾನದ ಕೋಣೆಯನ್ನು ಪ್ರವೇಶಿಸಿದರು. ಬೈಠಕ್ ಖಾನೆಯು ಎಂದಿನಂತೆ ಶುಭ್ರವಾಗಿತ್ತು. ಎಲ್ಲವೂ ಅದರದರ ಸ್ಥಾನ ದಲ್ಲಿದ್ದವು. ಉಸ್ತಾದ್‌ರ ಶಿಸ್ತು ಆ ರೀತಿ ಇತ್ತು. ಹೆಚ್ಚಾಗಿ ಸಿಗರೇಟ್ ಸೇದುವುದೋ ಅಥವಾ ಇನ್ನಾವುದಾದರೂ ದುಶ್ಚಟವೋ ಇಲ್ಲದವ ರಾದ್ದರಿಂದ, ಅವರ ಕೋಣೆಯಲ್ಲಿ ಯಾವತ್ತೂ ಕೊಳೆ ಸೇರುತ್ತಿರಲಿಲ್ಲ.

ಕೋಣೆಯ ಮೂಲೆಯಲ್ಲಿದ್ದ ಸಾರಂಗಿ ಯನ್ನು ತೆಗೆದುಕೊಂಡು ಮಂಚದ ಮೇಲಿಟ್ಟು, ಜೂತಿಕಾ ಕಸಪೊರಕೆ ಕೈಗೆ ತೆಗೆದುಕೊಂಡಳು. ಹಿಂದಿನ ದಿನ ಒಂದು ತಪ್ಪು ನಡೆದುಬಿಟ್ಟಿತ್ತು. ಪೊರಕೆಯಿಂದ ಗುಡಿಸಿ, ಬಾಚಿ ಕಸ ತೆಗೆಯು ವಾಗ, ಮೂಲೆಯಲ್ಲಿ, ಚೀಟಿಬಟ್ಟೆಯಲ್ಲಿ ಸುತ್ತಿ, ನೆಟ್ಟಗೆ ನಿಲ್ಲಿಸಿದ್ದ ಉದ್ದನೆಯ ವಸ್ತುವಿಗೆ ಪೊರಕೆ ತಾಗಿಬಿಟ್ಟಿತ್ತು. ಅದೇ ಸಮಯಕ್ಕೆ ಅಲ್ಲಿಗೆ ಬಂದ ಉಸ್ತಾದ್, ''ತಪ್ಪು ಮಗು'' ಎಂದಿದ್ದರು. ''ಅದು ನನ್ನ ತಂದೆಯವರ ಸಾರಂಗಿ. ಷಮೀರ್‌ಖಾನ್ ಪ್ರಸಿದ್ಧರಾದ ಸಾರಂಗಿ ವಾದ್ಯಕಾರರಾಗಿದ್ದರು. ನನ್ನ ಹನ್ನೆರಡನೆಯ ವಯಸ್ಸಿನವರೆಗೂ ನಾನು ಸಾರಂಗಿ ಬಾರಿಸಿದ್ದೆ.''



ಬೆಡ್‌ಷೀಟ್ ಬದಲಾಯಿಸಿದಳು. ತಲೆದಿಂಬಿನ ಕವರ್ ಬದಲಾಯಿಸಿದಳು. ಬೆತ್ತದ ಕುರ್ಚಿಗಳನ್ನು ಯಥಾ ಸ್ಥಾನಗಳಲ್ಲಿಟ್ಟಳು. ಅಷ್ಟು ಹೊತ್ತಿಗೆ ಉಸ್ತಾದ್ ಸ್ನಾನದ ಕೋಣೆಯಿಂದ ಹೊರಬಂದರು.

''ಏನಾಯಿತು ಉಸ್ತಾದ್?''

''ನನಗ್ಯಾಕೋ ಇರಿಸುಮುರಿಸು, ಜೂತಿಕಾ. ನಾನು ಇವತ್ತು ಸ್ನಾನ ಮಾಡುವುದಿಲ್ಲ.''

ಜೂತಿಕಾ ಉಸ್ತಾದ್‌ರ ಹಣೆಯನ್ನು ಮುಟ್ಟಿ ನೋಡಿದಳು. ಜ್ವರವಿದ್ದಂತಿರಲಿಲ್ಲ. ಆದರೂ ಆತನ ಕಣ್ಣುಗಳು ಕೆಂಪಗಾಗಿ ನೀರು ತುಂಬಿದಂತಿತ್ತು. ತಾನು ಇದಕ್ಕೆ ಮೊದಲೇ ಇದನ್ನೇಕೆ ಗಮನಿಸಲಿಲ್ಲ?

ನೆನ್ನೆ ಬಹುಹೊತ್ತಿನವರೆಗೂ ಅಭ್ಯಾಸ ನಡೆಸಿದ್ದರು. ಅನಂತರ ಸುಸ್ತಾದಂತಿತ್ತು. ನಿದ್ದೆ ಸರಿಯಾಗಿ ಮಾಡಿದಂತಿಲ್ಲ.

''ಹೋಗಲಿ ಬಿಡಿ, ಬಟ್ಟೆಯಾದರೂ ಬದಲಾಯಿಸಿ'', ಜೂತಿಕಾ ಉಸ್ತಾದ್‌ಗೆ ಬೇರೆ ಬಟ್ಟೆಗಳನ್ನು ಕೊಟ್ಟಳು.

ಬಿಚ್ಚಿದ ಕೊಳೆ ಬಟ್ಟೆಗಳನ್ನು ಅವಳ ಕೈಗೆ ಕೊಟ್ಟಾಗ ಉಸ್ತಾದ್, ಜೂತಿಕಾಳ ಕಣ್ಣುಗಳನ್ನೇ ದಿಟ್ಟಿಸಿ ನೋಡುತ್ತಾ ನಿಂತರು.

''ಏನು ಉಸ್ತಾದ್?''

''ನನ್ನವರು ಯಾರೂ ಇಲ್ಲ ಅನ್ನಿಸಿತ್ತು. ಆದರೆ...''

ಜೂತಿಕಾಳ ಹೊಟ್ಟೆಯಲ್ಲಿ ಬೆಂಕಿ ಹಾಕಿದಂತಾಯಿತು. ಆದರೆ? ಉಸ್ತಾದ್ ಹೇಳಹೋಗಿದ್ದು ಏನನ್ನು? ತನ್ನ ಇಷ್ಟು ದಿನಗಳ ಸೇವೆ ಸಫಲವಾಯಿತೇ? ಆ ಮಹಾನುಭಾವರ ಸನ್ನಿಧಿಯಲ್ಲಿ ತನಗೆ ಒಂದು ಸ್ಥಳ ಸಿಕ್ಕಿತೆಂದು ತಿಳಿಯಲೇ? ಕೊನೆಗೂ ಉಸ್ತಾದ್ ತನ್ನನ್ನು ಗುರುತಿಸಿದರೆಂದೇ?

ಜೂತಿಕಾ ದಂಗಾಗಿ ನಿಂತಳು. ಅಸಹಾಯಕತೆಯೇ ಮೂರ್ತಿವೆತ್ತಂತಿದ್ದ ಅವರ ಮುಖದತ್ತ ನೋಡಿದಳು. 'ನಾನಿರುವುದು ನಿಮಗಾ... ಎಂದು ಹಲವಾರು ಬಾರಿ ತಾನು ಮನಕ... ಹೇಳಿದ್ದನ್ನು ಕೊನೆಗೂ ಅವರು ಒಪ್ಪಿದರೆಂದೇ?

''ನಾನು ನಿನ್ನೆ ಒಂದು ಕನಸು ಕಂ... ಜೂತಿಕಾ.'' ಉಸ್ತಾದ್‌ರ ಧ್ವನಿ ನಡುಗುತ್ತಿತ್ತೆಂ... ಜೂತಿಕಾಳಿಗನ್ನಿಸಿತು. ''ಅದೇನೆಂದು ನೀ... ಊಹಿಸಬಲ್ಲೆಯಾ?''

ಅವರು ಕಂಡ ಕನಸು ಏನಿರಬಹುದು... 'ಜನ್ಮ ಜನ್ಮದ ಅನುಬಂಧವೆಂಬಂತೆ ... ವೇಶ್ಯೆಯೂ, ಗಾಯಕನೂ ತಾವೇ ಅರಿಯದಂ... ನಿಕಟವಾದರೆಂದೇ? ಆ ವೇಶ್ಯೆ ಇಲ್ಲದೆ ಗಾಯ... ನಿಗೆ ಜೀವನವಿಲ್ಲವೆಂದು ತಿಳಿವು ಮೂಡಿತೋ? ಆ ಭಾವನೆ ಬಂದ ಅಲೆ ನಿಮಿಷದಲ್ಲಿ ಜೂತಿ... ಸಮತೋಲನ ತಪ್ಪಿ ಬೀಳದಿರಲು ಶತಪ್ರಯ... ಮಾಡಿದಳು.

''ನಿನಗೆ ಊಹಿಸಲು ಸಾಧ್ಯವಾಗುತ್ತಿಲ್ಲ... ಅಲ್ಲವೇ?'', ಉಸ್ತಾದ್‌ರು ನಗುತ್ತಾ ಹೇಳಿದರು. ''ನನ್ನನ್ನು ಕಾಣಲೆಂದು ಇಬ್ಬರು ಬರಲಿದ್ದಾರೆ.''

ಉಸ್ತಾದರ ನಗುವನ್ನು ಕಂಡಾಗ ಜೂತಿ... ಕಾಳಿಗೆ ತಮಾಷೆ ಎನಿಸಿತು. ಉಸ್ತಾದರನ್ನು ಭೇಟಿ... ಆಗಲು ಯಾರು ಬರಬಹುದು? ಉಸ್ತಾದ್ ಇಲ್ಲಿ... ವಾಸಮಾಡತೊಡಗಿ ಎರಡು ವರ್ಷಗಳು ಕಳೆದಿದ್ದವು. ಮೊದಲ ಆರು ತಿಂಗಳು ಇದು... ಯಾರಿಗೂ ಗೊತ್ತೇ ಇರಲಿಲ್ಲ. ಡಾಕ್ಟರ್ ಹರ್‌ಬಾಡ್‌ರ ಕ್ಲಿನಿಕ್‌ನಲ್ಲಿ, ಸರದಿಯ ಸಾಲಿನಲ್ಲಿ ನಿಂತು ಕಾಯುತ್ತಿರಬೇಕಾದರೆ, ಯಮುನಳು ಕೇಳಿದ್ದಳು, ''ಅದೇನು ಶಬ್ದ ಜೂತಿಕಾ?'' ಅವಳೇ ಆ ಪ್ರಶ್ನೆ ಕೇಳಿದವರಲ್ಲಿ ಮೊದಲಿಗ...ಳಾಗಿದ್ದಳು. ತಾನು ಕಿವಿಗೊಟ್ಟು ಕೇಳಿದ್ದರೂ, ಅದು ಏನೆಂಬುದು ತನಗರ್ಥವಾಗಿರಲಿಲ್ಲ. ಕೊನೆಗೆ ಅದು ಸಾರಂಗಿಯ ಶಬ್ದವೆಂದು ಶಾಂತಿಯೇ ಕಂಡುಹಿಡಿದಿದ್ದಳು. ಜತೆಯಲ್ಲೇ ಒಬ್ಬರು ಹಾಡುತ್ತಲೂ ಇದ್ದಾರೆ ಎಂದು ಅವಳು ಕಂಡು ಹಿಡಿದಿದ್ದಳು.

ಅನಂತರ ಧೈರ್ಯದಿಂದ ಶಾಂತಿಯೂ, ೂತಿಕಾಳೂ ಉಸ್ತಾದರನ್ನು ಕಾಣಲು ಹೊರಟಿ ರು. ಬಲವಂತ ಶಾಂತಿಯದೇ ಆಗಿತ್ತು. ಂಗೀತಗಾರರನ್ನು ಕಂಡರೆ ತನಗೆ ಹೆದರಿಕೆ ೆಂದು ಹೇಳಿ ಯಮುನ ಅವರ ಜೊತೆ ರಲಿಲ್ಲ.

ತಾನು ಉಸ್ತಾದ್‌ರನ್ನು ಭೇಟಿ ಮಾಡಿದ್ದು ಂದು? ಅವರ ಶಿಷ್ಯೆಯಾಗಿದ್ದ ಶಾಂತಿ ೇರಿಕೊಂಡಾಗಲೇ? ಉಸ್ತಾದರನ್ನು ನೋಡ ದ್ದರೆ ತನಗೆ ನಿದ್ದೆ ಬರುವುದಿಲ್ಲವೆಂದು ೋಚತೊಡಗಿದಿಂದಾಗಲೇ? ರಾತ್ರಿಯ ವೇಳೆ ಲ್ಲಿ ಸಾರಂಗಿಯ ಆಲಾಪನೆಯು ತನಗೆ ಮಾಧಾನವನ್ನುಂಟುಮಾಡುವುದೆಂಬ ನುಭವ ತನಗೆ ಬಂದಾಗಿನಿಂದಲೇ? ಎಂದಿ ಂದ?

ಕಳೆದ ಒಂದೂವರೆ ವರ್ಷದಿಂದ, ತಾನು ಾತ್ರ ಬಂದು ಉಸ್ತಾದ್‌ರನ್ನು ಭೇಟಿ ಮಾಡಿ ಳು. ಆದರೆ ಉಸ್ತಾದ್ ತಮ್ಮನ್ನು ನೋಡಲು ಯಾರೋ ಬರುತ್ತಾರೆಂದು ಈಗ ಹೇಳುತ್ತಿದ್ದಾರೆ. ಅದೂ ಕನಸು ಕಂಡರಂತೆ.

ಜೂತಿಕಾ ನಗುವನ್ನು ಅಡಗಿಸಿಕೊಳ್ಳುತ್ತಾ ಕೇಳಿದಳು, ''ಉಸ್ತಾದ್? ನಿಮ್ಮನ್ನು ಕಾಣಲು ಬರುತ್ತಿರುವವರು ಯಾರು?''

''ಇಬ್ಬರು ಮಕ್ಕಳು''

''ಮಕ್ಕಳೇ''

''ಹೌದು ಇಬ್ಬರು ಹುಡುಗರು.''

''ಆದರೆ ಅವರೇಕೆ ಬರುತ್ತಿದ್ದಾರೆ? ಉಸ್ತಾದ್?''

ಕೇಳಿ ಮುಗಿಸಿದ ನಂತರ, ಹಾಗೆ ಕೇಳಬೇಕಿರಲಿಲ್ಲವೆಂದು ಜೂತಿಕಾಳಿಗನ್ನಿಸಿತು. ಉಸ್ತಾದ್‌ರಿಗೆ ತಾನು ಅವರನ್ನು ಅವಹೇಳನ ಮಾಡುತ್ತಿದ್ದೇನೆಂದು ಅನ್ನಿಸಿತೋ ಏನೋ? ಅದಕ್ಕೇ ಅವರು ಉತ್ತರವನ್ನು ಹೇಳುತ್ತಿಲ್ಲ.

ಜೂತಿಕಾ ಸ್ನಾನದ ಮನೆಹೊಕ್ಕಳು. ಉಸ್ತಾದ್ ಅಮೀರ್‌ಖಾನ್‌ರ ಬಟ್ಟೆಗಳಿಗೆ ಸೋಪು ಹಚ್ಚಿ ಒಗೆಯುವಾಗ, ಅವಳು ತನ್ನ ವಿಷಯವನ್ನು



ಕೇರಳದ ತ್ರಿಚೂರ್ ಬಳಿಯ ಆರಾಟ್ಟುಪುಳದಲ್ಲಿ 1952ರಲ್ಲಿ ಜನಿಸಿದ ಕೆ.ವಿ. ಅಷ್ಟಮೂರ್ತಿ, ಮಲೆಯಾಳದಲ್ಲಿ ಕತೆ-ಕಾದಂಬರಿಗಾರರಾಗಿ ಪ್ರಸಿದ್ಧರು. ಇವರ 'ರಿಹರ್ಸಲ್ ಕ್ಯಾಂಪ್' ಕಾದಂಬರಿ (1982) ಕುಂಕುಮಂ ಪ್ರಶಸ್ತಿಗೂ, 'ವೀಡು ವಿಟ್ಟು ಪೋಗುವನ್ನು' ಕಥಾಸಂಗ್ರಹ (1992) ಕೇರಳ ಸಾಹಿತ್ಯ ಅಕಾಡಮಿ ಪ್ರಶಸ್ತಿಗೂ ಪಾತ್ರವಾಗಿವೆ.



ಉತ್ತರ ಭಾರತೀಯ ಪರಿಸರದಲ್ಲಿ ಮೂಡಿರುವ ಈ ಮಲೆಯಾಳಂ ಕಥೆಯನ್ನು ಕನ್ನಡಕ್ಕೆ ತಂದಿರುವ ಎಂ.ಎಸ್. ಲಕ್ಷ್ಮಣಚಾರ್, ಈಗಾಗಲೇ ಉತ್ತಮ ಮಲೆಯಾಳಂ ಸಾಹಿತ್ಯವನ್ನು ಕನ್ನಡಕ್ಕೆ ಕೊಟ್ಟು ಪ್ರಸಿದ್ಧರಾಗಿದ್ದಾರೆ. ಅನುಪಮಾ ನಿರಂಜನರ 'ಋಣ' ಕಾದಂಬರಿಯನ್ನು ಮಲೆಯಾಳಂಗೆ ಅನುವಾದಿಸಿದ್ದಾರೆ. ಕೃಷಿಗೆ ಸಂಬಂಧಿಸಿದ ಲೇಖನ, ಪುಸ್ತಕಗಳನ್ನೂ ಬರೆದಿರುವ ಲಕ್ಷ್ಮಣಚಾರ್, ಮೈಸೂರಿನಲ್ಲಿ ನೆಲೆಸಿದ್ದಾರೆ.



ಅಡಗಿಸಲೆತ್ನಿಸಿದಳು. ಉಸ್ತಾದ್‌ರು ಎಂದಿಗೂ ತನ್ನ ಮನಸ್ಸನ್ನು ಅರ್ಥ ಮಾಡಿಕೊಳ್ಳಲಾರರೆನ್ನಿಸಿತು. ಅವಳು ತನ್ನಲ್ಲೇ ಗೊಣಗತೊಡಗಿದಳು: ''ಉಸ್ತಾದ್, ಕುಟುಂಬ ಜೀವನವು ನನಗೆ ಹೇಳಿಟ್ಟಿದ್ದಲ್ಲವೆಂದು ನನಗೆ ಗೊತ್ತು. ಆದರೂ ಒಮ್ಮೆ, ಒಂದೇ ಒಂದು ಸಲ ನೀವು ನನ್ನನ್ನು ಪ್ರೀತಿಸುತ್ತೀರೆಂದು ನನ್ನ ಬಳಿ ಹೇಳಬೇಕು. ನನಗಷ್ಟೇ ಸಾಕು, ಉಸ್ತಾದ್, ಆ ಒಂದೇ ಒಂದು ಮಾತು ಸಾಕು. ನನಗೀ ಜನ್ಮ ಪೂರ್ತಿ ಕಳೆಯಲು, ಆ ಒಂದೇ ಒಂದು ಮಾತು ಸಾಕು.''

ಸ್ಯಾಂಡ್‌ವಿಚ್ ತಿನ್ನುವಾಗ ಉಸ್ತಾದ್ ಚಿಂತಾಕ್ರಾಂತರಾಗಿದ್ದರು. ಎರಡು ಚೂರುಗಳನ್ನು ತಿಂದು ಅವರು, ಮಿಕ್ಕದ್ದು ಹಾಗೇ ಇಟ್ಟರು.

''ಬಾಯಿಗೆ ರುಚಿಸುತ್ತಿಲ್ಲವೇ ಉಸ್ತಾದ್'', ಜೂತಿಕಾ ಕೇಳಿದಳು.

''ಯಾರಾದರೂ ಬಂದರೆ ಅವರಿಗೆ ತಿನ್ನಲು ಕೊಡಲು ಏನಾದರೂ ಇದೆಯೇ?'', ಉಸ್ತಾದ್ ಜೂತಿಕಾಳ ಮುಖದತ್ತ ನೋಡಿದರು.

ಜೂತಿಕಾ ಏನೂ ಹೇಳಲಿಲ್ಲ. ಅವಳ ಮನಸ್ಸಿನಲ್ಲಿ ಅಮೀರ್‌ಖಾನ್‌ರ ಬಗ್ಗೆ ಅಸಮಾಧಾನ ತುಂಬಿಕೊಂಡು ಹೊರಹೊಮ್ಮಲು ಕಾಯುತ್ತಿರುವಂತಿತ್ತು. 'ಜೂತಿಕಾ, ನೀನು ಏನಾದರೂ ತಿಂದೆಯಾ ಬಿಟ್ಟೆಯಾ? ಎಂದು ಇದುವರೆಗೆ ಅವರು ತನ್ನನ್ನೇನಾದರೂ ಕೇಳಿರುವುದುಂಟೆ? ಒಮ್ಮೆಯಾದರೂ ತನಗೆ, ಈ ಜೂತಿಕಾಳಿಗೆ, ತಿನ್ನಲೇನಾದರೂ ಉಳಿದಿದೆಯೇ ಎಂದು ನೋಡಿದ್ದಾರೆಯೇ? ಅಂಥಾದ್ದರಲ್ಲಿ ಈಗ ಕನಸು ಕಂಡರಂತೆ, ಆ ಕನಸಿನ ಅತಿಥಿಗಳು ಬಂದರೆ ತಿನ್ನಲು ಕೊಡಲು ಏನಾದರೂ ಇದೆಯೇ? ಎಂದು ಕೇಳುತ್ತಿದ್ದಾರೆ.

ಜೂತಿಕಾ ಆ ಬಟ್ಟಲುಗಳನ್ನು ತೊಳೆದಿಟ್ಟಳು. ಬೈಠಕ್‌ಖಾನೆಗೆ ಬಂದಾಗ ನೆಲದ ಮೇಲೆ ಪದ್ಮಾಸನಹಾಕಿ ಕುಳಿತು ಉಸ್ತಾದ್‌ರು ಸಾರಂಗಿಯನ್ನು ಕೈಗೆ ತೆಗೆದುಕೊಳ್ಳುತ್ತಿದ್ದರು.

''ಈಗ ಬಾರಿಸತೊಡಗುತ್ತೀರಾ?'', ಜೂತಿಕಾ ಕೇಳಿದಳು. ''ನಿಮ್ಮ ಕೈಯಲ್ಲಾಗುವುದಿಲ್ಲ. ಇವತ್ತು ಬೇಡ''

''ನಾನಿಂದು ಹಾಡಲೇ ಬೇಕು'', ಉಸ್ತಾದ್ ಹೇಳಿದರು. ''ಎರಡು ದಿನಗಳಿಂದ ನನ್ನ ಮನಸ್ಸಿನಲ್ಲಿ ಒಂದು ಗಾನ ರೂಪುಗೊಳ್ಳುತ್ತಿತ್ತು. ನೆನ್ನೆ ಅದಕ್ಕೆ ಒಂದು ಪೂರ್ಣ ರೂಪ ಸಿಕ್ಕಿದೆ. ನಾನದನ್ನು ಈಗ ಹಾಡಲಿದ್ದೇನೆ.''

ಹಾಗಿದ್ದರೆ ಉಸ್ತಾದ್ ಆ ಹಾಡು ಹಾಡಲಿ. ಅವರು ತನಗಾಗಿ ಮಾತ್ರ ಹಾಡುತ್ತಾರಲ್ಲವೇ? ಜೂತಿಕಾಳಿಗೆ ಅಭಿಮಾನವೆನ್ನಿಸಿತು. ಅವಳು ನೆಲದ ಮೇಲೆ ಪದ್ಮಾಸನ ಹಾಕಿ ಕುಳಿತಳು. ಉಸ್ತಾದ್ ಹಾಡಲು ಪ್ರಾರಂಭಿಸಿದರು. ಆಗ ಬಾಗಿಲು ತಟ್ಟಿದ ಶಬ್ದ ಕೇಳಿ ಬಂತು.

ಜೂತಿಕಾ ಉಸ್ತಾದ್‌ರ ಮುಖ ನೋಡಿದಳು.

''ಅವರು ಬಂದರು'', ಉಸ್ತಾದ್‌ರು ಹೇಳಿದರು.

ಜೂತಿಕಾ ಎದ್ದುಹೋಗಿ ಬಾಗಿಲು ತೆರೆದಳು.

ಅಲ್ಲಿ ಇಬ್ಬರು ಹುಡುಗರು ನಿಂತಿದ್ದರು. ಅವರಲ್ಲಿ ಒಬ್ಬ ನರಪೇತಲ. ತಲೆಕೂದಲು ಧೂಳು ತುಂಬಿ ಕೆದರಿತ್ತು. ಇನ್ನೊಬ್ಬನು ಸ್ಥಿತಿವಂತನಂತೆ ಕಾಣುತ್ತಿದ್ದನು. ಅವನು ಏನೋ ತಪ್ಪು ಮಾಡಿದವನಂತ ಹಿಂಜರಿದು ಕೇಳಿದನು.

''ಉಸ್ತಾದ್ ಅಮೀರ್‌ಖಾನ್ ಇಲ್ಲೇ ವಾಸವಾಗಿದ್ದಾರೆಯೇ?''

ಜೂತಿಕಾ ಹಿಂದಕ್ಕೆ ಸರಿದು ಉಸ್ತಾದರ ಕಡೆ ಕೈ ತೋರಿಸಿದಳು. ಒಂದು ಪವಾಡವನ್ನು ಕಾಣುತ್ತಿರುವಂತೆ ಅವರಿಬ್ಬರೂ ಒಳಕ್ಕೆ ಇಣುಕಿ ನೋಡಿದರು.

''ಏನು ಬೇಕು?'', ಸ್ವಲ್ಪ ಅಧಿಕಾರ ಮಿಶ್ರಿತ ಸ್ವರದಲ್ಲಿ ಜೂತಿಕಾ ಕೇಳಿದಳು.

''ನಾವು ಉಸ್ತಾದರನ್ನು ಕಾಣಲು ಬಂದಿದ್ದೇವೆ.''

''ಮಕ್ಕಳೇ ಒಳಕ್ಕೆ ಬನ್ನಿ'', ಅಮೀರ್‌ಖಾನ್ ಹೇಳಿದರು.

ಹುಡುಗರು ಸಂದೇಹದಿಂದ, ಸಂಕೋಚದಿಂದ ಹಿಂಜರಿಯುತ್ತಾ ಒಳಬಂದರು. ಉಸ್ತಾದ್ ಅವರನ್ನು ವಾತ್ಸಲ್ಯಯುಕ್ತ ನೋಟದಿಂದ ನೋಡಿದರು.

''ನನ್ನ ಹೆಸರು ವಿನೋದ್'', ಧನಿಕನಂತೆ ಕಾಣುವ ಹುಡುಗನು ಹೇಳಿದ. ''ಇವನು ಗೋವಿಂದ ಅಂತ. ನನ್ನ ಸ್ನೇಹಿತ.''

''ನೀವು ಎಲ್ಲಿಂದ ಬಂದಿದ್ದೀರಿ?'', ಉಸ್ತಾದ್ ಕೇಳಿದರು.

''ನಾನಿರುವುದು ಬಾಂದ್ರಾದಲ್ಲಿ'', ವಿನೋದ್ ಹೇಳಿದನು. ನನ್ನ ರಾತ್ರಿ ಇವನು ನನ್ನ ಮನೆಗೆ ಬಂದನು. ಹೇಗಾದರೂ ಉಸ್ತಾದರನ್ನು ಭೇಟಿ ಮಾಡಬೇಕೆಂದು ಹೇಳಿದನು.

''ಆ ಸಣ್ಣ ಚಾಪೆ ಹಾಸು ಜೂತಿಕಾ. ಇವರು ಕುಳಿತುಕೊಳ್ಳಲಿ'', ಉಸ್ತಾದ್ ಹೇಳಿದರು, ''ಹಾಗೇ ಇವರಿಗೆ ಕುಡಿಯಲು ಏನಾದರೂ ತಂದುಕೊಡು.''

ಹುಡುಗರು ಆ ಹಾಸಿದ ಚಾಪೆಯಲ್ಲಿ ಕುಳಿತರು. ಇಬ್ಬರೂ ಕೋಣೆಯನ್ನೆಲ್ಲಾ ಗಮನವಿಟ್ಟು ನೋಡಿದರು. ಎಲ್ಲವನ್ನು ಆಯಾ ಜಾಗದಲ್ಲಿಡಲಾಗಿತ್ತು. ಕೋಣೆ ಸ್ವಚ್ಛವಾಗಿತ್ತು. ಈ ಪರಿಸರದಲ್ಲಿ ವಾಸವಾಗಿರುವ ಕಲಾವಿದರು. ಅವರಿರುವ ವಸತಿಯಲ್ಲಿ ಇಷ್ಟು ಚೊಕ್ಕಟ, ಶುಭ್ರವಾಗಿರುವ ಸಾಧ್ಯತೆಯನ್ನು ಅವರು ನಿರೀಕ್ಷಿಸಿರಲಿಲ್ಲ. ಅವರ ಕಣ್ಣುಗಳು ಸುತ್ತಲೆಲ್ಲಾ ಹರಿದು ಉಸ್ತಾದರತ್ತಲೂ, ಸಾರಂಗಿಯ ಮೇಲೂ ತಿರುಗಿದವು.

''ನೀವು ಹಾಡಹೊರಟಿದ್ದಿರಾ?'', ವಿನೋದ್ ಕೇಳಿದನು.

''ಹೌದು'', ಉಸ್ತಾದ್ ಹೇಳಿದರು, ''ಕೇಳುವವರು ಯಾರೂ ಇಲ್ಲದಿದ್ದರೂ ನನಗೆ ಆಗಾಗ್ಗೆ ಹಾಡಬೇಕೆನ್ನಿಸುವುದುಂಟು.''

''ಕೇಳಲು ನಾವಿದ್ದೇವೆ'', ಗೋವಿಂದನೆಂದನು, ''ತಮ್ಮ ಹಾಡು ಕೇಳಲೋಸುಗವೇ ನಾವು ಬಂದಿದ್ದೇವೆ.''

ಜೂತಿಕಾ ಅಡಿಗೆ ಕೋಣೆಯಿಂದ ಬರುವ ವೇಳೆಗೆ ಉಸ್ತಾದ್ ಹಾಡತೊಡಗಿದ್ದರು. ವಿನೋದ್ ಕಣ್ಣು ತೆರೆದು, ಉಸ್ತಾದ್ ಅಮೀರ್ ಖಾನರನ್ನು ತನ್ನಲ್ಲೇ ಹುದುಗಿಸಿಕೊಂಡವನಂತ ಕುಳಿತಿದ್ದನು. ಗೋವಿಂದ ತಲೆಯಾಡಿಸುತ್ತಾ ಕುಳಿತಿದ್ದು ಹಾಡಿನಲ್ಲೇ ತಲ್ಲೀನನಾಗಿದ್ದನು. ಜೂತಿಕಾ ತೆಗೆದುಕೊಂಡು ಬಂದ ಪಾನೀಯಗಳನ್ನು ಇಬ್ಬರೂ ನೋಡಲಿಲ್ಲ. ಅವಳು ಗೋಡೆಗೊರಗಿಕೊಂಡು ಮರೆಯಾಗಿ ನಿಂತಳು.

ಹಾಡನ್ನು ಕೇಳುತ್ತಿರುವಾಗ, ಕತ್ತಲೆಯಲ್ಲಿನ ಗುಹೆಯಿಂದ ಪ್ರವಹಿಸುವ ಪವಿತ್ರ ನದಿಯಂತೆ ಅದು ತಮ್ಮನ್ನು ನೇವರಿಸಿ ಶಾಂತಿಯ

ನ್ನಿಯುತ್ತಿರುವಂತೆ, ಹಾಡು ಮುಗಿದಾಗ ಒಂದು ಕಾಲಘಟ್ಟವೇ ಪೂರ್ಣವಾಗಿ ಕಳೆದಂತೆ ಅವರಿನಿಗನುಭವವಾಯಿತು.

''ನೀವು ಹಾಡಿದ್ದು ಯಾವ ರಾಗ?'', ವಿನೋದ್ ಕೇಳಿದನು.

''ಒಂದು ಮಗುವಿನ ಹಟ, ಹೆಣ್ಣುಗಳನ್ನು ವೇಶ್ಯಾವೃತ್ತಿಗೆ ಎಳೆಯುವವರ ಬಿಸಿಯುಸಿರು, ಹುಡುಗಿಯೊಬ್ಬಳ ಮೆಲುದನಿಯ ಅಳು-ರಾತ್ರಿ ನಿದ್ದೆ ಬರದೆ ಮಲಗಿರುವಾಗ ಈ ರಸ್ತೆಯಲ್ಲಿನ ಆ ಬಗೆಯ ಶಬ್ದಗಳಿಗೆ ನಾನು ಕಿವಿಗೊಟ್ಟು ಮಲಗುತ್ತೇನೆ,'' ಉಸ್ತಾದ್ ಹೇಳಿದರು, ''ಈ ಬೇಸಿಗೆಯ ರಾತ್ರಿಗಳಲ್ಲಿ ನಾನು ನಿದ್ದೆಯೇ ಮಾಡುವುದಿಲ್ಲ. ನನ್ನ ಮನಸ್ಸಿನಲ್ಲಿ ಒಂದು ರಾಗ ಮೂಡಲು ಪ್ರಾರಂಭಿಸಿ ಎಷ್ಟೋ ದಿನಗಳಾದವು. ನಾನು ಹಾಡಿದ್ದು ಮಾತ್ರ ಈಗ, ಅಷ್ಟೇ.''

''ಅದಕ್ಕೇನೇ ಈ ಹಾಡಿನಲ್ಲಿಷ್ಟು ವಿಷಾದ ತುಂಬಿದೆ?'', ಗೋವಿಂದ ಕೇಳಿದನು.

''ನಿಮಗೆ ಆ ವಿಷಾದ ಮನಸ್ಸಿಗೆ ಬಂತೇ?'' ಉಸ್ತಾದ್‌ರಿಗೆ ಸಂತೋಷವೆನಿಸಿತು.

''ರಾಗದ ಹೆಸರು ನೀವು ಹೇಳಲೇ ಇಲ್ಲ'', ವಿನೋದ್ ಜ್ಞಾಪಕ ಮಾಡಿದನು.

''ಇದಕ್ಕೆ ಹೆಸರಿಲ್ಲ'', ಉಸ್ತಾದ್ ಹೇಳಿದರು.

ನಿಮಗೆ ಹೆಸರು ಆವಶ್ಯಕವಲ್ಲವೇನು? ಇಲ್ಲಿಗೆ ಬರಲು, ನಿಮ್ಮ ಮನೆ ಹುಡುಕಲು ನಾವೆಷ್ಟು ಕಷ್ಟಪಟ್ಟೆವು ಗೊತ್ತೇ?'', ವಿನೋದ್ ನಕ್ಕನು.

''ಮಾನ್ಯರೆನ್ನಿಸಿಕೊಂಡವರು ಯಾವತ್ತೂ ಬರಬಾರದ ಸ್ಥಳವಿದು. ಅವರು ನಕ್ಕಾರು. ನನ್ನನ್ನು ಯಾರೊಬ್ಬರೂ ಗುರುತಿಸದಿದ್ದರೇನೇ ನನಗೆ ಸಂತೋಷ. ನಾನು ಇಲ್ಲಿ ನನ್ನ ಇರುವಿಕೆಯನ್ನು ಮುಂದುವರೆಸಲು ಮುಖ್ಯ ಕಾರಣವೇ ಅದು.''

''ಉಸ್ತಾದ್‌ರೇ, ನಿಮ್ಮನ್ನು ಹುಡುಕುತ್ತಾ ನಡೆಯಲಾರಂಭಿಸಿ ಬಹಳ ದಿನಗಳೇ ಆಯಿತು'', ಗೋವಿಂದ ಹೇಳಿದನು, ''ವಿಕ್ರಂ ಸಂಗೀತ ಸಮ್ಮೇಳನಕ್ಕೆ ನೀವು ಬರುತ್ತೀರೆಂದುಕೊಂಡೆವು. ಬಡೇ ಗುಲಾಂ ಆಲೀಖಾನ್‌ರ ನಂತರ ತಾವು ಹಾಡುತ್ತೀರೆಂದು ಗೊತ್ತಾಗಿತ್ತು. ಆದರೆ ನೀವಲ್ಲಿಗೆ ಬರಲಿಲ್ಲವಲ್ಲಾ, ಏಕೆ?''

''ನನ್ನ ಹಾಡು ಯಾರಿಗೆ ಬೇಕು?'', ಉಸ್ತಾದ್ ನಕ್ಕರು.

''ಹಾಗೆನ್ನಬೇಡಿ ಉಸ್ತಾದ್'', ಗೋವಿಂದ ಹೇಳಿದನು. ''ತಾವು ಜನಪ್ರಿಯ ಗಾಯಕರಲ್ಲದಿರಬಹುದು. ಆದರೆ ಅಮೀರ್‌ಖಾನ್‌ರ ಹಾಡನ್ನು ಕೇಳಲಿಚ್ಛಿಸುವ ಕೆಲವರು ಈ ಭೂಮಿಯಲ್ಲಿದ್ದಾರೆ.''

''ಹೋಗಲಿ ಬಿಡಿ ಮಕ್ಕಳೇ'', ಉಸ್ತಾದ್ ನಕ್ಕರು. ''ಪಾನೀಯ ತಂದಿಟ್ಟಿದ್ದಾಳೆ ಕುಡಿಯಿರಿ. ನೀವು ಬಂದದ್ದೇಕೆಂದು ನೀವು ಇನ್ನೂ ಹೇಳಲೇ ಇಲ್ಲವಲ್ಲಾ?''

''ನಾವು ವಾಸಮಾಡುತ್ತಿರುವ ಸಬರ್ಬ್‌ನಲ್ಲಿ ಮುಂದಿನ ತಿಂಗಳು 18ನೆಯ ತಾರೀಖಿನಿಂದ ಮೂರು ದಿವಸಗಳು ಜಾತ್ರೆ ನಡೆಯುತ್ತದೆ'', ಗೋವಿಂದ ಹೇಳಿದನು. ''ಕೊನೆಯ ದಿವಸ ತಮ್ಮ ಕಛೇರಿ ಕೇಳಬೇಕೆಂದು ನಮಗೆ ಆಸೆ ಇದೆ.''

''ಹೋದ ವರ್ಷ ಇವನು ಇದೇ ಬೇಡಿಕೆಯೊಂದಿಗೆ ನನ್ನ ಬಳಿ ಬಂದಿದ್ದ'', ವಿನೋದ್ ಹೇಳಿದನು, ''ಆದರೆ ನೀವು ಎಲ್ಲಿ ಇದ್ದೀರೆಂಬ ವಿಷಯ ಗೊತ್ತಿಲ್ಲವೆಂದು ಹೇಳಿ ನಾನು ಇವನನ್ನು ಹಿಂದಕ್ಕೆ ಕಳುಹಿಸಿಬಿಟ್ಟೆ. ಈ ಸಲ ಇವನು ಅಷ್ಟಕ್ಕೆ ಒಪ್ಪಿಕೊಳ್ಳಲಿಲ್ಲ.''

''ಬೇಡ, ಮಕ್ಕಳೇ'', ಉಸ್ತಾದ್ ಹೇಳಿದರು. ''ಎರಡು ವರ್ಷಗಳ ಹಿಂದೆ, ಹೀಗೆಯೇ ಒಂದು ಜಾತ್ರೆಯಲ್ಲಿ ಹಾಡಲು ಹೋದಾಗ, ಅವರು ನನ್ನ ಹಾಡನ್ನು ಕೇಳದೆ ಕಿರುಚಾಡತೊಡಗಿದರು. ಅದಾದನಂತರ ನಾನು, ಬಹಿರಂಗವಾಗಿ, ವೇದಿಕೆಗಳ ಮೇಲೆ ಕುಳಿತು ಹಾಡಲು ಇಷ್ಟಪಡುತ್ತಿಲ್ಲ.''

''ನಾನೂ ಅಂದು ನಿಮ್ಮ ಹಾಡು ಕೇಳಲು ಬಂದಿದ್ದೆ'', ಗೋವಿಂದನೆಂದನು. ''ಅವರು

ಕಿರುಚಾಡಲಿಲ್ಲ. ನೀವು ಅಂದು ಠುಮ್ರಿ ಹಾಡಲು ಒಪ್ಪದ್ದರಿಂದ ಅಲ್ಲಿ ಅವ್ಯವಸ್ಥೆಯುಂಟಾಯಿತು ಅಷ್ಟೆ. ಜನರು ಮತ್ತೆ ಮತ್ತೆ ಬೇಡಿಕೊಂಡರೂ ನೀವು ಠುಮ್ರಿ ಹಾಡಲಿಲ್ಲವೇಕೆ?''

''ಠುಮ್ರಿಯೇ?'' ಉಸ್ತಾದ್ ನಕ್ಕುಬಿಟ್ಟರು. ''ಅದನ್ನ ನನಗಿಂತ ಚೆನ್ನಾಗಿ ಹಾಡಲು ಬಡೇ ಗುಲಾಂ ಅಲಿ ಖಾನ್ ಅಲ್ಲಿದ್ದರು ಅಲ್ಲವೇ?''

''ಇಲ್ಲವೆಂದಲ್ಲ. ಆದರೆ ನಾವು ನಿಮ್ಮ ಬಾಯಿಂದಲೇ ಕೇಳಲಿಷ್ಟಪಟ್ಟೆವು.''

''ನನಗೆ ಪರೀಕ್ಷೆಯೊಡ್ಡಬೇಡಿ ಮಕ್ಕಳೇ'', ಉಸ್ತಾದ್ ಸಾರಂಗಿಯನ್ನು ಉದ್ದವಾದ ಬಟ್ಟೆಯ ಚೀಲದೊಳಕ್ಕೆ ತಳ್ಳಿ ಇಟ್ಟರು.

ಅದೊಂದು ಸೂಚನೆಯೆಂದು ತಿಳಿದು ಗೋವಿಂದನು ವಿನೋದನ ಮುಖವನ್ನು ನೋಡಿದನು. ವಿನೋದ್ ನಕ್ಕನು.

''ಅದು ಹೋಗಲಿ. ಆದರೆ ನನ್ನದೊಂದು ಕೋರಿಕೆ ಇದೆ.'' ಅವನೆಂದನು, ''ನನ್ನ ಚಿಕ್ಕಪ್ಪನ ಪಾಲಿಹಿಲ್ಸ್‌ನಲ್ಲಿರುವ ಬಂಗಲೆಯನ್ನು ಬೀಗ ಹಾಕಿಡಲಾಗಿದೆ. ಉಸ್ತಾದ್, ನೀವು ಅಲ್ಲಿ ಬಂದು ವಾಸವಾಗಿರಬೇಕು.''

ತಾವು ಕೇಳಿಸಿಕೊಂಡಿದ್ದು ಸರಿಯೋ ಅಲ್ಲವೋ ಎಂಬುದನ್ನು ದೃಢಪಡಿಸಲೋಸುಗ, ಉಸ್ತಾದ್, ತಮ್ಮ ಮುಖವನ್ನೆತ್ತಿ ವಿನೋದ್‌ನನ್ನು ನೋಡಿದರು.

''ತಮ್ಮ ಬಳಿ ಸಂಗೀತ ಕಲಿಯಬೇಕೆಂದು ಬಹಳ ಜನ ಅಲ್ಲಿ ಅವಕಾಶಕ್ಕಾಗಿ ಕಾದಿದ್ದಾರೆ'', ವಿನೋದ್ ಮುಂದುವರೆಸಿದನು. ''ನಿಮ್ಮ ಉಪಜೀವನಕ್ಕೆ ಯಾವುದೇ ಬಗೆಯ ತೊಂದರೆ ಬರುವುದಿಲ್ಲ. ಬರುವ ಸಾಧ್ಯತೆಯೂ ಇಲ್ಲ. ನಾನು ನಿಜವಾಗಿ ಹೇಳುತ್ತಿದ್ದೇನೆ.''

ಅಮೀರ್‌ಖಾನ್ ತಲೆ ತಗ್ಗಿಸಿ ಯೋಚಿಸಿದರು: 'ತಮ್ಮ ಬಾಳಿನಲ್ಲಿ ಪ್ರಥಮ ಬಾರಿಗೆ ತಮ್ಮನ್ನು ಒಬ್ಬನು ಬಂದು ಕರೆಯುತ್ತಿದ್ದಾನೆ. ಒಣಗಿನಿಂತ ತಮ್ಮ ಬಾಳಿನ ಬಳ್ಳಿ ಚಿಗುರಿ ಹೂ ಬಿಡುವ ಸಮಯವಾಗಿರಬಹುದೇ?

ಇಷ್ಟು ಕಾಲವಾದರೂ ತಾವು ಏನನ್ನೂ ಸಂಪಾದಿಸಲಿಲ್ಲ. ಹಾಡು ಕಲಿಯಲು ಅನೇಕರು ಬರಲು ಸಿದ್ಧರಿದ್ದಾರೆ ಎಂದು ಜೂತಿಕಾ ಹೇಳುತ್ತಿದ್ದಳಲ್ಲದೆ ಇಲ್ಲಿಯವರೆಗೂ ಯಾರೂ ಬಂದೇ ಇಲ್ಲ. ನಿತ್ಯ ದಾರಿದ್ರ್ಯದಿಂದ ತಮಗೆ ಮುಕ್ತಿ ಎಂದು, ಎಂದು ಆಗಾಗ ತಮ್ಮ ಹೃದಯದಲ್ಲಿ ದುಃಖವೇರ್ಪಟ್ಟಿರುವುದುಂಟು ಅಲ್ಲವೇ? ಈ ವೇಶ್ಯಾವಾಟಿಕೆಯಲ್ಲಿ ಕಳೆಯುವಂತಹ ಸ್ಥಿತಿ ತಮಗೆ ಹೇಳಿಸಿದ್ದಲ್ಲ ಎಂಬುದನ್ನು ಮಿಕ್ಕವರಿಗಿಂತ ಮೊದಲು ತಮಗೇ ಅರ್ಥವಾಗಿರಬೇಕಲ್ಲವೇ? ಸುಖಭೋಗಗಳನ್ನು ಬದಿಗಿಡಲು ಸಾಧ್ಯವಾಗುವಂತೆ ಮಾನಸಿಕವಾಗಿ ತಾವು ಬೆಳೆದಿಲ್ಲವೆಂದು ಈ ಮಧ್ಯೆ ಅನೇಕ ಬಾರಿ ಅರಿವಾಗಿರುವುದುಂಟು. ಇನ್ನಾದರೂ ಸರಿಯಾಗಿ ಬಾಳನ್ನಾರಂಭಿಸಬೇಕೆಂದು ಈಗ ಯಾರೋ ತಮ್ಮೊಳಗೇ ಹೇಳುತ್ತಿರುವಂತಿದೆ.

ಇಲ್ಲಿ, ಇಷ್ಟು ವರ್ಷಗಳ ಕಾಲದಲ್ಲಿ, ಸರಿಯಾದ ಒಬ್ಬ ಶಿಷ್ಯನನ್ನಾದರೂ ಪಡೆದಿಲ್ಲ ತಾವು. ತಮ್ಮ ಕಚೇರಿಗಳನ್ನು ಕೇಳಲು ಜನ ಕಿಕ್ಕಿರಿದು ಸೇರಿದ್ದರೆಂಬುದನ್ನು ಇತಿಹಾಸದಲ್ಲಿ ಉಲ್ಲೇಖಿಸಲು ಮಾರ್ಗವಿಲ್ಲ. ಮತ್ತೆ ತಮ್ಮನ್ನು ಯಾರು ನೆನೆಯುತ್ತಾರೆ? ಆರಾಧಕರೂ, ಅನುಯಾಯಿಗಳೂ ಇಲ್ಲದ ತಮಗೆ ಯಾರು ಸ್ಮಾರಕ ಕಟ್ಟುತ್ತಾರೆ? ಈ ಭೂಮಿಯಲ್ಲಿ ಅಮೀರ್‌ಖಾನ್ ಜೀವಿಸಿದ್ದರೆಂಬುದಕ್ಕೆ ಸಾಕ್ಷಿ ಯಾದರೂ ಏನು?'.

ಉಸ್ತಾದ್ ಅಮೀರ್‌ಖಾನ್ ಜೂತಿಕಾಳ ಮುಖವನ್ನು ನೋಡಿದರು. ಉಟ್ಟ ಸೀರೆಯನ್ನು ಬೆರಳಿಗೆ ಸುತ್ತಿ, ಬಿಚ್ಚಿ ಮಾಡುತ್ತಾ ಅವಳು ತಲೆ ತಗ್ಗಿಸಿ ಕುಳಿತಿದ್ದಳು. ಅವಳ ಮನಸ್ಸಿನಲ್ಲಿ ನಿರಾಶೆಯ ಅಲೆಗಳೆದ್ದವು.



ಕೊನೆಗೂ ಉಸ್ತಾದರ ಮೇಲೆ ಹಕ್ಕು ಚಲಾಯಿಸಲು ಇಬ್ಬರು ಬಂದಿದ್ದಾರೆಂದಾಯಿತು. ಯಾರೋ ಇಬ್ಬರು ತಮ್ಮನ್ನು ಭೇಟಿ ಮಾಡಲು ಬರುತ್ತಾರೆಂದು ಉಸ್ತಾದರು ಹೇಳಿದಾಗ ಜೂತಿಕಾ ನಂಬಿರಲಿಲ್ಲ. ಅವರು ಬರದೇ ಇರಲಿ ಎಂದು ಮನಸ್ಸಿನಲ್ಲೇ ಪ್ರಾರ್ಥಿಸಿದ್ದಳು. ಯಾರಾದರೂ ಉಸ್ತಾದ್‌ರನ್ನು ಕಾಣಲು ಬರುವುದು ತನಗಿಷ್ಟವಾಗುವುದಿಲ್ಲವೆಂಬುದು ಇತ್ತೀಚೆಗೆ ಜೂತಿಕಾಳಿಗೆ ಮನದಟ್ಟಾಗಿತ್ತು. ಕೊನೆಕೊನೆಗೆ, ಶಾಂತಿ ಸಹ ಬರುವುದು ಅವಳಿಗಿಷ್ಟವಾಗುತ್ತಿರಲಿಲ್ಲ. ನ್ಯೂಮೋನಿಯಾ ಬಂದು, ಸೊರಗಿ ಹೋಗಿದ್ದ ಸ್ಥಿತಿಯಲ್ಲಿ ಅವಳು ಡಾಕ್ಟರ್ ಹರ್‌ಬಾಡ್‌ರ ಕ್ಲಿನಿಕ್‌ನಲ್ಲಿ ಮಲಗಿದ್ದಾಗ, ಅವಳನ್ನು ಶುಶ್ರೂಷಿಸುತ್ತಿದ್ದ ಜೂತಿಕಾ, ತನಗೇ ತಿಳಿಯದಂತೆ ಶಾಂತಿಯ ಮರಣಕ್ಕಾಗಿ ಪ್ರಾರ್ಥಿಸಿದ್ದಳು. ಸಂಗೀತವು ತನಗಿಂತ ಹೆಚ್ಚಾಗಿ ಶಾಂತಿಗೇ ಒಗ್ಗುತ್ತಿದ್ದುದರಿಂದ ಉಸ್ತಾದ್‌ರಿಗೆ ಅವಳನ್ನು ಕಂಡರೆ ಹೆಚ್ಚು ಪ್ರೀತಿ, ವಿಶ್ವಾಸ ವುಂಟಾಗುತ್ತಿದೆಯೆಂಬ ಅವಳ ಅನಿಸಿಕೆಯ ಇದಕ್ಕೆ ಕಾರಣವಾಗಿತ್ತು. 'ದೇವರೇ, ತ ಮನಸ್ಸಿನಲ್ಲಿ ಈ ನೀಚ ಭಾವನೆ ಏಕೆ ಬಂತು? ವೇಶ್ಯಾವೃತ್ತಿಗೆ ಮಂಗಳ ಹಾಡಿ ಕುಟುಂಬ ಜೀವ ನಡೆಸುವ ಮೋಹ ದಿನೇ ದಿನೇ ಹೆಚ್ಚಾಗು ತ್ತಿದೆಯೇ ತನಗೆ?'

ಆದರೆ ಈ ಮಹಾನ್ ಗಾಯಕರು ಇಂತಹ ಒಂದು ಕೆಟ್ಟ ಸ್ಥಳದಲ್ಲಿ ಕೊಳೆಯುವುದು ಸರಿಯೇ ಎಂದು ತನ್ನ ಮನಸ್ಸು ನುಡಿಯುವುದುಂಟು. ತ ಸ್ವಾರ್ಥಕ್ಕಾಗಿ ಒಬ್ಬ ಮಹಾನ್ ವ್ಯಕ್ತಿಯ ಜೀವ ಬಲಿಯಾಗುವುದು ಬೇಡ, ಆ ಪಾಪದ ಕ ತನಗಂಟದಿರಲಿ.

ಆದರೂ ಅಮೀರ್‌ಖಾನ್ ತನ್ನನ್ನು ಬಿಟ್ಟು ಹೋಗುತ್ತಾರೆಂಬುದನ್ನು ನೆನೆಯುವಾಗ ಅವಳ ಮನಸ್ಸಿನ ಭಾವನೆಗಳೆಲ್ಲಾ ಸುಟ್ಟು ಬೂದಿಯಾಗುವಂತೆ ತೋರಿತು. ಹಗಲಾಗಲಿ ರಾತ್ರಿಯಾಗಲಿ ಹೇಗೆ ಕಳೆಯಿತೆಂಬುದನ್ನು ತಿಳಿಯದೆಯೇ ಜೀವಿಸುವಾಗ, ಈ ಸಾರಂಗಿಯ ಶಬ್ದವು ಎಷ್ಟರ ಮಟ್ಟಿಗೆ ತನ್ನ ಮೇಲೆ ಪ್ರಭಾವ ಬೀರಿದೆ ಎಂದು ಈಗಲೇ ಅವಳಿಗೆ ಗೊತ್ತಾಗಿದ್ದು. ಉಸ್ತಾದರು ಹೊರಟುಹೋದರೆ ಇನ್ನು ಉಳಿಯುವ ತನ್ನ ರಾತ್ರಿಗಳನ್ನು ತಾನು ಯಾರನ್ನು ನೆನೆಯುತ್ತಾ ಕಳೆಯಬೇಕು? ಹಗಲುಗಳಲ್ಲಿ ಯಾರ ಉಪಚಾರ ಮಾಡುತ್ತಾ ತನ್ನ ಜೀವನವನ್ನು ಸಾರ್ಥಕಗೊಳಿಸುವುದು? ಸಾಧ್ಯವಿಲ್ಲ, ಉಸ್ತಾದ್, ನನ್ನಿಂದ ಸಾಧ್ಯವಿಲ್ಲ. ನೀವಿಲ್ಲದ ಲೋಕಕ್ಕಿಂತ, ಸಾವನ್ನೇ ನಾನು ಬಯಸುತ್ತೇನೆ.

ಉಸ್ತಾದರು ತನ್ನನ್ನೇ ನೋಡುತ್ತಿರುವುದನ್ನು ತಿಳಿದ ಜೂತಿಕಾ, ಮುಖವನ್ನು ಮೇಲಕ್ಕೆತ್ತಿದಳು. ಅವಳ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತ್ತು. ಉಸ್ತಾದ್ ಅದನ್ನು ಕಂಡರು. ಒಡನೆ ತಮ್ಮ ದೃಷ್ಟಿಯನ್ನು ಬೇರೆಡೆಗೆ ತಿರುಗಿಸಿಕೊಂಡರು.

''ಮಕ್ಕಳೇ ನನ್ನನ್ನು ಕ್ಷಮಿಸಿ'', ಉಸ್ತಾದ್ ಎದ್ದರು, ''ಇನ್ನೂ ಸ್ವಲ್ಪ ದಿನಗಳು ನಾನು ಇಲ್ಲೇ ಇರಬೇಕೆಂದಿದ್ದೇನೆ. ಈಗ ತಾವು ದಯಮಾಡಿಸಿ.''

ವಿಧಿಯಿಲ್ಲದೆ ವಿನೋದನೂ, ಗೋವಿಂದನೂ ಎದ್ದರು. ವಿನೋದ್ ಕೋಣೆಯನ್ನೆಲ್ಲಾ ಒಮ್ಮೆ ಕಣ್ಣು ಹೊರಳಿಸಿ ನೋಡಿದನು. ಹಳೆಯ ಒಂದು ದಿವಾನ್, ಹರಿಯಲು ತೊಡಗುತ್ತಿದ್ದ ಒಂದು ಬೆಡ್‌ಷೀಟ್, ಎಳೆಗಳೆಲ್ಲಾ ಬಿಟ್ಟು ಹೋಗಲು ತೊಡಗಿದ್ದ ಬೆತ್ತದ ಕುರ್ಚಿಗಳು.

ಸ್ವಲ್ಪ ಹೊತ್ತು ಯೋಚಿಸುತ್ತಾ ನಿಂತ ಅವನು, ಷರ್ಟ್‌ನ ಜೇಬಿನಿಂದ ಒಂದು ಪೊಟ್ಟಣವನ್ನು ಹೊರತೆಗೆದು ಉಸ್ತಾದ್‌ರ ಪಾದಗಳ ಬಳಿ ಇಟ್ಟನು.

''ಏನಿದು?'' ಉಸ್ತಾದ್ ಕೇಳಿದರು.

''ಒಂದು ಸಣ್ಣ ಕಾಣಿಕೆ''

ಉಸ್ತಾದ್ ಹಿಂದಕ್ಕೆ ಸರಿದರು. ಜೂತಿಕಾಳ ಬಳಿ ಹೋದರು.

''ಇವಳ್ಯಾರೆಂದು ಗೊತ್ತೇ ನಿಮಗೆ?'', ಅವರು ಅವಳ ಭುಜದ ಮೇಲೆ ಕೈಯಿಟ್ಟು ಹೇಳಿದರು. ''ಇವಳಿರುವಾಗ ನಾನು ದರಿದ್ರನಲ್ಲ. ಸಾಲದ್ದಕ್ಕೆ ನನ್ನ ಹೆಸರು ಅಮೀರ್ ಎಂದು ನಿಮಗೆಲ್ಲಾ ಗೊತ್ತಲ್ಲ?''

''ನನ್ನನ್ನು ಹುಡುಕಿಕೊಂಡು ಬರಲು ತೋಚಿತಲ್ಲಾ ನಿಮಗೆ?'', ಉಸ್ತಾದ್ ವಿನೋದ್‌ನ ಭುಜವನ್ನು ತಟ್ಟುತ್ತಾ ಹೇಳಿದರು, ''ಇದಕ್ಕಿಂತ ದೊಡ್ಡ ಸನ್ಮಾನವನ್ನು ನಾನು ನಿರೀಕ್ಷಿಸುವುದಿಲ್ಲ, ಮಕ್ಕಳೇ!''

ವಿನೋದ್, ಗೋವಿಂದನ ಮುಖವನ್ನು ನೋಡಿದನು. ಹೋಗೋಣವೆಂಬ ಅರ್ಥದಲ್ಲಿ ಗೋವಿಂದ ತಲೆಯಾಡಿಸಿದನು. ಇಬ್ಬರೂ ಬಾಗಿಲತ್ತ ನಡೆದರು.

''ನೀವಿಬ್ಬರೂ ಇನ್ನೊಮ್ಮೆ ಬನ್ನಿ'', ಉಸ್ತಾದ್ ಅವರನ್ನು ಬೀಳ್ಕೊಡಲು ಬಾಗಿಲವರೆಗೂ ಬಂದರು. ಅವರು ಕಣ್ಮರೆಯಾದ ನಂತರ ಹಿಂದಿರುಗಿ ಬಂದು, ಸಾರಂಗಿಯ ಹೊರಚೀಲವನ್ನು ತೆಗೆದುಹಾಕಿ, ನೆಲದ ಮೇಲೆ ಕುಳಿತರು.

''ಜೂತಿಕಾ'' ಎಂದು ಕೂಗಿದರು.

ಜೂತಿಕಾ ಬಂದು ಅವರ ಎದುರಿಗೆ ಪದ್ಮಾಸನ ಹಾಕಿ ಕುಳಿತಳು. ಉಸ್ತಾದ್ ಸಾರಂಗಿಯನ್ನು ತೆಗೆದುಕೊಂಡು ತಮ್ಮ ತೊಡೆಯ ಮೇಲಿಟ್ಟುಕೊಂಡು ಶ್ರುತಿ ಸರಿಮಾಡಿಕೊಂಡರು. ಜೂತಿಕಾಳ ಅರಳಿದ ಕಣ್ಣುಗಳನ್ನು ನೆಟ್ಟ ಕಣ್ಣಿನಿಂದ ನೋಡುತ್ತಾ ಕುಳಿತರು. ಅನಂತರ ಕಣ್ಣುಗಳನ್ನು ಮುಚ್ಚಿಕೊಂಡು, 'ಚಂದ್ರಮಧು' ರಾಗವನ್ನು ನುಡಿಸುತೊಡಗಿದರು.





# ಕಲ್ಲು ಕರಗುವ ಸಮಯ

ಲಂಕೇಶರ 'ಕಲ್ಲು ಕರಗುವ ಸಮಯ' ಕಥೆಯ ಶ್ಯಾಮಲೆ, ತಿಪ್ಪಣ್ಣರು ನನ್ನ ದೃಷ್ಟಿಯಲ್ಲಿ ನಿಜವಾದ ಸ್ಫೂರ್ತಿದಾತರು. ಅವರಿಬ್ಬರನ್ನು ಒಟ್ಟಿಗೆ ಯಾಕೆ ತರುತ್ತಿದ್ದೇನೆಂದರೆ ಪ್ರೇಮದ ವಿಷಯದಲ್ಲಿ ಶ್ಯಾಮಲೆಯ ಅಚಲ ನಿರ್ಧಾರ, ತಾನು ಪ್ರೇಮಿಸಿದವನನ್ನು ದಕ್ಕಿಸಿಕೊಳ್ಳುವ ಛಲ ಎಷ್ಟು ಮುಖ್ಯವಾಗುತ್ತದೋ, ತಿಪ್ಪಣ್ಣನ ಮೌನ, ಯಾರನ್ನು ನೋಯಿಸಬಾರದೆನ್ನುವ ಮನೋಭಾವ ಹಾಗೂ ಪ್ರೇಮವೆಂಬುದು ಕ್ರಾಂತಿ, ಪ್ರತಿಷ್ಠೆ, ಸಿಟ್ಟು ಇವುಗಳನ್ನು ಮೀರಿದ್ದು ಎಂದು ಅವನು ಅರ್ಥೈಸಿಕೊಂಡ ಸೂಕ್ಷ್ಮವು ಅಷ್ಟೇ ಮುಖ್ಯವಾಗುತ್ತದೆ. ಇವರಿಬ್ಬರಲ್ಲಿನ ಈ ಗುಣಗಳೇ ಇವರು ಅಸಾಮಾನ್ಯ ಪ್ರೇಮಿಗಳಾಗಿದ್ದರೂ, ಸಾಮಾನ್ಯ ಮನುಷ್ಯರಂತೆ ಸಹನೆಯಿಂದ ವರ್ತಿಸಿ ಪ್ರೀತಿಯಿಂದ ಎಲ್ಲರ ಮನಸ್ಸನ್ನು ಗೆಲ್ಲುವಂತೆ ಮಾಡುತ್ತದೆ.

ಜಾತಿ ಮೀರಿದರೆ, ನೀತಿ ಮೀರಿದರೆ ಜೀವ ತೆಗೆಯುವುದೊಂದೆ ದಾರಿ ಎಂದು ನಂಬಿದಂತ ಊರಿನಲ್ಲಿ ಹುಟ್ಟಿ ಬೆಳೆದವಳು ಶ್ಯಾಮಲೆ. ಅವಳಪ್ಪ ಮಲ್ಲಯ್ಯನು ಇದೇ ಹಿನ್ನೆಲೆಯಿಂದ ಬಂದವನು. ಆದರೆ ಆ ಊರಿನಲ್ಲಿ ನಡೆದ ಸಿನಿಮಾ ಕುರಿತ ಕಮ್ಮಟವೊಂದು ಅವಳ ಬದುಕಿನ ಕ್ರಿಯೆಗೆ ಚಾಲನೆ ನೀಡುತ್ತದೆ. ಅಲ್ಲಿಂದ ಆಕೆಯ ಪ್ರೇಮಪರ್ವ ಪ್ರಾರಂಭವಾಗುತ್ತದೆ. ಇಲ್ಲಿನ ವಿಶಿಷ್ಟತೆ ಏನೆಂದರೆ ಆಕೆ ಪ್ರೇಮಿಸುವ ಹುಡುಗ ಆ ಕಮ್ಮಟದಲ್ಲಿದ್ದ ಥಳಕು-ಬಳಕು ಸಿನಿಮಾ ಮಂದಿಯವನಲ್ಲ, ಕಮ್ಮಟಕ್ಕೆ ಕ್ರಾಂತಿಕಾರಿ ರೂಪ ಕೊಡಲು ಆಗಮಿಸಿದ ಕ್ರಾಂತಿಕಾರಿ ಯುವಕರಲ್ಲೊಬ್ಬನೂ ಅಲ್ಲ. ಆಕೆ ಪ್ರೇಮಿಸುವುದು, ತನ್ನ ಪಕ್ಕ ಸಂಕೋಚದಿಂದ ಕೂತು, ತನ್ನ ಅಸ್ಪಷ್ಟ ದುರ್ಬಲ ಭಾಷೆಯಲ್ಲಿ, ಸ್ಪಷ್ಟವಾಗಿ, ಆದರೆ ಮೆಲ್ಲಗೆ ಪ್ರದರ್ಶನದ ಗೀಳಿಲ್ಲದವನಂತೆ ಸಿನಿಮಾ ಕುರಿತು ಹೇಳುತ್ತಿದ್ದ ತಿಪ್ಪಣ್ಣನನ್ನು.

ತಿಪ್ಪಣ್ಣ, ಹುಡುಗಿಯರು ಮೆಚ್ಚುವಂತೆ ಯಾವುದೇ ಹೀರೋಯಿಸಂ ಹೊಂದಿರಲಿಲ್ಲ. ಆದರೆ ಮನುಷ್ಯ ಸಹಜ ತಳಮಳ, ದುಗುಡ, ಆಳದ ಪ್ರೀತಿ, ನಿಷ್ಠೆ ಹೊಂದಿರುವವನು. ಬೇಡರ ಹುಡುಗ ತಿಪ್ಪಣ್ಣ ಹಾಗೂ ಜಂಗಮರ ಹುಡುಗಿಯಾದ ಶ್ಯಾಮಲೆಯ ಸಹಜ ಪ್ರೇಮ ಸಹ ಆ ಸಾಂಪ್ರದಾಯಿಕ ಊರಿನಲ್ಲಿ ಎಲ್ಲರ ತಲ್ಲಣ, ಸಿಟ್ಟು, ರೊಚ್ಚಿಗೆ ಕಾರಣವಾಗುವಂತ ಪರಿಸ್ಥಿತಿ ಇತ್ತು. ಇದೂ ಕೂಡ ತಿಪ್ಪಣ್ಣನನ್ನು ಧೃತಿಗೆಡಿಸುತ್ತಿತ್ತು.

ಆದರೆ ಶ್ಯಾಮಲೆ ತಿಪ್ಪಣ್ಣರ ಸಹಜ ಪ್ರೇಮದ ಮುಂದೆ, ತಿಪ್ಪಣ್ಣನನ್ನು ಮುಗಿಸ ಹೊರಟ ಮಲ್ಲಯ್ಯನ ರಿವಾಲ್ವರ್ ಜೇಬಿನಲ್ಲೆ ಉಳಿದರೆ, ಮಠಾಧಿಪತಿಯ ಬುದ್ಧಿವಾದ ಶ್ಯಾಮಲೆಯಂತ ಹುಡುಗಿಯ ಪ್ರೀತಿಯೆದುರು ತೀರ ಹಾಸ್ಯಾಸ್ಪದವೆನಿಸುತ್ತದೆ. ಇನ್ನು ಕ್ರಾಂತಿಕಾರಿಗಳ ಕ್ರಾಂತಿ ಕೂಗಾಟಗಳು ಮೂರ್ಖತನದ ಬಡಬಡಿಕೆ ಅನ್ನಿಸುತ್ತದೆ. ಎಂತಹ ಪರಿಸ್ಥಿತಿಯನ್ನು ಸೃಷ್ಟಿಸಿತೆಂದರೆ ಆ ಪ್ರೇಮಿಗಳಿಬ್ಬರು ಪರಸ್ಪರ ಬೇರೆಯಾದರೆ ಅದು ಎಲ್ಲರನ್ನೂ ದು:ಖಕ್ಕೀಡು ಮಾಡುವಂತಹ ಪರಿಸ್ಥಿತಿ ಸೃಷ್ಟಿಯಾಗುತ್ತದೆ.

ತಿಪ್ಪಣ್ಣ, ಶ್ಯಾಮಲೆಯರ ಕಥೆ ಓದಿದಾಗ ನನಗನ್ನಿಸಿದ್ದು-ಪ್ರೇಮಿಸಿದರೆ ಹೀಗೆ ಪ್ರೇಮಿಸಬೇಕು, ಅಷ್ಟೆ ಅಲ್ಲ, ಬದುಕಿದರೆ ಪ್ರತಿಯೊಬ್ಬನು ಹೀಗೆ ಬದುಕಬೇಕು. ಆಗ ಬದುಕು ಬರಡಾಗದು ಹಾಗೂ ಪ್ರೇಮ ಯಾರನ್ನೂ ದುಗುಡಗೊಳಿಸದು. ಕ್ರಾಂತಿ, ಜಾತಿ, ಲೈಂಗಿಕತೆ ಎಲ್ಲವನ್ನೂ ಮೀರಿ ನಿಂತಿದ್ದು ಶ್ಯಾಮಲೆ, ತಿಪ್ಪಣ್ಣರ ಪ್ರೇಮ. ಅದಕ್ಕೆ ಕಲ್ಲೂ ಸಹ ಕರಗಿತು.

ಅಕ್ಷತಾ .ಕೆ

# ಅಚ್ಚಿನ ಮನೆಯ ಕನಸುಗಾರ

'ಸಾಧಿಸಲಾಗದಿರುವುದನ್ನು ನಾನು ಕನಸು ಕಾಣಲಾರೆ' ಎಂಬುದು ಈ ಸಾಹಸಿಯ ಮನೋಭಿಲಾಷೆ. ವಿಶ್ರಾಂತಿಯನ್ನು ಪಡೆಯಬೇಕೆಂಬುದು ಆತನಿಗೆ ತುಂಬಾ ಕಷ್ಟದ ಕೆಲಸ! ಕಡಲ ತೀರದ ವಿಶಾಖಪಟ್ಟಣಂನಲ್ಲಿ ನಾಲ್ಕೂವರೆ ಸಾವಿರ ಪ್ರತಿಗಳ ದಿನಪತ್ರಿಕೆಯೊಂದನ್ನು ರಾಮೋಜಿರಾವ್ 1974ರಲ್ಲಿ ಆರಂಭಿಸಿದರು. ಕ್ರಮೇಣ ಒಂದೊಂದೇ ಆವೃತ್ತಿಯ ಸಾಹಸ ಮೊದಲಾಯಿತು. 'ನಿತ್ಯವೂ ನವೀನತೆ' ಎಂಬುದನ್ನು ಆಚರಣೆಗಿಳಿಸಿ, ನಿನ್ನೆ ಎಷ್ಟು ಚೆನ್ನಾಗಿ ಮಾಡಿದ್ದೇವೆ ಎಂಬುದು ಮುಖ್ಯವಲ್ಲ, ಇಂದು ಇನ್ನೂ ಎಷ್ಟು ಚೆನ್ನಾಗಿ ಮಾಡಿದೆವು ಎಂಬುದೇ ಮುಖ್ಯ ಎಂಬುದನ್ನು ರೂಢಿಸಿದ್ದೂ ಕೂಡ ಆತನಿಗಷ್ಟೇ ಸಾಧ್ಯವಾಗುವಂಥದ್ದು. ಈಚೆಗಷ್ಟೇ ರಜತ ಮಹೋತ್ಸವ ಕಂಡಿರುವ 'ಈ ನಾಡು' ಪತ್ರಿಕೆಯ ಸಾಹಸಗಾಥೆ, ರಾಮೋಜಿರಾವ್ ಅವರ ಪರಿಶ್ರಮದ ಜೀವನದ ಒಂದೊಂದು ಮಹತ್ವದ ಮೈಲಿಗಲ್ಲಾಗಿ ದಾಖಲಿಸಲ್ಪಡುವಂತಹುದಾಗಿದೆ. ಪತ್ರಿಕೆಯು ಬಹುಮಂದಿ ಓದುಗರಿಗೆ ತಲುಪಬೇಕೆಂಬ ಮಹತ್ವಾಕಾಂಕ್ಷೆಯ ಹಿನ್ನೆಲೆಯಲ್ಲಿ, ಜಿಲ್ಲಾ ಆವೃತ್ತಿಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಆರಂಭಿಸುವ ನಿಟ್ಟಿನಲ್ಲಿ, ದೇಶದಲ್ಲೇ ವಿಶಿಷ್ಟ ಎನಿಸುವ ಪ್ರಯೋಗಕ್ಕೆ ರಾಮೋಜಿರಾವ್ ನಾಂದಿ ಹಾಡಿದರು.

ಇಂದು ಆರು ಸಹಸ್ರ ಮಂದಿಗೆ ನೇರವಾಗಿ, ಹತ್ತು ಸಾವಿರ ಮಂದಿಗೆ ಪರೋಕ್ಷವಾಗಿ, ಆಧಾರ ಕಲ್ಪಿಸಿರುವ 'ಈ ನಾಡು', ಹತ್ತುಲಕ್ಷ ಪ್ರಸಾರದ ನಾಗಾಲೋಟದೊಂದಿಗೆ ಸುಮಾರು ಎಂಬತ್ತು ಲಕ್ಷ ಓದುಗರನ್ನು ಹೊಂದಿರುವುದು ಕೂಡಾ, ಪ್ರಾದೇಶಿಕ ಭಾಷಾ ಪತ್ರಿಕೆಯ ಬೆಳವಣಿಗೆಯ ಮಟ್ಟಿಗೆ ಮಹತ್ವದ ದಾಖಲೆ ಎನ್ನಲೇಬೇಕು. ಪತ್ರಿಕೆ ಬರೀ ಸುದ್ದಿ ಒದಗಿಸುವಿಕೆಗೆ ಮಾತ್ರ ತನ್ನ ವ್ಯಾಪ್ತಿಯನ್ನು ಸೀಮಿತಪಡಿಸಿಕೊಂಡಿಲ್ಲ. ಚಂಡಮಾರುತ ಸಂತ್ರಸ್ತರ ನೆರವಿಗೆ ಧಾವಿಸಿದೆ. ಸಂಕಷ್ಟಕ್ಕೊಳಗಾದವರಿಗೆ ಜನತೆಯ ದೇಣಿಗೆಯಿಂದ 'ಸೂರ್ಯ' ಹೆಸರಿನ ವಸತಿ ಹಾಗೂ ವಿದ್ಯಾಕೇಂದ್ರಗಳನ್ನು ಆರಂಭಿಸಿದೆ.

ಸುದ್ದಿ ಸಂಗ್ರಹದಲ್ಲೂ, ಫೋಟೋ ಬಳಕೆಯಲ್ಲೂ, ಈ ಪತ್ರಿಕೆ ಇಡೀ ದೇಶದಲ್ಲೇ ತನ್ನದೇ ವೈಶಿಷ್ಟ್ಯತೆಯನ್ನು ಛಾಪಿಸಿಕೊಂಡಿದೆ. ವರದಿಗಾರರಿಗಾಗಿ 'ಸಮೀಕ್ಷ' ಎಂಬ ಖಾಸಗಿ ಪ್ರಸಾರದ ಪತ್ರಿಕೆಯೂ ಇದೆ. ಸುಮಾರು 2200 ಮಂದಿ ಸುದ್ದಿ ಸಂಪಾದನಾ ಜಾಲದ ಉಸ್ತುವಾರಿಯಲ್ಲಿದ್ದಾರೆ. ಪತ್ರಿಕಾ ಸ್ವಾತಂತ್ರ್ಯ, ಮೌಲ್ಯಗಳಿಗಾಗಿ ಹೋರಾಟ, ಇಂತಹವುಗಳ ಮೂಲಕವೂ ರಾಮೋಜಿರಾವ್ ತಮ್ಮ ಜನಪರ ಕಾಳಜಿಯನ್ನು ಕ್ರಿಯಾಶೀಲವಾಗಿ ತೊಡಗಿಸಿಕೊಂಡಿರುವ ಅನೇಕ ನಿದರ್ಶನಗಳಿವೆ.

ಹಿಡಿದ ಕಾರ್ಯದಲ್ಲಿ ಅಪೂರ್ವ ಯಶಸ್ಸು ಕಂಡಿರುವ ರಾಮೋಜಿರಾವ್, ನನ್ನಂತಹ ಎಷ್ಟೋ ಮಂದಿಗೆ ಸ್ಫೂರ್ತಿಯನ್ನೊದಗಿಸಿದ್ದಾರೆ. 'ನಿಮ್ಮ ವಿಜಯದ ರಹಸ್ಯವೇನು?' ಎಂಬ ಪ್ರಶ್ನೆಗೆ ಅವರ ಉತ್ತರ ಹೀಗಿದೆ: 'ಕೆಲಸ... ಕೆಲಸ... ಕಷ್ಟಪಟ್ಟು ಕೆಲಸ ಮಾಡುವುದೊಂದೇ.' ಈ ಜಗತ್ತು ನಿಮ್ಮನ್ನು ಹೇಗೆ ಗುರುತಿಸಬೇಕೆಂದು ಬಯಸುತ್ತೀರಿ ಎಂಬ ಮತ್ತೊಂದು ಪ್ರಶ್ನೆಗೆ 'ನಾನು ಕೂಡ ಪ್ರಪಂಚಾಗ್ನಿಗೆ ಸಮಿಧೆಯೊಂದನ್ನು ಆಹುತಿಯಾಗಿತ್ತೆನು... ಎಂದುಕೊಂಡರೆ ಸಾಕು' ಎಂದಿದ್ದಾರೆ!

ಇವು ನನ್ನ ಜೀವನದ ಸ್ಫೂರ್ತಿಯ ಟಾನಿಕ್!

ಎ. ಹನುಮಂತಪ್ಪ





ಶೂದ್ರ ಶ್ರೀನಿವಾಸ್

# ಲೋಕದ ಮಾಯೆಯೊಳಗೆ...

ಸೃಜನ್

ಬೆಳಗ್ಗೆ ಏಳುಗಂಟೆಗೆ ದೂರವಾಣಿ ಕರೆಬಂತು. ಮೂರ್ತಿ ಟೀ ಚಪ್ಪರಿಸುತ್ತಲೇ ಫೋನ್ ರಿಸೀವ್ ಮಾಡಿದ. "ನಾನು ರೂಪಮಾಲಾ, ದೆಹಲಿಯಿಂದ ಬಂದಿದ್ದೇನೆ. ಹಿಂದೆ ನಿಮಗೊಂದು ಪತ್ರ ಬರೆದಿದ್ದೆ. ನಿಮ್ಮ ಬಯಾಡಟಾ ಕಳಿಸಿಕೊಡಲು. ಆದರೆ ನೀವು ಕಳಿಸಲಿಲ್ಲ. ನಾನ್ಯಾರು ಎಂಬುದು ನಿಮಗೆ ಗೊತ್ತಿಲ್ಲದಿರಬಹುದು, ಇಂದು ಫ್ರೀ ಇದ್ದೀರಾ? ಒಂದರ್ಧ ಘಂಟೆ ಮಾತಾಡಬೇಕಾಗಿದೆ" ಎಂದಳು. "ಆಗಲಿ, ಮಧ್ಯಾಹ್ನ ಒಂದೂವರೆಗೆ ಭೇಟಿಯಾಗುವೆ. ಪ್ರೆಸ್‌ಕ್ಲಬ್‌ಗೆ ಬನ್ನಿ. ನಿಮಗೆ ಪ್ರೆಸ್‌ಕ್ಲಬ್ ಗೊತ್ತಿದೆಯಾ?" ಎಂದ. "ನೋ ಪ್ರಾಬ್ಲಂ, ವಿಚಾರಿಸಿಕೊಂಡು ಬರ್ತೀನಿ. ಪ್ರೆಸ್‌ಕ್ಲಬ್‌ನಂಥ ಜಾಗವನ್ನು ಹುಡುಕಲು ಅಷ್ಟು ಕಷ್ಟವಾಗಲಾರದು.



ನನಗೆ ಪೂರ್ಣ ವಿಳಾಸವಿಲ್ಲದೆ ಒಂದು ಸ್ಥಳವನ್ನು ಹುಡುಕುವುದೆಂದರೆ ಬಹಳ ಇಷ್ಟ. ಯಾಕೆಂದರೆ ಹುಡುಕಾಟದಲ್ಲಿ ಏನೇನೋ ಅನುಭವ ಸಿಗ್ತದೆ. ಕೆಲವೊಮ್ಮೆ ತುಂಬ ರಿಸ್ಕ್ ಎನ್ನುವುದನ್ನು ಬಿಟ್ಟರೆ ಮಿಕ್ಕ ಹಾಗೆ ಥ್ರಿಲ್ಲಿಂಗ್ ಆಗಿರುತ್ತದೆ. ಇಂಥ ಥ್ರಿಲ್‌ಗಳಿಂದ ಬದುಕು ಎಷ್ಟೊಂದು ಅಲರ್ಟ್ ಆಗಿರುತ್ತದೆ ಗೊತ್ತ? ಹೋಗಲಿ, ಸುಮ್ಮನೆ ಏನೇನೋ ಮಾತಾಡ್ತ ಇದ್ದೀನಿ. ಈಗಲೇ ಇಷ್ಟೊಂದು ಬೋರ್ ಮಾಡ್ತಿದ್ದೀನಿ ಎಂದು ಗಾಬರಿಯಿಂದ ಬರುವುದನ್ನು ಮರೆಯಬೇಡಿ ಬೈ...'' ಎಂದು ಫೋನಿಟ್ಟಳು.

ಮೂರ್ತಿ, ಇವಳು ಸಕತ್ ವಿಚಿತ್ರ ಹೆಂಗಸು ಇರಬಹುದೆಂದು ಯೋಚಿಸಿದ. ಹಾಗೆ ನೋಡಿದರೆ, ರೂಪಮಾಲಾ ಸಂಪಾದಿಸುತ್ತಿದ್ದ 'ಶ್ರೀಮತಿ' ಎಂಬ ಮಾಸಪತ್ರಿಕೆಯನ್ನು ಕಳೆದ ಏಳೆಂಟು ವರ್ಷಗಳಿಂದ ಓದುತ್ತಿದ್ದ. ಸ್ತ್ರೀ ವಿಮೋಚನೆಗೆ ಸಂಬಂಧಿಸಿದಂತೆ ತುಂಬ ಅರ್ಥಪೂರ್ಣವಾಗಿ ತರುತ್ತಿದ್ದ ಪತ್ರಿಕೆ. ಪತ್ರಿಕೆಯ ಮೂಲಕ ಆಕೆ ಭಾರತದ ಉದ್ದಗಲಕ್ಕೂ ನಾನಾ ಚಳವಳಿಗಳ ಜೊತೆ ಸಂಪರ್ಕವಿಟ್ಟುಕೊಂಡವಳು.

ಮೂರ್ತಿ ಪ್ರೆಸ್‌ಕ್ಲಬ್‌ಗೆ ಕಾಲುಗಂಟೆ ಮುಂಚೆಯೇ ಹೋದ. ಅಷ್ಟರಲ್ಲಿ ರೂಪಮಾಲಾ ಅಲ್ಲಿಗೆ ಬಂದಿದ್ದಳು. ಹೊರಗೆ ಲಾಂಜ್‌ನಲ್ಲಿ ಕುರ್ಚಿಯ ಮೇಲೆ ಕೂತು, ಕೆಲಸಗಾರರ ಹತ್ತಿರ ಮಾತಾಡುತ್ತಿದ್ದಳು. ಮೂರ್ತಿ ಹೋಗಿ ಪರಿಚಯ ಮಾಡಿಕೊಳ್ಳುವ ಮುನ್ನವೇ, ''ಬನ್ನಿ ಬನ್ನಿ, ನಿಮ್ಮ ಪ್ರೆಸ್‌ಕ್ಲಬ್ ಹುಡುಗರು ನೈಸ್‌ಬಾಯ್ಸ್'' ಎಂದಳು ನಗುತ್ತ. ಅದಕ್ಕೆ ಅಲ್ಲಿ ನಿಂತಿದ್ದ ಹುಡುಗರು ನಾಚಿಕೊಂಡಿದ್ದರು. ಮತ್ತೊಮ್ಮೆ ಅವರನ್ನು ಫೈನ್‌ಬಾಯ್ಸ್ ಎಂದು ಕಾಂಪ್ಲಿಮೆಂಟ್ಸ್ ಕೊಟ್ಟು, ''ಬಿಸಿಲು ಜೋರಾಗಿದೆ, ಮೂರ್ತಿ, ಒಂದು ಗ್ಲಾಸ್ ಬಿಯರ್ ತಗೊಳ್ಳೋಣ, ಆದರೆ ಬಿಲ್ ನಾನೇ ಕೊಡಬೇಕು, ಇಲ್ಲದಿದ್ದರೆ ನಿಮಗೆ ಕಂಪನಿ ಕೊಡೋದಿಲ್ಲ'' ಎಂದಳು ತುಂಟತನದಿಂದ. ಒಂದು ಕ್ಷಣ ಮೂರ್ತಿ, ಈಕೆಗೆ ಎಷ್ಟೊಂದು ಜೀವನೋತ್ಸಾಹ ಎಂದು ಅವಳ ಮುಖವನ್ನೇ ನೋಡುತ್ತ ಕೂತಾಗ, ಅವಳ ಕಣ್ಣಿನಲ್ಲಿ ಏನೋ ಹೊಳಪನ್ನು ಕಂಡು ಚಕಿತಗೊಂಡು, ಇಂಥ ಕಣ್ಣಿನ ಹೊಳಪನ್ನು ಅಪರೂಪಕ್ಕೆ ನೋಡುತ್ತೇನೆ ಅನ್ನಿಸಿತು. ''ಯಾಕೆ ಹಾಗೆ ನೋಡ್ತಿದ್ದೀರಿ ನನ್ನ ಮುಖವನ್ನ, ಎಂದೂ ಹೆಣ್ಣಿನ ಮುಖವನ್ನು ನೋಡದವರಂತೆ. ಅದರಲ್ಲೂ, ಮೊದಲನೆಯ ಬಾರಿಗೆ ಭೇಟಿಯಾಗುತ್ತಿರುವ ಹೆಣ್ಣನ್ನು ಈ ರೀತಿ ನೋಡಬಾರದು, ಸ್ತ್ರೀ ವಿಮೋಚನೆಯ ದೃಷ್ಟಿಯಿಂದ ಅಪರಾಧವಾಗುತ್ತದೆ. ನಾನೇನು ಉದ್ಧಟತನದಿಂದ ಮಾತಾಡುತ್ತಿಲ್ಲ ತಾನೇ?'' ''ಇಲ್ಲ, ಇಲ್ಲ'' ಎಂದು ನಗುತ್ತ ಮೌನಿಯಾದ, ಅದಕ್ಕೆ ರೂಪಮಾಲಾ, ''ಯಾಕೆ ನಕ್ಕು ಮಾತು ಮುಂದುವರೆಸಲಿಲ್ಲ? ಏನೋ ಹುಚ್ಚುಹೆಂಗಸು ಮಾತಾಡ್ತಿದ್ದಾಳೆ

ಮಾತಾಡಿಕೊಂಡು ಹೋಗಲಿ, ಅದೂ ಅಲ್ಲದೆ ದೂರದ ದೆಹಲಿಯಿಂದ ಬಂದಿದ್ದಾಳೆ. ಮಹಿಳೆಯರ ಪರವಾಗಿ ಮಾತಾಡುವ ಪತ್ರಿಕೆ ಬೇರೆ ಇದೆ. ನಾಳೆ ಏನಾದರೂ ಬಾಯಿಗೆ ಬಂದದ್ದೆಲ್ಲ ಬರೆದು ನನ್ನ ಮಾನ ತೆಗೀಬಹುದು ಎಂದು ಯೋಚಿಸುತ್ತಿದ್ದೀರಾ?'' ಎಂದು ಮೂರ್ತಿಯ ಕಡೆ ತೀಕ್ಷ್ಣವಾಗಿ ನೋಡುತ್ತ ಹೇಳಿದಳು. ಅದಕ್ಕೆ ಅವನು ನಗುತ್ತ, ''ರೂಪಮಾಲಾ, ನೀವು ನಿಜವಾಗಿಯೂ ಸ್ಟುಪಿಡ್ ಇದ್ದೀರಿ'' ಅಂದ. ''ಏಯ್ ನಿಮಗೆಷ್ಟು ಧೈರ್ಯ, ಇಲ್ಲಿಯವರೆವಿಗೆ ನನ್ನನ್ನು ಯಾರೂ ಮೊದಲ ಭೇಟಿಗೆ ಸ್ಟುಪಿಡ್ ಅಂದಿರಲಿಲ್ಲ. ಇದ್ದಕ್ಕಿದ್ದಂತೆ ಇಷ್ಟೊಂದು ಸ್ವಾತಂತ್ರ್ಯವನ್ನ ಹೇಗೆ ತೆಗೆದುಕೊಂಡಿರಿ?'' ಮೂರ್ತಿ ಮಾತಾಡದೆ ಅವಳ ಮುಖವನ್ನೇ ನೋಡುತ್ತ ಕೂತ. ಅಷ್ಟರಲ್ಲಿ ಬಿಯರ್ ಬಂತು. ಅವಳೇ ಎರಡು ಗ್ಲಾಸಿಗೂ ಬಗ್ಗಿಸಿದಳು. ತನ್ನ ಗ್ಲಾಸಿಗೆ ಹೆಚ್ಚು ನೊರೆ ಬರುವ ರೀತಿಯಲ್ಲಿ ಬಗ್ಗಿಸಿಕೊಂಡಳು. ತಿನ್ನುವುದಕ್ಕೆ ಮಿಕ್ಸೆಡ್ ಸಾಲಡ್ ಹೇಳಿದಳು.

ಇಬ್ಬರ ನಡುವ ಒಂದಷ್ಟು ಕ್ಷಣ ಮೌನ... ''ಏಯ್, ಸುಂದರವಾದ ಬಿಯರ್ ಮುಂದಿಟ್ಟುಕೊಂಡು, ಚಿಯರ್ಸ್ ಎನ್ನದೆ, ಹಾಯ್ ಎನ್ನದೆ ಕೂತಿದ್ದೇವೆ. ನಿಜವಾಗಿಯೂ ನಾವಿಬ್ಬರೂ ರ್‍ಯಾಸ್ಕಲ್ಸ್ ಇದ್ದೀವಿ ಅಲ್ಲವೇ?'' ಎಂದು ಗ್ಲಾಸನ್ನು ಮೇಲಕ್ಕೆತ್ತಿ, ಮೂರ್ತಿಯ ಗ್ಲಾಸಿಗೆ ಡಿಕ್ಕಿ ಹೊಡೆದು, ಚಿಯರ್ಸ್ ಎಂದು ಒಂದು ಗುಟುಕು ಕುಡಿದಳು. ಗ್ಲಾಸನ್ನು ಕೆಳಗಿಟ್ಟು, ತುಟಿಗೆ ಅಂಟಿಕೊಂಡಿದ್ದ ನೊರೆಯನ್ನ ಎರಡು ಕೈಗಳಿಂದ ಮುಖಕ್ಕೆ ಒರೆಸಿಕೊಳ್ಳುತ್ತ, ''ಈ ವಾತಾವರಣಕ್ಕೆ ಬಿಯರ್ ನಿಜವಾಗಿಯೂ ಚೆನ್ನಾಗಿದೆ ಅಲ್ಲವೇ? ಏಯ್ ಮಾತಾಡಪ್ಪ. ತಿಕ್ಕಲ್ ತಿಕ್ಕಲಾಗಿ ನನ್ನ ಮುಂದೆ ಕೂರಬೇಡ. ಏನೋ ದೊಡ್ಡ ಮನುಷ್ಯ, ಇಲ್ಲಿ ಏನೇನೋ ಮಾಡ್ತಿದ್ದೀಯ ಎಂದು ವಿಚಾರಿಸಿಕೊಂಡು ಹೋಗಲು ಬಂದಿರುವೆ. ಇಲ್ಲದಿದ್ದರೆ ನಿನ್ನನ್ನು ನೋಡಲು ಯಾರು ಬರ್ತಿದ್ದರು. ನನಗೇನು ದೆಹಲಿಯಲ್ಲಿ ಬೇರೆ ಕೆಲಸವಿಲ್ಲವಾ?'' ಎಂದಳು ಸಿಟ್ಟಿನಿಂದ. ''ಇಲ್ಲವಮ್ಮ ಮಹಾತಾಯಿ. ನಾನು ಮಾತಾಡದೆ ನೀನೇ ಮಾತಾಡ್ತಿದ್ದರೆ ಚೆನ್ನಾಗಿರುತ್ತದೆ. 'ಶ್ರೀಮತಿ' ಎಂಬ ಮಹಿಳಾ ಪತ್ರಿಕೆಯನ್ನ ಪ್ರತಿ ತಿಂಗಳು ತರುತ್ತ, ದೇಶದ ಉದ್ದಗಲಕ್ಕೂ ಸುದ್ದಿ ಮಾಡಿಕೊಂಡಿರುವವಳು. ಯಾವ ಯಾವುದಕ್ಕೊ ಕೈ ಹಾಕಿ, ರಿಸ್ಕ್ ತೆಗೆದುಕೊಂಡು ಬದುಕುತ್ತಿರುವವಳು. ನಿನ್ನ ಲವಲವಿಕೆ, ಜೀವನ ಪ್ರೇಮದ ಹಿಂದೆ ಅವಿತಿರುವ ಗಾಢವಾದ ವಿಷಾದ ಈ ರೀತಿಯ ಕೆಲಸವನ್ನು ನಿನ್ನಿಂದ ಮಾಡಿಸುತ್ತಿರಬಹುದೇ ಎಂದು ಯೋಚಿಸುತ್ತಿರುವೆ'' ಎಂದು ಗುಟುಕು ಬಿಯರ್ ಚಪ್ಪರಿಸಿ, ಅವಳ ಮುಖವನ್ನೇ ನೋಡುತ್ತ ಕೂತ, ಪ್ರತಿಕ್ರಿಯೆಗಾಗಿ.

ರೂಪಮಾಲಾ ಆಕಾಶದ ಕಡೆ ದಿಟ್ಟಿಸಿ ನೋಡಿದಳು. ಮೈಮುರಿದಳು. ನಗುತ್ತ, ''ಅಂತೂ ನಮ್ಮ ಮಾತು ಏಕವಚನಕ್ಕೆ ಬಂದಿದೆ. ಮತ್ತೆ ಬಹುವಚನಕ್ಕೆ ಹೋಗುವುದು ಬೇಡ... ನೋಡು ಮೂರ್ತಿ, ನನ್ನಲ್ಲಿ ವಿಷಾದ ತುಂಬಿಕೊಂಡಿದೆಯೆಂದು ನೀನ್ಯಾಕೆ ಯೋಚಿಸಬೇಕು, ನಾನು ಒಂದು ರೀತಿಯಲ್ಲಿ ಫ್ರೀ ಬರ್ಡ್ ಕಣೋ. ಎಲ್ಲೆಲ್ಲೋ ಸುತ್ತುತ್ತೀನಿ. ಕೆಲಸ ಮಾಡ್ತೀನಿ. ಆಗ ಕೆಲವು ಹಿರಿಯರು ನನ್ನ ತಲೆ ನೇವರಿಸುತ್ತ, 'ಹೀಗೆಯೇ ಬದುಕಮ್ಮ' ಎಂದು ಆಶೀರ್ವದಿಸಿದಾಗ ಪುಳಕಿತಳಾಗುವೆ. ಹೀಗೆ ಎಷ್ಟೋ ಮಂದಿ ತಲೆ ನೇವರಿಸಿದ್ದಾರೆ, ಒಳ್ಳೆಯ ಮಾತನಾಡಿದ್ದಾರೆ. ಸಭೆ ಸಮಾರಂಭಗಳಲ್ಲಿ ಸನ್ಮಾನಿಸಿ, 'ನಮ್ಮ ಸಮಾಜಕ್ಕೆ ಇಂಥ ಹೆಣ್ಣು ಮಕ್ಕಳು ಬೇಕು' ಎಂದಾಗ ಪ್ರತಿಭಟಿಸಿದ್ದೇನೆ. ಯಾಕೆಂದರೆ, ನನ್ನ ಹಾಗೆ ಬೇಡ, ಕೊನೆಯ ಪಕ್ಷ ನನ್ನಲ್ಲಿಯ ಸ್ವಲ್ಪ ಅಂಶದ ಮಟ್ಟಿಗಾದರೂ ಕೆಲಸ ಮಾಡಲು ಮುಂದೆ ಬರಲು ಬಿಡುವುದಿಲ್ಲ. ಇದು ನಿನಗೂ ಗೊತ್ತು. ಇತ್ತೀಚೆಗೆ ನಾನು ಯಾವುದೇ

ಸಭೆ, ಸಮಾರಂಭಗಳಿಗೆ ಹೋಗಿ, ವೇದಿಕೆಯ ಮೇಲೆ ಕೂರುವುದಿಲ್ಲ. ಅದೊಂದು ಕೃತಕ ವಾತಾವರಣ. ಆದ್ದರಿಂದ ನನ್ನ ಪತ್ರಿಕೆ ನನಗೆ ಕೆಲವು ರೀತಿಯ ತಪಸ್ಸನ್ನ ಕಲಿಸಿದೆ. ಏನಾದರೂ ಓದಬೇಕಾದರೆ, ಯಾರನ್ನೂ ಭೇಟಿಯಾಗುವುದಿಲ್ಲ. ಕೊಠಡಿಯ ಬಾಗಿಲು ಮುಚ್ಚಿಕೊಂಡು, ಹೊರಗಡೆಯಿಂದ ಸಾಧ್ಯವಾದರೆ ಬೀಗ ಹಾಕಿಸಿಕೊಂಡು, ಮನೆಯಲ್ಲಿ ಯಾರೂ ಇಲ್ಲ ಎನ್ನುವ ರೀತಿಯಲ್ಲಿ ಓದುತ್ತೇನೆ. ಮಕ್ಕಳ ಜೊತೆಯಲ್ಲಿ ಆಟವಾಡಬೇಕೆಂದಾಗ, ಎರಡು-ಮೂರು ದಿನ ಅನಾಥಾಲಯಗಳಲ್ಲಿದ್ದು ಅಲ್ಲಿ ಏನೇನೋ ಮರೆಯಲು ಪ್ರಯತ್ನಿಸುವೆ. ಕಳೆದ ವರ್ಷ ಏನಾಯಿತು ಗೊತ್ತಾ, ಕೆಲವು ಪ್ರವಾಹಪೀಡಿತ ಪ್ರದೇಶಗಳಿಗೆ ಹೋದೆ. ಅಲ್ಲಿ ಸೇವೆ ಮಾಡುವ ರೆಡ್‌ಕ್ರಾಸ್ ಸಂಸ್ಥೆಯ ಕಾರ್ಯಕರ್ತರ ಜೊತೆ ಸೇರಿಕೊಂಡೆ. ಸುಮ್ಮನೆ ಎರಡು ವಾರ ಕೆಲಸ ಮಾಡಿದೆ. ಕೆಲಸ ಮಾಡುವಾಗ, ನನ್ನ ಕಣ್ಣ ಮುಂದೆಯೇ ಎಷ್ಟೊಂದು ಮಂದಿ ನೀರಿನಲ್ಲಿ ಕೊಚ್ಚಿಕೊಂಡು ಹೋಗುತ್ತಿದ್ದರು ಗೊತ್ತಾ? ಕೆಲವರು ಬದುಕುವುದಕ್ಕಾಗಿ ನೀರಿನಲ್ಲಿ ಮುಳುಗಿ ಕೈಯೆತ್ತುತ್ತಿದ್ದರೆ, ಟಾಟಾ ಮಾಡಿ ಹೋಗುತ್ತಿದ್ದಾರೇನೋ ಎಂದು ಅನ್ನಿಸಿಬಿಟ್ಟಿದೆ. ಆದರೆ ಆ ರೆಡ್‌ಕ್ರಾಸ್‌ನ ಕಾರ್ಯಕರ್ತರ ಸೇವೆಯ ತನ್ಮಯತೆ ನನ್ನಲ್ಲಿಲ್ಲವಲ್ಲ ಎಂದು ನಾಚಿಕೆಯಾಯಿತು. ಇದರಿಂದ ಒಂದು ಉತ್ತಮ ಪರಿಣಾಮವಾಯಿತು. ಸೇವೆಯ ತಪಸ್ಸನ್ನು ಕಲಿಯಬೇಕು ಅನ್ನಿಸಿತು'' ಎಂದು ಕಣ್ತುಂಬ ನೀರು ತುಂಬಿಕೊಂಡಳು. ''ಸಾರಿ, ನಾನು ನಿಜವಾಗಿ ಸ್ಟುಪಿಡ್ ಇದ್ದೀನಿ'' ಎಂದು ಕರವಸ್ತ್ರದಿಂದ ಕಣ್ಣೊರೆಸಿಕೊಂಡು, ಬಿಯರ್ ಕುಡಿಯುತ್ತ, ''ಇಲ್ಲೇ ಇದ್ದು ಏನು ಸಾಯ್ತೀಯ, ಹೆಚ್ಚು ಟ್ರಾವೆಲ್ ಮಾಡು. ಟ್ರಾವೆಲ್ ಮಾಡದಿದ್ದರೆ ನಮಗೆ ಜೀವನದ ಅರ್ಥ ಸಿಗುವುದಿಲ್ಲ. ಒಂದೊಂದು ಟ್ರಾವಲ್ ಕೂಡ ನಮ್ಮ ಬದುಕಿನ ಡೈರಿಯಲ್ಲಿ ಅಮೂಲ್ಯವಾಗಿ ಉಳಿದುಬಿಡಬೇಕು'' ಎಂದು ಬಿಯರ್



ಗ್ಲಾಸಿಗೆ ಎರಡು ಕೈನ ಬೆರಳುಗಳಿಂದ ಠಣ್ ಠಣ್ ಎಂದು ಹೊಡೆಯುತ್ತ, ''ಮಾತಾಡಯ್ಯ, ಇಲ್ಲಿಯ ಮಹಿಳಾ ಚಳವಳಿಗಳನ್ನು ಕುರಿತು ಒಂದಷ್ಟು ಹೇಳು. ಅದರ ಸೋಲು ಗೆಲುವುಗಳನ್ನು ಯಾರಾದರೂ ಪ್ರಾಮಾಣಿಕವಾಗಿ ದಾಖಲಿಸುವವರು ಬೇಕು. ನಿನಗೆ ನನ್ನ ಮುಂದೆ ಹೇಳಲು ಮನಸ್ಸಿಲ್ಲದಿದ್ದರೆ ಒಂದು ಲೇಖನ ಬರೆದು ಕಳಿಸು'' ಎಂದಳು.

ಮೂರ್ತಿ ತಕ್ಷಣ ಉತ್ತರಿಸಲಿಲ್ಲ. ಬೆಕ್ಕೊಂದು ಬಂತು. ಅದನ್ನೆತ್ತಿ ತೊಡೆಯ ಮೇಲೆ ಕೂರಿಸಿಕೊಂಡಳು. ''ನೋಡು ರೂಪಮಾಲಾ, ನನಗೆ ನಿನ್ನಷ್ಟು ಚೆನ್ನಾಗಿ ಮಾತಾಡಲು ಬರುವುದಿಲ್ಲ. ನೀನು ವಿಚಿತ್ರ ರೀತಿಯಲ್ಲಿ ದೇಶ ಸುತ್ತುತ್ತ, ಏನೇನೋ ಅನುಭವಗಳನ್ನು ದಿನನಿತ್ಯ ಬರಮಾಡಿಕೊಳ್ಳುವಂಥವಳು. ಆದರೆ ನನ್ನ ಸಮಸ್ಯೆ, ಇರುವುದು; ನಾವು ಏನನ್ನೋ ಕಳಕೊಂಡಿದ್ದೇವೆ. ಅದರ ಹುಡುಕಾಟದಲ್ಲಿ ದಿನಾ ಇರುತ್ತೇವೆ. ಯಾರಾದರೂ ಏನನ್ನು ಕಳಕೊಂಡಿದ್ದೀಯ?

ಎಂದು ಕೇಳಿದಾಗ ನಮ್ಮಲ್ಲಿ ನಿರ್ದಿಷ್ಟವಾದ ಉತ್ತರವಿರುವುದಿಲ್ಲ. ಅದು ಅಮೂರ್ತವಾಗಿ ಭೂತದ ರೀತಿಯಲ್ಲಿ ಕಾಡುತ್ತಿರುತ್ತದ. ಈಗ ನೀನು ನೋಡು, ಎಷ್ಟೋ ವರ್ಷಗಳಿಂದ 'ಶ್ರೀಮತಿ' ಎಂಬ ಪತ್ರಿಕೆಯನ್ನು ತುಂಬ ಗಂಭೀರವಾಗಿ ತರ್ತಿದ್ದೀಯ. ಅದು ಎಂದಿಗೂ ನಿನಗೆ ಪರಿಪೂರ್ಣ ತೃಪ್ತಿಯನ್ನು ಕೊಟ್ಟಿರುವುದಿಲ್ಲ. ಸಂಚಿಕೆಯಿಂದ ಸಂಚಿಕೆಗೆ ಒಂದು ರೀತಿಯಲ್ಲಿ ಹುಡುಕಾಟದಲ್ಲಿಯೇ ಇರ್ತೀಯ. ನನ್ನದೂ ಅಷ್ಟೇ. ನಮ್ಮಲ್ಲಿ ಸಾಮಾಜಿಕ ಚಟುವಟಿಕೆಗಳು ಮಹತ್ತರವಾದದ್ದನ್ನು ಕೊಡದಿದ್ದರೂ, ಪ್ರತಿಕ್ಷಣ ನಮ್ಮನ್ನು ಎಂಗೇಜ್ ಮಾಡಿರುತ್ತದೆ. ಇದರಿಂದ ನಾವು ಸ್ವಲ್ಪ ಮಟ್ಟಿಗೆ ಸದಾ ರಿಲ್ಯಾಕ್ಸ್ ಆಗಿರಲು ಸಾಧ್ಯ. ನೀನು ನೋಡು, ಎಲ್ಲೆಲ್ಲೋ ಸುತ್ತಾಡುವಾಗ, ಯಾರ್‍ಯಾರನ್ನೋ ಭೇಟಿಯಾದಾಗ, ಪ್ರತಿಹಂತದಲ್ಲೂ ಅನ್ನಿಸುತ್ತಿರುತ್ತದೆ; ಇಲ್ಲಿಯವರೆವಿಗೂ ನಾನು ಬದುಕಿದ ಕ್ರಮವೇ ಬೇರೆ ಅಲ್ಲವೇ? ಎಂದು. ಹಾಗೆ ನಮ್ಮ ಅಂತರಂಗದಲ್ಲಿ ಪಿಸುಗುಡಬೇಕಾದರೆ ಅಲ್ಲಿ ಚಲನಶೀಲತೆ ಇರಬೇಕಾಗುತ್ತದೆ. ಕ್ಷಮಿಸು, ಫುಲ್‌ಸ್ಟಾಪ್ ಇಲ್ಲದೆ ಬೋರ್ ಮಾಡ್ತಿದ್ದೀನಿ. ಲೇಖನ ಬರೆದು ಕಳಿಸುವೆ. ಅದರ ಬಗ್ಗೆ ಹೆಚ್ಚು ಚರ್ಚೆಬೇಡ. ಹೋಗಲಿ, ನೀನು ಅನ್ಯಥಾ ಭಾವಿಸದಿದ್ದರೆ ನಿನ್ನ ಅಮ್ಮ-ಅಪ್ಪ ಮತ್ತು ಬಾಲ್ಯದ ಬಗ್ಗೆ ಒಂದಷ್ಟು ಹೇಳು'' ಎಂದು, ಅವಳ ಮುಖದಲ್ಲಿ ಆಗುವ ಬದಲಾವಣೆಗಳನ್ನು ಅಧ್ಯಯನ ಮಾಡುವಂತೆ ಕೂತ.

ಸಪ್ಲೈಯರ್ ಟೇಬಲ್ಲಿನ ಹತ್ತಿರ ಬಂದು ನಿಂತು, ''ಸರ್, ಮತ್ತೇನಾದರೂ?'' ಎಂದು ಕೇಳಿದ. ''ಮತ್ತೊಂದು ಬಿಯರ್‌ಗೆ ಹೇಳಲಾ?'' ''ಯಾಕೆ, ನಿನ್ನ ಆತ್ಮಕಥೆ ಹೇಳಬೇಕಾದರೆ ಮತ್ತೊಂದು ಬಿಯರ್ ಬೇಕಾಗಿದೆಯಾ?'' ''ಕತ್ತೆ ಕಚೋ ನೀನು, ನಾವು ಇಲ್ಲಿಯವರೆವಿಗೂ ಒಂದು ಬಾಟಲ್ ಬಿಯರ್ ಮಾತ್ರ ಮುಗಿಸಿರುವುದು.



ಯಾಕೋ ಇಲ್ಲಿಯ ವಾತಾವರಣ ಚೆನ್ನಾಗಿದೆ. ಎಷ್ಟೊಂದು ಹಕ್ಕಿಗಳು ಓಡಾಡ್ತವೆ. ಆಗಾಗ ಕೋಗಿಲೆ ಕೂಗುವುದು ಕೇಳಿಸುತ್ತದೆ. ಇಷ್ಟೊಂದು ಭೀಕರವಾಗಿ ಬೆಳೆಯುತ್ತಿರುವ ನಗರದಲ್ಲಿ ಇನ್ನು ಹಕ್ಕಿಗಳು ಚಿಲಿಪಿಲಿಗುಟ್ಟುವುದು, ಕೋಗಿಲೆ ಕೂಗುವುದು ಉಳಿದಿದೆಯಲ್ಲ ಎಂಬುದೇ ಸಂತೋಷದ ಸಂಗತಿ. ನಿನಗೆ ಗೊತ್ತ? ನಾನು ವರ್ಷದಲ್ಲಿ ಐದಾರು ಬಾರಿಯೂ ಕುಡಿಯುವುದಿಲ್ಲ. ಅಷ್ಟರಮಟ್ಟಿಗೆ ನನ್ನ ಪತ್ರಿಕೆ ನನ್ನನ್ನು ನಾನಾ ಹಂತಗಳಲ್ಲಿ ಕಾಪಾಡುತ್ತ ಬಂದಿದೆ. ಯಾಕೆಂದರೆ ನಿನಗೂ ಗೊತ್ತು, ಈ ಸಮಾಜದಲ್ಲಿ, ನಮ್ಮಂಥ ಹೆಣ್ಣು ಮಕ್ಕಳು, ನಾಲ್ಕು ಮಾತು ಜಾಸ್ತಿ ಮಾತಾಡಿದರೂ ಏನೇನೋ ಗುಲ್ಲೆಬ್ಬಿಸುತ್ತಾರೆ. ಆದ್ದರಿಂದಲೇ ನಾನು ಯಾವುದೇ ಪಾರ್ಟಿಗಳಿಗೆ ಹೋಗುವುದಿಲ್ಲ. ಏನಾದರೂ ಸಬೂಬು ಹೇಳಿ ತಪ್ಪಿಸಿಕೊಳ್ಳುವೆ. ಪಾರ್ಟಿಗಳಿಗೆ ಬರುವ ವಕ್ರ ವಕ್ರ ಜನರನ್ನ ಕಂಡರೇನೇ ಭಯವಾಗ್ತದೆ. ಅದರಲ್ಲೂ ಮದ್ಯ ಹೊಟ್ಟೆಯೊಳಗೆ ಹೋದಾಕ್ಷಣ ತಾವು ಮನುಷ್ಯರೇ ಅಲ್ಲವೇನೋ ಎನ್ನುವ ರೀತಿಯಲ್ಲಿ ನಡಕೊಳ್ತಾರೆ. ನಿನಗೆ ನೆನಪಿರಬಹುದು; ಎರಡು ವರ್ಷಗಳ ಹಿಂದೆ 'ಸೆಕ್ಸ್ ಮತ್ತು ಕ್ರೈಮ್'ನ ವಿವಿಧ ಮುಖಗಳನ್ನು ಕುರಿತು ಒಂದು ವಿಶೇಷಾಂಕ ತಂದಿದ್ದೆವು. ಅದರಲ್ಲಿ ಒಂದು ಲೇಖನ, ದೆಹಲಿಯ ಕ್ಲಬ್‌ಗಳ ರಾತ್ರಿ ಲೋಕದ ಬಗ್ಗೆ ಇತ್ತು. ಆ ಲೇಖನ ತಾತ್ವಿಕವಾಗಿತ್ತು. ಆ ಲೇಖನದಲ್ಲಿ ನಿರ್ದಿಷ್ಟವಾಗಿ ಯಾರನ್ನು ಕುರಿತೂ ಹೇಳಿರಲಿಲ್ಲ. ಆದರೆ ಬಹಳಷ್ಟು ಮಂದಿ ತಮಗೆ ಬೇಕಾದಂತೆ ಆರೋಪಿಸಿಕೊಂಡು ಕೂಗಾಡತೊಡಗಿದರು. ಕೆಲವರು ಕೋರ್ಟಿಗೆ ಹೋದರು. ಇನ್ನು ಕೆಲವರು ಮಾಫಿಯಾನ ಛೂ ಬಿಟ್ಟರು. ಆ ಆರು ತಿಂಗಳು ನನಗೆ ಎಲ್ಲಿಲ್ಲದ ಥ್ರಿಲ್. ನೂರಾರು ಜನ ಹೊಸದಾಗಿ ಪರಿಚಯವಾದರು. 'ಭಯಪಡಬೇಡಿ ನಿಮ್ಮ ರಕ್ಷಣೆಗೆ ನಾವಿದ್ದೀವಿ' ಎಂದು ಪತ್ರಿಕೆಗೆ ಸದಸ್ಯರಾದರು. ಪೀತ ಪತ್ರಿಕೆಗಳು ನನ್ನ ವಿರುದ್ಧ ಕೆಂಡಕಾರಿದವು. ಕೆಲವರು ನನ್ನ ಪರವಾಗಿ ಎರಡು ಮೂರು ಕಡೆ ಸಭೆ ನಡೆಸಿ, ಸರ್ಕಾರಕ್ಕೆ ಮನವಿ ಸಲ್ಲಿಸಿದರು. ಆದರೆ ಇಲ್ಲಿ ಮತ್ತೊಂದು ರೀತಿಯ ಹಿಂಸೆ ಪ್ರಾರಂಭವಾಯಿತು. ದಿನಬೆಳಗಾದರೆ, 'ಇಂಥ ಕಡೆ ಭಾಷಣಕ್ಕೆ ಬನ್ನಿ, ಇಂಥ ಕಡೆ ಚರ್ಚೆಗೆ ಬನ್ನಿ' ಎಂದು ಕಿರುಕುಳ ಕೊಡುವವರು ಜಾಸ್ತಿಯಾದರು. ಯಾವುದಾದರೂ ಅಜ್ಞಾತ ಸ್ಥಳಕ್ಕೆ ಓಡಿ ಹೋಗೋಣ ಅನ್ನಿಸಿತು. ಕೊನೆಗೆ ನನ್ನ ಗೆಳತಿಯೊಬ್ಬಳು ಬಿಹಾರಿನ ಗುಡ್ಡಗಾಡು ಪ್ರದೇಶದಲ್ಲಿ ಕೆಲಸ ಮಾಡುತ್ತಿದ್ದಳು. ಅವಳಿಗೆ ಪತ್ರ ಬರೆದು ಹೋದೆ...

ಮೂರ್ತಿ, ಅಲ್ಲಿ ಗುಡ್ಡಗಾಡಿನ ಜನರಂತೆ ಉಡುಪನ್ನು ಧರಿಸಿ ಕೆಲಸ ಮಾಡತೊಡಗಿದೆ. ಪತ್ರಿಕೆಗಳನ್ನು ಓದದೆ, ಆರಾಮವಾಗಿ ಹೊರಗಿನ ಸಂಪರ್ಕವನ್ನು ಮರೆತು ಇದ್ದೆ. ಒಂದು ದಿನ ಅಲ್ಲಿ ಯಾರ ಹತ್ತಿರವೋ ಟ್ರಾನ್ಸಿಸ್ಟರ್ ಇತ್ತು. ಅದರಲ್ಲಿ ಹಿಂದಿ ವಾರ್ತೆಯಲ್ಲಿ ನಾನು ನಾಪತ್ತೆಯಾಗಿರುವ ಬಗ್ಗೆ ದೊಡ್ಡ ಸುದ್ದಿಮಾಡಿ ಓದುತ್ತಿದ್ದರು. ಕೆಲವು ಸಂಘಟಣೆಗಳು ಪ್ರತಿಭಟಿಸಿ, ಸಿ.ಬಿ.ಐ. ತನಿಖೆ ನಡೆಸಬೇಕೆಂದು ಒತ್ತಾಯಿಸಿದ್ದರಂತೆ. ನನಗೆ ಗಾಬರಿಯಾಯಿತು. ಕೊನೆಗೆ ದೆಹಲಿಯ ಪೊಲೀಸ್ ಕಮೀಷನರ್‌ಗೆ ಒಂದು ಮನವಿ ಪತ್ರವನ್ನು ಬರೆದೆ: 'ನನಗೇನು ತೊಂದರೆಯಾಗಿಲ್ಲ. ಅನಾಥ ಜನರ ಮಧ್ಯೆ ಕೆಲಸ ಮಾಡುತ್ತ, ನನ್ನನ್ನು ನಾನು ಒಂದಷ್ಟು ದಿವಸ ಮರೆಯಲು ಬಂದಿದ್ದೇನೆ. ಇನ್ನು ಎರಡು ವಾರದಲ್ಲಿ ದೆಹಲಿಗೆ ಬಂದು ತಮ್ಮನ್ನು ಭೇಟಿಯಾಗುವೆ. ನನ್ನಿಂದ ಅನಗತ್ಯವಾಗಿ ನಿಮ್ಮ ಇಲಾಖೆಗೆ ಮುಜುಗರವಾಗುವುದು ಬೇಡ' ಎಂದು ಬರೆಯುವಾಗ ನನ್ನ ವಿಳಾಸವನ್ನು ಕೊಟ್ಟಿದ್ದೆ. ವಿಳಾಸವನ್ನು ಪ್ರಕಟಿಸಬೇಡಿ ಎಂದು ಸೂಚಿಸಿದ್ದೆ. ಇಷ್ಟಾದರೂ, ಪತ್ರ ತಲುಪಿದ ತಕ್ಷಣ ಇಬ್ಬರು ಮುಖ್ಯ ಪೊಲೀಸ್ ಅಧಿಕಾರಿಗಳು ಬಂದು, ನಾನಿರುವ

ಜಾಗವನ್ನು ಖಾತ್ರಿಮಾಡಿಕೊಂಡು ಹೋದರು. ನಾನು ಅಲ್ಲಿರುವಾಗ ನನ್ನ ಗೆಳತಿ, ಗುಡ್ಡಗಾಡಿನ ಜನರ ಮಧ್ಯೆ ಅದ್ಭುತ ಕೆಲಸ ಮಾಡಿದ ವೆರಿಯರ್ ಎಲ್ವಿ ಬರೆದ 'ಟ್ರೈಬಲ್ ಲೈಫ್' ಎಂಬ ಕೃತಿಯನ್ನು ಓದಲು ಕೊಟ್ಟಳು. ಅದನ್ನು ಓದಿ ದೆಹಲಿಗೆ ವಾಪಸ್ಸು ಹೋಗುವ ಉತ್ಸಾಹವೇ ಹೋಯಿತು. ಆದರೆ ನನ್ನ ಗೆಳತಿ ಬೈದು ಕಳಿಸಿದಳು, 'ಶ್ರೀಮತಿ' ಪತ್ರಿಕೆ ಯಾವುದೇ ಕಾರಣಕ್ಕೆ ನಿಲ್ಲಬಾರದೆಂದು.

ದೆಹಲಿಗೆ ಹೋದಾಕ್ಷಣ ಮೊದಲು ಪೊಲೀಸ್ ಕಮೀಷನರ್‌ರವರನ್ನು ಭೇಟಿಯಾದೆ. ಸುದ್ದಿಯಾಯಿತು. ಪತ್ರಿಕೆಯವರು ಬಂದು ನಾನಾ ರೀತಿಯಲ್ಲಿ ಸಂದರ್ಶಿಸಿದರು. ಹೀಗೆ ಏನೇನೋ ನಡೆಯಿತು. ಬೋರಾಯಿತಾ? ನನ್ನ ಬೊಗಳೆ ಮಾತುಗಳನ್ನು ಕೇಳಿ'' ಎಂದಳು. ''ಇಲ್ಲ ನಿನ್ನ ಬಗ್ಗೆ ಗೌರವ ಜಾಸ್ತಿಯಾಗಿದೆ. ಅಂದಹಾಗೆ, ನನ್ನ ಪ್ರಶ್ನೆಗೆ ನಿನ್ನಿಂದ ಉತ್ತರ ಬರಲಿಲ್ಲ. ನಿನ್ನ ಬಾಲ್ಯವನ್ನು ಕುರಿತು ಕೇಳಿದ್ದೆ'' ಎಂದು ಅವಳ ಮುಖವನ್ನೇ ನೋಡುತ್ತ ಕೂತ, ಮೂರ್ತಿ. ರೂಪಮಾಲಾ ನಗುತ್ತ, ''ಬಾಲ್ಯ ತುಂಬ ಉದ್ದವಾಗಿದೆ ಮಹಾರಾಯ. ಉದ್ದ ಅಂದ ಮೇಲೆ ಅಲ್ಲಿ ಸ್ವಲ್ಪ ವಿಚಿತ್ರತೆ ಇರಲೇ ಬೇಕಲ್ಲವೇ? ಯಾರಿಗೆ ಗೊತ್ತು ನಿನ್ನ ಬಾಲ್ಯವೂ ಸಹಾ ಏನೇನೋ ಆಗಿರಬಹುದು. ಆದರೆ, ನೀನು ಇಂಥ ಪ್ರಶ್ನೆ ಕೇಳ್ತೀಯ ಎಂದು ಗೊತ್ತಿದ್ದರೆ, ನಾನೇ ಮೊದಲು, 'ಮೂರ್ತಿ, ನಿನ್ನ ಬಾಲ್ಯ ಹೇಗಿತ್ತು, ಅಲ್ಲಿ ಎಂತೆಂಥ ಹಾವು, ಚೇಳುಗಳು ಬಂದುಹೋದುವು' ಎಂದು ಕೇಳಿ, ಆರಾಮವಾಗಿ ನಿನ್ನ ಮುಖದಲ್ಲಿ ಆಗುವ ಬದಲಾವಣೆಗಳನ್ನು ದಾಖಲಿಸಿಕೊಳ್ಳಬಹುದಾಗಿತ್ತು. ಇರಲಿ, ನಾನು ಮೂಲಭೂತವಾಗಿ ಪಂಜಾಬಿನ ಅಮೃತಸರದಿಂದ ಬಂದವಳು. ನನ್ನ ತಾಯಿ ಹಿಂದೂ, ತಂದೆ ಪಾರ್ಸಿ, ನನ್ನ ತಂದೆ ತಾಯಿಗಳಿಗೆ ನಾಲ್ಕು ಜನ ಮಕ್ಕಳು, ಇಬ್ಬರು ಗಂಡು, ಇಬ್ಬರು ಹೆಣ್ಣು. ನಾನು ಕೊನೆಯವಳು. ನನ್ನ ಮೊದಲನೆಯ ಅಣ್ಣ ಹದಿನಾರನೆಯ ವಯಸ್ಸಿಗೆ ಕ್ಷಯ ರೋಗದಿಂದ ನರಳಿ ಸತ್ತ, ಎರಡನೆಯ ಅಣ್ಣ ದೇಶ ವಿಭಜನೆಯ ಸಮಯದಲ್ಲಿ ದೊಂಬಿಗೆ ಸಿಕ್ಕಿ ಸತ್ತ, ಅಪ್ಪ ಒಂದು ರೀತಿಯಲ್ಲಿ ಮಾನಸಿಕ ಸ್ಥಿಮಿತತೆಯನ್ನು ಕಳೆದುಕೊಂಡು ಕುಡಿತದ ಮೊರೆ ಹೋದ, ಸಣ್ಣ ಪುಟ್ಟ ಕಾರಣಗಳಿಗೆಲ್ಲ ಅಮ್ಮನನ್ನು ಮತ್ತು ನಮ್ಮನ್ನು ತುಂಬ ಹಿಂಸಿಸುತ್ತಿದ್ದ. ಅಮ್ಮನ ಸಂಬಂಧಿಕರು ಯಾರಾದರು ಗಂಡಸರು ಬಂದರೆ, ತುಂಬ ಸಂಶಯದಿಂದ ನೋಡುತ್ತಿದ್ದ. ಅವರು ಹೋದ ಮೇಲೆ ಹುಚ್ಚಾಪಟ್ಟೆ ಕೂಗಾಡಿ ರಂಪ ಮಾಡುತ್ತಿದ್ದ. ಮತ್ತೆ, 'ನಾನು ಹೀಗ್ಯಾಕೆ ಮಾಡ್ತಿದ್ದೀನಿ' ಎಂದು ತಲೆ ಚಚ್ಚಿಕೊಳ್ಳುತ್ತ ಅಳುತ್ತಿದ್ದ. ಈ ಮಧ್ಯೆ ಒಮ್ಮೆ ಅಮ್ಮ, ಎಲ್ಲರೂ ವಿಷ ತೆಗೆದುಕೊಂಡು ಸಾಯುವುದು ವಾಸಿ ಎಂದು ಮನಸ್ಸು ಮಾಡಿದ್ದಳಂತೆ. ಇದೆಲ್ಲದರ ಮಧ್ಯೆ ನನಗೆ ಓದಿನ ಬಗ್ಗೆ ಉತ್ಸಾಹ ಕುಗ್ಗುತ್ತಿತ್ತು. ಆಗ ಅಮ್ಮ ಹೇಳುತ್ತಿದ್ದುದು, ಚೆನ್ನಾಗಿ ಓದಿ ಎಲ್ಲಾದರು ಕೆಲಸಕ್ಕೆ ಸೇರಿಕೋ. ಕೆಲಸ ಮಾಡುತ್ತಲೇ ಅನಾಥಾಶ್ರಮಗಳ ಸಂಬಂಧ ಇಟ್ಟುಕೋ. ನಿನ್ನ ಬದುಕಿಗೊಂದು ರೂಪ ಬರುತ್ತೆ ಎಂದು. ನನ್ನ ಓದಿನ ಮಧ್ಯೆಯೇ ತಂದೆ ತೀರಿಕೊಂಡರು. ಇದಾದ ಮೇಲೆ ಅಮ್ಮ ಒಂದು ವರ್ಷ ಕ್ಯಾನ್ಸರ್‌ನಿಂದ ನರಳಿ ಸತ್ತಳು. ಹೇಗೋ ಕಷ್ಟಪಟ್ಟು ಒಂದು ಡಿಗ್ರಿ ಮುಗಿಸಿದೆ. ಒಂದೆರಡು ವರ್ಷ ಎಲ್ಲೆಲ್ಲೋ ಕೆಲಸ ಮಾಡಿದೆ. ಏನೇನೋ ಅನುಭವಗಳು ಬಂದು ಸೇರಿಕೊಂಡವು. ಕೆಲಸ ಬೇಸರವಾಯಿತು. ಕಲಕತ್ತೆಗೆ ಹೋದೆ. ಆರು ತಿಂಗಳು ಮದರ್ ಥೆರೇಸಾ ಅವರ ಸಂಸ್ಥೆಯಲ್ಲಿ ಕೆಲಸ ಮಾಡಿದೆ. ಬದುಕು ಸಾರ್ಥಕ ಅನ್ನಿಸಿತು.

ಮೂರ್ತಿ, ಬೋರಾಗುತ್ತಿದೆಯಾ? ನಿನಗೆ ಬೋರಾದರೂ ಹೇಳಿ ಮುಗಿಸುವೆ. ಪ್ರತಿದಿನ ಅಲ್ಲಿ ಯಾರ್‍ಯಾರೋ ಪರಿಚಯವಾಗ್ತಿದ್ದರು. ಮದರ್ ಥೆರೇಸಾ ನನ್ನಂಥ ನೂರಾರು ಮಂದಿಗೆ ಅಮ್ಮ ಆಗಿದ್ದರು. ನಮಗೆ ತುಂಬ ದುಃಖವಾದಾಗ

ಏನಾದರೂ ಅವರಲ್ಲಿ ಹೇಳಲು ಹೋದರೆ ಕಣ್ಣೀರುಕ್ಕಿ ಬರುತ್ತಿತ್ತು. ಆಗ ತೊಡೆಯ ಮೇಲೆ ಮಲಗಿಸಿಕೊಂಡು, ಕೂದಲಲ್ಲಿ ಬೆರಳಾಡಿಸುತ್ತ, ಧೈರ್ಯ ತುಂಬುತ್ತಿದ್ದರು. ಅಂಥ ಸಮಯದಲ್ಲಿ ಕಲಕತ್ತೆಯ ಅನಾಥ ಹೆಂಗಸರ ಬಗ್ಗೆ ಒಂದು ಲೇಖನ ಬರೆದೆ. ತುಂಬ ಚರ್ಚೆಯಾಯಿತು. ಪತ್ರಿಕೆಗೆ ಕಳಿಸುವ ಮುನ್ನ ಮದರ್‌ಗೆ ತೋರಿಸಿದೆ ಅವರು ಓದಿ ಕಣ್ಣೀರು ತುಂಬಿಕೊಂಡರು. ಕೊನೆಗೆ ಮಹಿಳೆಯರಿಗಾಗಿಯೇ ಪತ್ರಿಕೆ ತರಲು ಹೇಳಿದರು.

ಇಂದು 'ಶ್ರೀಮತಿ' ಪತ್ರಿಕೆ ನನಗೆ ಜೀವಕೊಟ್ಟದ್ದರೆ ಅದಕ್ಕೆ ಮದರ್ ಕಾರಣ. ಆ ಶೀರ್ಷಿಕೆಯನ್ನು ಸೂಚಿಸಿದವರೂ ಅವರೇ. ಪ್ರಾರಂಭದ ಒಂದೆರಡು ಸಂಚಿಕೆಗಳಿಗಾಗಿ, ಅವರನ್ನು ನೋಡಲು ಬಂದವರ ಕಡೆಯಿಂದ ಚಂದಾ ವಸೂಲಿ ಮಾಡಿಕೊಟ್ಟರು. ಹಾಗೆಯೇ ಮದರ್‌ರ ಅಭಿಮಾನಿಗಳೊಬ್ಬರು ಪತ್ರಿಕೆ ದೆಹಲಿಯಿಂದ ತರಲು ಸೂಚಿಸಿದರು. ಮದರ್ ಒತ್ತಾಯ ಮಾಡಿ ನನ್ನನ್ನು ದೆಹಲಿಗೆ ಕಳಿಸಿಕೊಟ್ಟರು. ದೆಹಲಿಗೆ ನನ್ನ ಕರೆತಂದ ಆ ಮಹಾನ್ ಮಹಿಳೆ ನಿಜವಾಗಿಯೂ ಒಂದರ್ಥದಲ್ಲಿ ಮದರ್ ರೀತಿಯಲ್ಲಿ ಕೆಲಸ ಮಾಡಿದರು. ಯಾರ್‍ಯಾರನ್ನೋ ಪರಿಚಯ ಮಾಡಿಕೊಟ್ಟರು. ಒಂದು ವರ್ಷದಲ್ಲಿ 'ಶ್ರೀಮತಿ' ತನ್ನ ಕಾಲಮೇಲೆ ನಿಲ್ಲುವಂತೆ ಚಂದಾದಾರರು ದೊರಕಿದರು. ಇದರಿಂದ ನಾನು ಹೆಚ್ಚು ಕ್ರಿಯಾಶೀಲಳಾಗಿ ಕೆಲಸ ಮಾಡಲು, ನನ್ನೊಳಗೆ ಒಂದು ರೀತಿಯ ಸಾಮಾಜಿಕ ಒತ್ತಡ ನಿರ್ಮಾಣವಾಯಿತು. ಮಹಾರಾಯ, ಇದು ನನ್ನ ಸಂಕ್ಷಿಪ್ತ ಕತೆ'' ಎಂದು ಒಂದು ಗುಟುಕು ಬಿಯರ್ ಕುಡಿದು ನಿಟ್ಟುಸಿರು ಬಿಟ್ಟಳು.

ಬಾತ್‌ರೂಮಿಗೆ ಹೋಗಿ ಬರುವೆನೆಂದು ಹೋದಳು. ಬಾತ್‌ರೂಮಿನಿಂದ ಬಂದವಳು, ಮಧ್ಯೆ ಏನನ್ನೋ ಹುಡುಕುತ್ತಿದ್ದಳು. ಒಂದು ಕ್ಷಣ ಮೂರ್ತಿ ಸುಮ್ಮನೆ ಕೂತಿದ್ದ. ನಂತರ ಎದ್ದು ಹೋಗಿ, ''ಏನಾಯಿತು?'' ಎಂದು ಕೇಳಿದ. ''ನನ್ನ ಪುಟ್ಟ ಕಣ್ಣೊಂದು ಇಲ್ಲೆಲ್ಲೋ ಬಿದ್ದೋಗಿದೆ. ಹುಡುಕುತ್ತಿದ್ದೇನೆ, ಸಿಗುತ್ತಿಲ್ಲ. ಹೋಗಲಿಬಿಡು, ಈ ಹುಲ್ಲಿನ ಮಧ್ಯೆ ಸಿಗುವುದು ಕಷ್ಟ. ನಾವು ಹುಡುಕುತ್ತಿದ್ದರೆ ಅದೇ ಒಂದು ಸುದ್ದಿಯಾಗ್ತದೆ'' ಎಂದು ನಿಧಾನವಾಗಿ ತನ್ನ ಮಾಮೂಲಿ ಜಾಗದಲ್ಲಿ ಬಂದುಕೂತಳು.

ಮೂರ್ತಿ ಬದುಕಿನ ಮಾಯೆಯೊಳಗೆ ಎಷ್ಟೊಂದು ವಿಚಿತ್ರಗಳ ಸರಮಾಲೆಯಿದೆ ಎಂದು ಯೋಚಿಸುತ್ತಿದ್ದ. ಆಗ ರೂಪಮಾಲಾ, ''ಏನಯ್ಯ ಯೋಚಿಸ್ತಿದ್ದೀಯ? ಈಗ ನನ್ನ ಮುಖ ನೋಡು ಎಷ್ಟು ವಿಕಾರವಾಗಿ ಕಾಣ್ತದೆ. ಒಂದು ಕಣ್ಣಲ್ಲಿ ಬೆಳಕದೆ. ಮತ್ತೊಂದು ಕಣ್ಣಲ್ಲಿ ಕತ್ತಲಿದೆ. ಕೊನೆಗೆ ಜೀವನ ಎಂದರೆ ಇಷ್ಟೇ ಕಣೋ. ನೀನು ಮೊದಲಿನ ರೀತಿಯಲ್ಲಿ ನನ್ನ ಮುಖವನ್ನು ಮೋಹಿಸುವಂತೆ ಈಗ



ನೋಡುವುದಿಲ್ಲ, ಅಲ್ಲವೇ?'' ಎಂದಳು. ಅದಕ್ಕೆ ಅವನು ನಕ್ಕು, ''ನಿಜವಾಗಿಯೂ ಕಾಂಟ್ಯಾಕ್ಟ್ ಲೆನ್ಸ್ ಎಂದರೆ ಏನು ಎಂದು ಗೊತ್ತೇ ಇರಲಿಲ್ಲ'' ಎಂದ. ''ನನ್ನ ಪ್ರಶ್ನೆಗೆ ನೀನು ಉತ್ತರ ಕೊಡಲಿಲ್ಲ'' ಎಂದು, ಮತ್ತೊಂದು ಕಣ್ಣಿನ ಪುಟ್ಟದಾದ ಲೆನ್ಸ್‌ನ ತೆಗೆದು ಮೂರ್ತಿಯ ಕೈಗೆ ಕೊಟ್ಟು, ''ಈಗ ನಾನು ನಿಜವಾಗಿಯೂ ಕುರುಡಿ. ನೀನು ಮೊದಲಿನಂತೆ ನನಗೆ ಕಾಣುವುದಿಲ್ಲ. ಲೋಕದ ಮಾಯೆಯೊಳಗೆ ಎಷ್ಟೊಂದು ಜೀವ ಸಂಬಂಧಗಳು ಅವಿತುಕೊಂಡಿದೆಯಲ್ಲವೇ? ಕೊಡಪ್ಪ ಮಹಾರಾಯ ಅದನ್ನ ಅದಿಲ್ಲದಿದ್ದರೆ ಪೂರ್ತಿ ಕುರುಡಿಯಾಗುವೆ'' ಎಂದು ಅವನ ಕೈಯಿಂದ ತೆಗೆದುಕೊಂಡು ನಿಧಾನವಾಗಿ ತನ್ನ ಕಣ್ಣಿಗೆ ಜೋಡಿಸಿಕೊಂಡಳು. ನಗುತ್ತ, ''ನನ್ನ ಬದುಕಿನ ವಿಶ್ವರೂಪ ಎಷ್ಟು ವಿಚಿತ್ರವಾಗಿದೆ ಅನ್ನಿಸುತ್ತದೆ ಅಲ್ಲವೇ ನಿನಗೆ?'' ಎಂದು ಬಿಲ್ ತರಲು ಹೇಳಿದಳು.

ಬಿಲ್ ಬಂತು. ಮೂರ್ತಿ ಕೈಯಿಂದ ಕೊಡಿಸಲಿಲ್ಲ. ವಿಷಾದದಿಂದ ಅವಳ ಮುಖದ ಕಡೆ ನೋಡಿದ. ಕಣ್ತುಂಬ ನೀರು ತುಂಬಿಕೊಂಡಿದ್ದಳು. ''ಎದ್ದು ಬಾ'' ಎಂದು ಹೊರಗೆ ನಡೆದಳು. ಅಲ್ಲಿಯೇ ಇದ್ದ ಆಟೋದಲ್ಲಿ ಹೋಗಿ ಕೂತಳು. ''ಪತ್ರ ಬರೆಯುವುದನ್ನ ಮತ್ತು ಲೇಖನ ಕಳಿಸುವುದನ್ನ ಮರೆಯಬೇಡ.'' ಎಂದು ಕಣ್ಮರೆಯಾದಳು. ಒಂದು ಕ್ಷಣ ಮೂರ್ತಿಯ ಮನಸ್ಸು ಜಡಗೊಂಡಂತಾಯಿತು. ಎಷ್ಟೋ ವರ್ಷಗಳಿಂದ ತನ್ನ ಜೊತೆಗಿದ್ದ ಆತ್ಮೀಯವಾದದ್ದೊಂದು, ಹೇಳದೆ ಕೇಳದೆ ಹಾರಿ ಹೋಯಿತೇ ಎಂಬ ಭಾವನೆಯಿಂದ ಅವನಿಗೆ ಗೊತ್ತಿಲ್ಲದೆಯೇ ಅನಾಥಪ್ರಜ್ಞೆ ಆವರಿಸಿಕೊಂಡಿತು.



[illegible]
[illegible]
[illegible] ಪತ್ರ ಬರೆಯಲು ಹೋದೆ……

— ಶ್ರೀನಿವಾಸ್



ಶ್ರೀನಿವಾಸ್, ಮುಲ್ಕ್‌ರಾಜ್ ಆನಂದ್ ಜೊತೆಗೆ.




# ಶ್ಯಾಮ

**ಭಾರತೀ ಕಾಸರಗೋಡು**




ಚಿಕ್ಕಮ್ಮ ಮನೆಯೊಳಗೆ ಮೇಜಿನ ಮೇಲೆ ತಂದಿರಿಸಿರುವ ಪುಟಾಣಿ ಸಂಪಿಗೆಗಿಡದ ಪಕ್ಕದಲ್ಲೇ ಸಂಜು ತನ್ಮಯನಾಗಿ ಕುಳಿತುಕೊಂಡಿದ್ದ. ಮನುಷ್ಯರಿಗೆ, ರಾಗಗಳಿಗೆ ಇರುವಂತೆ ಈ ಮರಿಮರಕ್ಕೂ ಒಂದು ವ್ಯಕ್ತಿತ್ವವಿತ್ತು. ಕೇವಲ ಎರಡಡಿಯ ಗಿಡ್ಡನಿಲುವು, ಮರುಳು ಮಾಡಿಬಿಡುವಷ್ಟು ಮುದ್ದಾಗಿ ಬಾಗಿ ಬಳುಕಿರುವ ಸಣ್ಣಸಣ್ಣ ಕೊಂಬೆಗಳು, ಕೊಂಬೆ-ರೆಂಬೆಗಳ ನಡುನಡುವೆ ಬೆಳಕಿನ ಬಿಂದುಗಳ ಹಾಗೆ ಪಳಚ್ಚನೆ ಹೊಳೆದು ಅರಳಿ ನಗುತ್ತಿರುವ ಘಮ್ಮನೆ ಬಿಳಿ ಹೂವುಗಳು. ಚಿಕ್ಕಮ್ಮನ ಪ್ರೇಮಪೂರ್ಣ ಬೆರಳುಗಳ ಹಿತನೇವರಿಕೆಯಲ್ಲಿ ಈ ಪುಟ್ಟ ವೃಕ್ಷ ಹೊಸತೊಂದು ಸುಂದರಸ್ವರೂಪವನ್ನೇ ಪಡೆದುಕೊಂಡಹಾಗಿದೆ. ಆದರೆ ವಿಶಾಲ ಪ್ರಕೃತಿಯಲ್ಲಿ ಠೀವಿಯಿಂದ ಮಲೆತುನಿಂತ ಹೆಮ್ಮರಗಳ ಹೆಮ್ಮೆ ಇಲ್ಲಿ ಕಂಡು ಬರುತ್ತಿಲ್ಲ. ಬದಲಿಗೆ ''ನೀನು ಹೇಳಿದ ಹಾಗೇ ಕೇಳ್ತೀನಿ ಅಮ್ಮಾ!'' ಅನ್ನುತ್ತಾ ತನ್ನ ಬೆಳವಣಿಗೆಯನ್ನೂ, ಸಮಗ್ರ ಚಟುವಟಿಕೆಗಳನ್ನೂ, ಸಂಪೂರ್ಣವಾಗಿ ತನ್ನಮ್ಮನಿಗೇ ಒಪ್ಪಿಸಿಕೊಂಡುಬಿಡುವ ಮಗುವಿನೊಂದು ಮುಗ್ಧ ವಿನಯ ಇಲ್ಲಿ ಹೃದಯಸ್ಪರ್ಶಿಯಾಗಿ ಭಾಸವಾಗುತ್ತಿದೆ. ಹಸಿರುತುಂಬಿ ನಳನಳಿಸುತ್ತಾ ಆಹ್ಲಾದಕರ ನರುಗಂಪಿನಿಂದ ಹೃದಯದಲ್ಲಿ ಹರ್ಷತರಂಗಗಳನ್ನೇಳಿಸುತ್ತಾ ನಿಸರ್ಗದ ಕುಬ್ಜ ಅವತಾರದಂತಿದ್ದ ಆ ಮುದ್ದು ಮರಕ್ಕೂ ತನಗೂ ಏನೋ ಒಂದು ರೀತಿಯ ತಾದಾತ್ಮ್ಯವೇ ಏರ್ಪಟ್ಟುಬಿಟ್ಟಂತೆ ಅನ್ನಿಸಿ, ಅದರ ಸಾನಿಧ್ಯಸುಖದಲ್ಲಿ ಪರವಶನಾದವನಂತೆ ಕುಳಿತುಬಿಟ್ಟಿದ್ದ. ಗಿಡಮರಗಳ ನದಿಕಡಲುಗಳ ಒಡನಾಟವೇ ಹಾಗೆ; ಸುತ್ತಲಿನ

ಅನಂತ ಪ್ರಕೃತಿಯೊಂದಿಗೆ ಯಾವುದೋ ಅನಿರ್ವಚನೀಯ ಅವಿನಾಭಾವವನ್ನೇ ಸೃಷ್ಟಿಸಿಬಿಡುತ್ತದೆ. ಇಂಥ ಅಭಿನ್ನಭಾವಗಳ ಮೂಲಸೆಲೆ ಅದೆಲ್ಲಿಂದ ಹೊರಡುತ್ತದೆಯೋ?

ಸೋಜಿಗದಿಂದ ಮತ್ತಷ್ಟು ಹತ್ತಿರಕ್ಕೆ ಸರಿದು, ಮರದ ಚೆಲುವನ್ನು ವಿವರವಾಗಿ ಆಸ್ವಾದಿಸತೊಡಗಿದ. ಈ ಅಪಾರ ಸೌಂದರ್ಯದ ನಡು-ನಡುವೆ, ಕಾಂಡಕಾಂಡಗಳ ಸಂದುಗೊಂದುಗಳಲ್ಲಿ ಭರದಿಂದ ಅಡ್ಡಾಡುವ ಪುಟಾಣಿ ಇರುವೆಗಳ ಸಾಲು ಸಾಲು ಹಿಂಡು ಕಣ್ಣಿಗೆ ಬಿತ್ತು. ಏನವುಗಳ ಕಾರ್ಯಸಂಭ್ರಮ! ಸರಬರನೆ ಓಡಾಡುತ್ತಾ, ಒಂದರ ಮೂತಿಗೊಂದು ಸಡಗರದಿಂದ ಮುತ್ತು ಕೊಟ್ಟುಕೊಳ್ಳುತ್ತಾ, ಯಾವುದೋ ನಿಗೂಢರಹಸ್ಯಗಳನ್ನು ಗಹನವಾಗಿ ಪಿಸುಗುಟ್ಟಿಕೊಳ್ಳುತ್ತಾ ಮತ್ತೆ ಮರುಕ್ಷಣ ಏನೋ ಅವಸರ ಇರುವ ಹಾಗೆ ಪುಟಿದೆದ್ದು ಚಲನೆಯಲ್ಲಿ ತೊಡಗಿರುವ ಈ ಬಿಂದು ಸ್ವರೂಪಿಗಳ ಅಗಾಧ ಕಾರ್ಯತತ್ಪರತೆಯನ್ನು ಅವನು ಸುಮ್ಮಾನದಿಂದ ಗಮನಿಸುತ್ತಿರುವಾಗ, ''ಶಾಮಣ್ಣ ತಾತನ್ನ ನೋಡೋಕೆ ಹೋಗಿದ್ಯಂತಲ್ಲೋ ಸಂಜೂ, ಯಾವಾಗ ಹೋಗಿದ್ದೆ? ನಂಗೆ ಹೇಳಲೇ ಇಲ್ಲ?'' ಚಿಕ್ಕಮ್ಮನಿಂದ ಹಠಾತ್ತನೆ ತೂರಿಬಂತು ಅನಿರೀಕ್ಷಿತ ಪ್ರಶ್ನೆ. ''ಇಲ್ಲವಲ್ಲ ಚಿಕ್ಕಮ್ಮ, ನಾನು ನಿಮ್ಮನ್ನೇ ಕೇಳಿದ್ದೆನಲ್ಲ ಒಂದುಸಾರಿ ಕರಕೊಂಡು ಹೋಗಿ ಅಂತ? ನಾನು ಹೇಗೆ ಹೋಗಲಿ ಹೇಳಿ, ನಂಗಂತೂ ಅವರ ಮನೆ ಕೂಡ ಗೊತ್ತಿಲ್ಲ!'' ಸಂಜು ತಬ್ಬಿಬ್ಬಾಗಿ ಉದ್ಗರಿಸಬೇಕಾಯಿತು.

''ನಾನೂ ಹಾಗೇ ಅಂದ್ಕೊಂಡಿದ್ದೆ ಕಣೋ, ಆದ್ರೆ ಶಾಮಣ್ಣ ಅಷ್ಟೊಂದು ಖಡಾಖಂಡಿತವಾಗಿ ಹೇಳಿದ್ರು. 'ಆ ಹುಡ್ಗ ಸಂಜೀವ ಬಂದಿದ್ದ. ಏನೋ ಲೇಖನ ಬರೀತೀನಿ ಅಂದ ಹಾಗಿತ್ತಪ್ಪ' ಅಂದ್ರು. ಅದಿಕ್ಕೆ ನಿನ್ನ ಕೇಳ್ದೆ'' ಅಂದರು ಚಿಕ್ಕಮ್ಮ. ತಾನು ಅವರಲ್ಲಿಗೆ ಹೋಗದೆಯೇ ಶಾಮಣ್ಣ ತಾತ ಹೇಗೆ ತಾನೇ ಹಾಗೆ ಭಾವಿಸಿಬಿಟ್ಟರು ಅಂತ ಸಂಜೀವನಿಗೆ ದಿಗ್ಭ್ರಮೆಯಾಯಿತು. ಅವರನ್ನೊಂದು ಸಾರಿ ಭೇಟಿ ಮಾಡಬೇಕೆಂಬ ತನ್ನ ತೀವ್ರ ಹಂಬಲ, ಯಾವುದೋ ಒಂದು ಭ್ರಾಮಕಾವಸ್ಥೆಯಲ್ಲಿ ತನ್ನನ್ನವರಿಗೆ ಕಾಣಿಸಿಯೇಬಿಟ್ಟಿತೋ?

ಶಾಮಣ್ಣ ತಾತನನ್ನು ಸಂಜೀವ ನೋಡಿದ್ದದ್ದು ಒಂದೇ ಒಂದು ಸಾರಿ: ಅದು ಕೂಡ ಎಳೆಂಟು ವರ್ಷಗಳ ಹಿಂದೆ. ಯಾವುದೋ ಸಮಾರಂಭದಲ್ಲಿ ಸಮ್ಮೆಲ್ಲರ ಅಚ್ಚುಮೆಚ್ಚಿನ ಶಾಮಣ್ಣ ಇವರೇ ಅಂತ ಯಾರೋ ಅವರನ್ನು ಅವನಿಗೆ ಪರಿಚಯಿಸಿದ್ದರು. ಆ ತಾತನೋ, ಹೊಳೆಯುವ ಬಿಳಿಬಟ್ಟೆಗಳಲ್ಲಿ, ಶುಭ್ರ ಕಣ್ಣೋಟದಲ್ಲಿ, ಬೆಳಕಿನೊಂದು ಮೂರ್ತಿಯಾಗಿ ಭಾಸವಾಗಿ ಅವನನ್ನು ದಂಗುಬಡಿಸಿದ್ದರು. ಬಹುಶಃ ಸನ್ನಡವಳಿಕೆಗಳ ಸ್ವಭಾವದ ವ್ಯಕ್ತಿಗಳ ಪರಿಯೂ ಹೀಗೇ ಇರಬಹುದು. ಅವರೆಲ್ಲರ ಅಂತರಂಗದ ಮಿನುಗು ಅವರ ಮುಖದ ಮೇಲೆ ಹೊಳೆದು ತೋರುತ್ತಿರಬೇಕು. ಆದರೆ ಅವರು ಬ್ರಹ್ಮಚಾರಿ ಎಂದು ಕೇಳಿದ ಮೇಲೆ ಮಾತ್ರ ಸಂಜುಗೆ ವಿಚಿತ್ರ ಸಂಕಟವೇ ಆಗತೊಡಗಿತು. ಇಷ್ಟೊಂದು ಬುದ್ಧಿವಂತಿಕೆಯನ್ನು, ಪ್ರಖರ ರೂಪವನ್ನು ಒಂದಿಷ್ಟಾದರೂ ಮುಂದಿನ ಪೀಳಿಗೆಗೆ ವರ್ಗಾಯಿಸದೆ ತಮ್ಮಲ್ಲೇ ಕಠೋರವಾಗಿ ಕಟ್ಟಿಹಾಕಿಟ್ಟುಬಿಟ್ಟರಲ್ಲ ಎಂದವನು ಸಂತಾಪವನ್ನೇ ಪಟ್ಟುಕೊಂಡ.

ಆಮೇಲಿನ ದಿನಗಳಲ್ಲಿ, ಅವರ ಬಹುಮುಖ ವ್ಯಕ್ತಿತ್ವದ ಬಗ್ಗೆ ಅಷ್ಟಿಷ್ಟು ತಿಳಿದುಬಂದದ್ದು, ಚಿಕ್ಕಮ್ಮನ ಮುಗ್ಧ ವಿವರಣೆಗಳಿಂದ. ಶಾಮಣ್ಣ ಮೊದಲಿನಿಂದಲೂ ಒಬ್ಬ ಕಟ್ಟಾಗಾಂಧೀವಾದಿ ಮತ್ತು ನಿಜವಾದ ದೇಶಪ್ರೇಮಿ. ಹಾಗೆ ಅವರೊಬ್ಬ ಗಾಂಧೀ ಅನುಯಾಯಿ ಆಗಿ ರೂಪುಗೊಂಡ ಬಗೆಯೂ ಸ್ವಾರಸ್ಯಕರ ಸಂಗತಿಯೇ. ಮೀಸೆಯಿನ್ನೂ ನಿಧಾನವಾಗಿ ದಟ್ಟವಾಗುತ್ತಿದ್ದ ಯೌವನದ ದಿನಗಳಲ್ಲಿ ಒಂದು ಸಾರಿ, ಶಾಮಣ್ಣ ಬಾಪೂಜಿಯನ್ನು ಭೇಟಿಯಾದರು. ಶ್ರದ್ಧಾವಂತನಾಗಿ ಕಂಡ ಈ ಸ್ಫುರದ್ರೂಪಿ ತರುಣನನ್ನು ನೋಡಿ ಬಾಪೂಗೆ ಅಭಿಮಾನವುಂಟಾಗಿರಬೇಕು. ನಿಮ್ಮಂಥ ದಿಟ್ಟ ತರುಣರೇ ದೇಶಕ್ಕೆ ಬೇಕಾಗಿರೋದು, ಯಾವಾಗಿನಿಂದ ಕೆಲಸ ಶುರು ಮಾಡುತ್ತೀ ಎಂದು ಕೇಳಿದರು. ಶಾಮಣ್ಣ ಆಗಿನ್ನೂ ಗೊತ್ತುಗುರಿಯಿಲ್ಲದೆ ಅಲೆಯುತ್ತಿದ್ದವರು. ಒಂದು ನಿಶ್ಚಿತವಾದ ಉದ್ಯೋಗ ಅಂತ ಕೂಡ ಇದ್ದಂತಿರಲಿಲ್ಲ. ನಾನೇ ಇನ್ನೂ ಜೀವನದಲ್ಲಿ ನೆಲೆಯಾಗಿಲ್ಲ, ಸ್ವಲ್ಪ ಸಮಯಾವಕಾಶ ಬೇಕು ಅಂದರವರು ಅಳುಕುತ್ತಾ. ಬಾಪೂ ನಕ್ಕು,

ಹೆಗಲುತಟ್ಟಿ, ''ಇದು ಮುಂದಕ್ಕೆ ಹಾಕೋಂಥ ವಿಷಯವೇ ಅಲ್ಲ ಅಣ್ಣ... ಇವತ್ತು, ಈ ಕ್ಷಣ, ದೇಶಸೇವೆ ದೀಕ್ಷೆ ತೊಡಬೇಕು. ತೊಡುತ್ತೀಯಾ? '' ಕೇಳಿದರು. ಬೆತ್ತಲೆ ಎದೆಗೂಡಿನೊಳಗೆ ಬೆಟ್ಟದಷ್ಟು ಛಲಹೊತ್ತು ನಿಂತ ರಾಷ್ಟ್ರಪಿತನ ಮಾತಿಗೋ, ಸ್ಪರ್ಶಕ್ಕೋ ಮಂತ್ರಮುಗ್ಧರಾದವರ ಹಾಗೆ ಆಗಲಿ ತೊಡುತ್ತೀನಿ ಅಂದುಬಿಟ್ಟರು, ಯುವಕ ಶಾಮಣ್ಣ. ಮತ್ತೆ ಹಾಗೆ ಅಂಥದೊಂದು ಕಠಿಣದೀಕ್ಷೆ ಆ ಕ್ಷಣ ತೊಟ್ಟುಬಿಟ್ಟರು ಕೂಡ. ಅಂದಿನಿಂದ ಇಂದಿನವರೆಗೆ ಅವರ ಧ್ಯೇಯ ಮತ್ತು ಧೋರಣೆ ಯಾವ ಕಾರಣಕ್ಕೂ ಕದಡಿಲ್ಲ. ಜತೆಗೆ ಸ್ವತಂತ್ರ ವಿಚಾರಧಾರೆಗಳ ಈ ಕಟ್ಟುನಿಟ್ಟಿನ ಮನುಷ್ಯ ತನ್ನ ತೇಜಸ್ಸಿನ ವಲಯದೊಳಕ್ಕೆ ಎಂದೂ ಯಾರನ್ನೂ ಬಿಟ್ಟುಕೊಂಡವರೂ ಅಲ್ಲ. ತಾವು ನೆಚ್ಚಿಕೊಂಡಂಥ ತತ್ತ್ವಗಳನ್ನು ಅಚಲನಿಷ್ಠೆಯಿಂದ ಅನುಷ್ಠಾನಕ್ಕೆ ತರುತ್ತಾ, ಬಹುಶಃ ಅದೇ ಕಾರಣದಿಂದ ಜನಸಾಮಾನ್ಯರ ಅನಾದರ ಮತ್ತು ಕುಹಕಗಳಿಗೆ ಪಕ್ಕಾಗುತ್ತಾ, ಸಮಾಜದ ಮಧ್ಯೆಯೇ ಇದ್ದುಕೊಂಡು ಕೂಡ ಒಂದು ರೀತಿಯ ಪ್ರತ್ಯೇಕತೆಯಿಂದಲೇ ಬದುಕಿದವರು.

ನಗರದ ಪ್ರಶಾಂತವಾದ ಮೂಲೆಯೊಂದರಲ್ಲಿ ಏಕಾಂಗಿಯಾಗಿ ಇವರ ವಾಸ. ಅಡಿಗೆ, ಅಧ್ಯಯನ, ಉಳಿದೆಲ್ಲ ಗೃಹಕೃತ್ಯ, ಕೈತೋಟದ ನಿರ್ವಹಣೆ ಎಲ್ಲವನ್ನೂ ಸವ್ಯಸಾಚಿಯ ಹಾಗೆ ನಿಭಾಯಿಸಿಬಿಡುತ್ತಾರೆ. ತಮ್ಮನ್ನು, ತಮ್ಮ ಜೀವನಾದರ್ಶಗಳನ್ನು ಜನ ಅಷ್ಟಾಗಿ ಗ್ರಹಿಸದಿದ್ದರೂ ಶಾಮಣ್ಣನವರ ಸಾಮಾಜಿಕ ನಡವಳಿಕೆಗಳಲ್ಲಿ ಯಾವ ಕೊರೆಯೂ ಕಾಣದು. ಅತಿಥಿ ಸತ್ಕಾರದಲ್ಲಂತೂ ಅವರು ಯಾರಿಗೇನೂ ಕಡಿಮೆಯಿಲ್ಲ. ತಾವು ಕಾಫಿ-ಟೀ ದಾಸರಲ್ಲದಿದ್ದರೂ, ಮನೆಗೆ ಅಪರೂಪಕ್ಕಾದರೂ ಬರುವ ಅತಿಥಿಗಳ ಸಲುವಾಗಿ ಸಕ್ಕರೆ, ಕಾಫಿಪುಡಿಯ ಸ್ಟಾಕುಂಟು. ಚಿಕ್ಕಮ್ಮನನ್ನು ಕಂಡವರಂತೂ ಅವರಿಗೆ ಇನ್ನಿಲ್ಲದಷ್ಟು ಮಮತೆ. ಹೋದಾಗಲೆಲ್ಲ ಅಕ್ಕರೆಯಿಂದ ಕೂರಿಸಿ, ಸ್ವತಃ ತಾವೇ ಸ್ಟೋವ್ ಹೊತ್ತಿಸಿ ಕಾಫಿ ಮಾಡಿಕೊಡುತ್ತಾರೆ. ಎದುರಿಗೆ ಕೂತು ಹಣ್ಣುಬಿಡಿಸಿ ಕೊಡುತ್ತಾರೆ. ಕಡೆಗೆ ಕುಡಿದ ಲೋಟವನ್ನು ತೆಗೆಯಲು ಕೂಡ ಬಿಡಲಾರರು. ಉಪಚಾರದ ಪ್ರೀತಿ ಮಾತುಗಳಿಂದ ತವರನ್ನೇ ಮರೆಸಿಬಿಡುತ್ತಾರೆ.

ಶಾಮಣ್ಣ ಪದ್ಯಗಳನ್ನು ಕೂಡ ಬರೆಯುತ್ತಾರಂತೆ. ಆದರೆ ಅವುಗಳನ್ನು ಪ್ರಕಟಿಸಬೇಕೆಂಬ ಲೇಶಮಾತ್ರ ಹಂಬಲವೂ ಅವರಿಗಿಲ್ಲ. ಶ್ರದ್ಧೆಯಿಂದ ಕೂತುಕೊಂಡು ಕವನಗಳನ್ನು ಬರೆಯುವುದು, ಆಮೇಲೆ ಅವುಗಳನ್ನು ಯಾವುದೋ ಫೈಲಿನಲ್ಲಿ ಅಡಗಿಸಿಟ್ಟುಬಿಡುವುದು... ಇಷ್ಟಕ್ಕೆ ಮೀಸಲು ಅವರ ಸಾಹಿತ್ಯಕ ಚಟುವಟಿಕೆ.

''ಶಾಮಣ್ಣ ನಿನ್ನ ವಿಷ್ಯ ಕೇಳಿದ್ರು ಕಣೋ ಸಂಜು,'' ಚಿಕ್ಕಮ್ಮನೆಂದರು ಇನ್ನೊಂದು ದಿನ. ''ಸಂಜೀವ ಅಂದ್ರೆ ಅವತ್ತೊಂದು ದಿನ ನಂಗೆ ಸಿಕ್ಕಿದ್ದನಲ್ಲ ಅವನು ತಾನೇ? ಆ ಹುಡುಗ ಆಗಾಗ ರೇಡಿಯೋದಲ್ಲಿ ಮಾತನಾಡೋದನ್ನ ನಾನು ಕೇಳಿದ್ದೀನಿ. ಪತ್ರಿಕೆಗಳಲ್ಲಿ ಕೂಡ ಬರೀತಾನೆ ಅಲ್ವಾ?'' ಅಂತೆಲ್ಲ ಶಾಮಣ್ಣ ಅವನ ಬಗ್ಗೆ ವಿಶೇಷವಾಗಿ ವಿಚಾರಿಸಿಕೊಂಡಿದ್ದರಂತೆ.

ಹೀಗೆ ಚಿಕ್ಕಮ್ಮನ ಮನೆಯಲ್ಲಿ ಪ್ರಾಸಂಗಿಕವಾಗಿ ಅವರ ವಿಚಾರ ಬಂದಾಗ, ಅವರನ್ನು ಭೇಟಿ ಮಾಡಬೇಕೆನ್ನುವ ಹಂಬಲ ದಿಢೀರನೆ ಗರಿಗೆದರುವುದು, ಯಾವತ್ತಾದರೂ ಒಂದು ದಿನ ಹೋಗಿಯೇಬಿಡಬೇಕೆನ್ನುವ ತಾತ್ಕಾಲಿಕ ಗಟ್ಟಿನಿರ್ಧಾರವನ್ನು ಆ ಕೂಡಲೇ ತೆಗೆದುಕೊಳ್ಳುವುದು, ಮತ್ತೆ ತನ್ನ ಸಂಕೀರ್ಣ ದಿನಚರಿಗಳ ನಡುವೆ ಅವರ ನೆನಪು ಮತ್ತು ತನ್ನ ನಿರ್ಧಾರ ಮಸುಕಾಗಿಬಿಡುವುದು, ಹೀಗೆಯೇ ನಡೆಯುತ್ತಾ, ಈ ಕೆಲವು ವರ್ಷಗಳಲ್ಲಿ ಸಂಜು ಶಾಮಣ್ಣನವರನ್ನು ಭೇಟಿಯಾಗುವುದು ಒಮ್ಮೆಯಾದರೂ ಸಾಧ್ಯವಾಗಿಲ್ಲ.

ಇದೀಗ ತೊಂಭತ್ತಾಲ್ಕರ ಹಣ್ಣುಪ್ರಾಯದ ಶಾಮಣ್ಣನವರಿಗೆ ಅಷ್ಟಿಷ್ಟು ಅಸ್ವಸ್ಥತೆ ಕಾಣಿಸಿಕೊಂಡಿದೆಯಂತೆ. ಮೊದಲಿನ ಹಾಗೆ ಅವರು ಸ್ವತಂತ್ರವಾಗಿ ಕೆಲಸಗಳನ್ನು ಮಾಡಿಕೊಳ್ಳಲಾರರು. ''ಸಹಾಯಕ್ಕೆ ಒಬ್ಬ ಹುಡುಗನ್ನ ಇಟ್ಕೊಂಡಿದಾರೆ. ಜೀವನ ಹ್ಯಾಗೋ ನಡೆಯುತ್ತಾ ಇದೆ'' ಅಂದರು ಚಿಕ್ಕಮ್ಮ. ತನ್ನನ್ನು ಆಗಾಗ ನೆನಪು ಮಾಡಿಕೊಳ್ಳುತ್ತಿದ್ದ ಈ ವಯೋವೃದ್ಧರನ್ನು ಒಂದು ಸಾರಿಯಾದರೂ ಭೇಟಿ ಮಾಡದೇ



ಹೋದ ತನ್ನ ಮೂರ್ಖತನವನ್ನು ಸಂಜು ಮನಸಾರೆ ಹಳಿದುಕೊಂಡ. ತಾತನವರನ್ನು ಭೇಟಿಯೇ ಆಗದಿದ್ದರೂ "ಆ ಹುಡುಗ ಬಂದಿದ್ದ ನನ್ನ ಹತ್ರ" ಅನ್ನುತ್ತಾರಲ್ಲ ಈ ತಾತ! ಹಾಗಾದರೆ ಆ ಪ್ರಜ್ಞಾವಂತ ಮೆದುಳಿನ ಮೂಲೆಯಲ್ಲೆಲ್ಲೋ ತನ್ನ ಅಸ್ತಿತ್ವಕ್ಕೂ ಒಂದಷ್ಟು ಅಕ್ಕರೆಯ ಸ್ಥಾನ ಮೀಸಲಿತ್ತೇ? ಇಷ್ಟಕ್ಕೂ ಇಂಥ ಸಜ್ಜನನ ಆದರಾಭಿಮಾನಗಳಿಗೆ ಪಾತ್ರನಾಗುವಂಥ ಗುಣಗಳು ನಿಜವಾಗಿ ತನಗುಂಟೋ ಅಥವಾ ಇದೆಲ್ಲ ಅವರ ಕವಿಮನಸ್ಸಿನ ಮುಗ್ಧ ಭ್ರಾಂತಿಗಳೋ! ತುಂಬ ಪಶ್ಚಾತ್ತಾಪಗೊಂಡವನಂತೆ ಸಂಜೀವ, "ನಾಳೆ ಸಾಯಂಕಾಲ ಬರ್ತೀನಿ ಚಿಕ್ಕಪ್ಪ. ಅವರನ್ನು ನೋಡೋಕೆ ಹೋಗೋಣ", ನಿರ್ಧಾರದ ಧ್ವನಿಯಲ್ಲಿ ಘೋಷಿಸಿಬಿಟ್ಟ.

ಮೂರನೇ ದಿವಸ ಬೆಳಗ್ಗೆ ಯಾವುದೋ ಒಂದು ಕೌಟುಂಬಿಕ ಸಮಾರಂಭಕ್ಕೆ ಸಂಜು ಅನಿವಾರ್ಯ ಹಾಜರಾತಿ ಹಾಕಲೇಬೇಕಾಯಿತು. "ನಿನಗೊಂದು ಇನ್ವಿಟೇಶನ್ ಕೊಡಬೇಕೂಂತ ಜೋಪಾನವಾಗೇ ಇಟ್ಕೊಂಡಿದ್ದೆ... ಈಗ ನೋಡಿದ್ರೆ, ಕೈಗೇ ಸಿಕ್ತಾ ಇಲ್ವಲ್ಲಪ್ಪ!" ಜೇಬು ತಡಕಾಡುತ್ತಾ ಮೂರ್ತಿ ಬಂದು ಪಕ್ಕ ಕುಳಿತುಕೊಂಡರು. ಆಹ್ವಾನಪತ್ರಿಕೆ ಅವನ ಕೈಗಿಟ್ಟರು. ಕುತೂಹಲದಿಂದ ಅದನ್ನು ಬಿಡಿಸಿನೋಡಿದ. "ಶ್ಯಾಮ". ಅನ್ನುವವರ ಕವನ ಸಂಕಲನದ ಬಿಡುಗಡೆ ಸಮಾರಂಭಕ್ಕೆ ಆಹ್ವಾನವಾಗಿತ್ತು ಅದು. "ಈ ಶ್ಯಾಮ ಅಂದರೆ ಯಾರು, ನಂಗೆ ಗೊತ್ತಾಗಲಿಲ್ಲವಲ್ಲ?" ಸಂಜು ಚಕಿತನಾಗಿ ಕೇಳಿದ.

"ಮತ್ತಿನ್ಯಾರು? ನಮ್ಮ ಶಾಮಣ್ಣನೇ! ಶ್ಯಾಮ ಅನ್ನೋ ಹೆಸರಿನಲ್ಲೇ ಅವರು ಪದ್ಯ ಬರೆಯೋದು. ಆದರೆ ಅವರ ಕಾವ್ಯನಾಮ ಯಾರಿಗೂ ಗೊತ್ತಿಲ್ಲ ಅಷ್ಟೇ... ಅವರೊಬ್ಬ ಅಜ್ಞಾತ ಕವಿ." "ಅವರು ಮನಸ್ಸು ಮಾಡಿದ್ದಿದ್ರೆ, ಪುಸ್ತಕ ಯಾವತ್ತೋ ಹೊರಬರಬೇಕಾಗಿತ್ತು. ಆದ್ರೆ, ಅವರಿಗದರಲ್ಲೆಲ್ಲ ಆಸ್ಥೆಯೇ ಇಲ್ಲ! ತಾನೂ ಪ್ರಕಟಸಲಿಲ್ಲ, ಬೇರೆಯೋರು ಪ್ರಕಟಸೋಕೂ ಬಿಡಲಿಲ್ಲ... ಹಠವಾದಿ! ಈಗ ತೀರಾ ಹುಶಾರಿಲ್ಲ. ಅಂತಾದ ಮೇಲೆ, ನಾವೇ ಗಲಾಟೆ ಮಾಡಿ, ಅವಸರದಲ್ಲಿ ಪ್ರಕಟಿಸಿದ್ದಾಯ್ತು. ನೀನಂತೂ ಫಂಕ್ಷನ್ನಿಗೆ ಬರದೆ ಇರಬೇಡಪ್ಪ. ಎಲ್ರಿಗೂ ನಾನು ಹಾಗೇ ಹೇಳಿದೀನಿ. ಈಗ ನೋಡಿದ್ರೆ, ನೋಡಿದ ಹಾಗೆ ಅವರನ್ನ... ಆಮೇಲೆ ಶಾಮಣ್ಣ ನಮಗೆ ಸಿಗ್ತಾರೋ ಇಲ್ವೋ?" "ಹಾಗೇ? ಅಷ್ಟೊಂದು ಹುಶಾರು ತಪ್ಪಿದೆಯೇ?" ಸಂಜುವಿನ ಗಾಬರಿಯ ಪ್ರಶ್ನೆಗೆ, "ತೀರಾ ಅಂದರೆ ತೀರಾ ಆರೋಗ್ಯವಿಲ್ಲಪ್ಪ ಶಾಮಣ್ಣಂಗೆ, ನಾಳೆ ಸಂಜೆವರೆಗಾದರೂ ಸ್ವಲ್ಪ ಚೈತನ್ಯ ಬೇಕಲ್ಲ ಅಂತ ಆಸ್ಪತ್ರೆ ಸೇರಿಸಿ ಗ್ಲೂಕೋಸ್‌ನಲ್ಲಿಟ್ಟಿದೀವಿ. ಹಿರಿಜೀವ... ಹೋಗುವಾಗ ಯಾವ ಕೊರೆಯೂ ಬೇಡ. ತನ್ನ ಪುಸ್ತಕ ಬಿಡುಗಡೆ ಆಗೋದನ್ನ ನೋಡಿಯೇ ಹೊರಟುಬಿಡಲಿ... ಛಾಂ, ನೀನು ನಾಳೆ ಖಂಡಿತ ಬರ್ತೀತಾನೇ?" ಅವನ ಭುಜ ಸವರಿ, ಅವನ ಚಿಂತನೆಗಳೊಳಗೆ ಅವನನ್ನು ಬಿಟ್ಟು, ಮೂರ್ತಿ ಮತ್ತೆಲ್ಲೋ ಹೊರಟುಹೋದರು.



ಪುಸ್ತಕ ಬಿಡುಗಡೆ ಸಮಾರಂಭದ ದಿವಸ ಸಭಾಂಗಣದ ಮೊದಲ ಸಾಲಿನ ಒಂದು ಕುರ್ಚಿಯಲ್ಲಿ ಶಾಮಣ್ಣ ನಿಶ್ಶಕ್ತರಾಗಿ ಕುತ್ತಿಗೆ ಬಗ್ಗಿಸಿ ಕುಳಿತುಕೊಂಡಿದ್ದರು. ತಲೆಗೂದಲು ಮೊದಲಿಗಿಂತ ಹತ್ತಿಯಾಗಿತ್ತು. ಬೆನ್ನು ನಸುವೆ ಬಾಗಿತ್ತು. ವೃದ್ಧಾಪ್ಯದ ದೆಸೆಯಿಂದ ಅಶಕ್ತತೆ ಮೂಡಿದ್ದರೂ ವ್ಯಕ್ತಿತ್ವದ ಪ್ರಭೆಯೇನೂ ಮಾಸಿರಲಿಲ್ಲ. ''ಅಗೊಳ್ಳೋ ಸಂಜು, ಅಲ್ಲಿ ಕೂತಿದಾರೆ ನೋಡು ಶಾಮಣ್ಣ... ನೋಡಿದೆಯಾ, ಮಾತನಾಡಿದೆಯಾ?'' ಮೂರ್ತಿ ಕೇಳಿದಾಗ, ''ನೀವೇ ಕರಕೊಂಡು ಹೋಗಿ ಗುರುತುಮಾಡಿಸಿಬಿಡಿ. ಬಹಳ ದಿನಗಳ ಹಿಂದೆ ನೋಡಿದ್ದಲ್ವಾ? ನನ್ನ ಮರೆತುಬಿಟ್ಟಿರ್ತಾರೋ ಏನೋ?'' ಸಂಜು ಅಂಗಲಾಚಿದ. ಮೂರ್ತಿ, ಅವನನ್ನು ಶಾಮಣ್ಣನವರ ಹತ್ತಿರ ಕರೆದುಕೊಂಡು ಹೋಗಿ, ಅವರ ಕಿವಿಯ ಬಳಿ ಬಾಗಿ, ಮೆಲ್ಲಗೆ, ''ಶಾಮಣ್ಣ, ಇಗೋ ಸಂಜು!... ಆಗಾಗ ನೀವು ಕೇಳ್ತಾ ಇದ್ರಲ್ಲ... ಇವನೇ!'' ಅಂದರು. ಶಾಮಣ್ಣ ನಿಧಾನವಾಗಿ ಕತ್ತೆತ್ತಿ ಸಂಜುವನ್ನು ಕಂಡರು. ಅದಾಗಲೇ ಬಿಳುಪೇರಿ ಹೋಗಿದ್ದ ಆ ಜರ್ಝರಿತ ಕಣ್ಣೋಟದಲ್ಲಿ ಅವನನ್ನು ಗುರುತಿಸಲು ಪ್ರಯಾಸವೇ ಕಂಡಂತಾಯಿತು. ನಿಧಾನವಾಗಿ ನೆನಪಾಗಿರಬೇಕು. ಅಂತಃಕರಣದ ಅಕ್ಕರೆಯೆಲ್ಲ ವ್ಯಕ್ತವಾಗಿಬಿಡುವ ಹಾಗೆ ಒಂದು ಪ್ರೀತಿಯ ಮುಗ್ಧ ಮಂದಹಾಸ, ಜೋಲುತ್ತಿದ್ದ ಅವರ ಹಣ್ಣುಗೆನ್ನೆಗಳಲ್ಲಿ ಅಸ್ಥಿರವಾಗಿ ಅದುರುತ್ತಿದ್ದ ಗಲ್ಲದಲ್ಲಿ ನಿಧನಿಧಾನವಾಗಿ ಹರಡಿಕೊಳ್ಳತೊಡಗಿತು. ಮೆಲ್ಲಗೆ ತುಟಿಯಲುಗಿಸಿ ಪಿಸುದನಿಯಲ್ಲೆಂಬಂತೆ ''ಸಂಜೀವ?'' ಅಂದರು. ಬಾಗಿ ನಮಸ್ಕರಿಸಲು ಹೋದವನನ್ನು ಥಟ್ಟನೆ ತಡೆದು ನಿಲ್ಲಿಸಿ, ಅವನ ಎರಡೂ ಕೈಗಳನ್ನು ತಮ್ಮ ಕೈಗಳಲ್ಲಿ ಹಿತವಾಗಿ ಹಿಡಿದಿಟ್ಟುಕೊಂಡು, ಸುಮ್ಮನೆ ಅವನನ್ನೇ ನೀರವವಾಗಿ ನೋಡುತ್ತಾ ಕಣ್ಣು ಪಿಳುಕಿಸತೊಡಗಿದರು. ಆ ಶೀತಲಕರ ಸ್ಪರ್ಶದಲ್ಲಿ ಅದೆಷ್ಟು ಪ್ರೀತಿಯಿತ್ತೋ? ಆ ಬಿಳಿನೋಟದಲ್ಲಿ ಅದೆಂಥ ಮಾರ್ದವತೆ ಹುದುಗಿತ್ತೋ! ಮರಣದ ಅಂಚಿಗೆ ಸದ್ದಿಲ್ಲದೆ ಸಾಗಿಹೋಗುತ್ತಿರುವ ಈ ಗೌರವಾನ್ವಿತ ವಯೋವೃದ್ಧರ ವಿಹ್ವಲ ಚಹರೆಗಳನ್ನು ಮೂಕವಾಗಿ ಅವಲೋಕಿಸತೊಡಗಿದ. ಜೀವಂತಿಕೆಯ ಛಾಯೆ ಮಸುಕಾಗುತ್ತಾ ಬಂದಿದ್ದ ಅವರ ಮೃದು ಅಂಗೈಗಳನ್ನು ಕಂಡು ಥಟ್ಟನೆ ತನ್ನ ಅಪ್ಪಯ್ಯನ ಕೈಗಳು ನೆನಪಾಗಿಬಿಟ್ಟು ಸಂಕಟವಾಯಿತು. ತೀರಿಹೋಗುವ ಐದಾರುಗಂಟೆಗಳ ಮುನ್ನ ಅಪ್ಪಯ್ಯನ ಕೈಗಳು ಕೂಡ ಹೀಗೆಯೇ ಬಿಳುಪೇರಿಹೋಗಿದ್ದವು... ಹೀಗೆಯೇ ಹಿಮಸಮಾನವಾಗಿಬಿಟ್ಟಿದ್ದವು... ಹೀಗೆಯೇ ಅಂಗೈಗಳ ನರಗಳಲ್ಲಿ ಹಸಿರು ದಟ್ಟವಾಗುತ್ತಾ ಹೋಗಿತ್ತು!





''ಶಾಮಣ್ಣ ಮಾವಂಗೆ ತಲೆಸಿಡಿತ ತುಂಬಾ ಜಾಸ್ತಿ ಆಗಿಬಿಟ್ಟಿದೆ ಸಂಜೂ... ಅದನ್ನ ತಡಕ್ಕೊಳ್ಳೋಕೆ ಶಕ್ತಿ ಇಲ್ಲದೆ ಅತ್ತುಬಿಡ್ತಾರೆ ಪಾಪ! ಮತ್ತೆ ಆಸ್ಪತ್ರೆ ಸೇರಿಸಿದಾರಪ್ಪ [illegible] ಮರುದಿನವೇ ಸ್ವಲ್ಪವೂ ಅನಿರೀಕ್ಷಿತವಲ್ಲದ ರೀತಿಯಲ್ಲಿ ಚಿಕ್ಕಮ್ಮನಿಂದ ವರ್ತಮಾನ ಬಂದಿತು. ಕೂಡಲೇ ಅವರಿದ್ದ ಆಸ್ಪತ್ರೆಗೆ ಧಾವಿಸಿದ.

ಹೊದ್ದುಕೊಂಡಿದ್ದ ಬಿಳಿಯ ಹೊದಿಕೆಗೂ ಸ್ವಂತ ಮೈಬಣ್ಣಕ್ಕೂ ವ್ಯತ್ಯಾಸವೇ ಇಲ್ಲದ ಹಾಗೆ ಮಲಗಿದ್ದವರು, ಇನ್ನೇನು ಆರಿಹೋಗಲಿರುವ ಜಾಜ್ವಲ್ಯಮಾನವಾದ ದೀಪದ ಹಾಗೆ ಕಂಡರು. ಸಂಜು ಮೆಲ್ಲಗೆ ಅವರ ಪಕ್ಕಕ್ಕೆ ಹೋಗಿ ನಿಲ್ಲುತ್ತಿದ್ದಂತೆ, ಮಂಕಾಗಿ ಶೂನ್ಯ ದಿಟ್ಟಿಸುತ್ತಿದ್ದ ನಿಶ್ಶಕ್ತ ಕಣ್ಣುಗಳಲ್ಲಿ ಒಂದಷ್ಟು ಚಲನೆ ಕಂಡಂತಾಯಿತು. ಅವನನ್ನು ಗುರುತಿಸಿದವರೇ, ''ಬಾ ಕೂತ್ಕೋ'' ಎಂದು ತಮ್ಮ ಪಕ್ಕದ ಕುರ್ಚಿ ತೋರಿಸಿದರು. ಅವನು ಕೂತಮೇಲೆ, ಅವನು ಬರುವುದನ್ನೇ ಕಾದುಕೊಂಡಿದ್ದವರ ಹಾಗೆ, ಒಂದಿಷ್ಟೂ ಮುಕ್ಕಾಗದ ಸ್ಫುಟಧ್ವನಿಯಲ್ಲಿ ಮಾತಿಗಾರಂಭಿಸಿದ್ದರು. ಆ ಮಾತುಗಳ ವರಸೆಯೋ! ಮೈತುಂಬ ನಳಿಕೆಗಳನ್ನು ಹಾಕಿಕೊಂಡು ಮಗ್ಗುಲು ಬದಲಾಯಿಸಲು ಕೂಡ ಬೇರೆಯವರನ್ನು ಆಶ್ರಯಿಸಬೇಕಾದಂಥ ತಮ್ಮ ಅಸಹಾಯಕ ಪರಿಸ್ಥಿತಿಯ ಬಗೆಗಿನ ವೇದನಾಪೂರ್ಣ ಮುಲುಗುಗಳಲ್ಲ ಅವು. ಅಥವಾ ದೇಹದ ಅಂಗುಲ ಅಂಗುಲವನ್ನೂ ಬಿಡದೆ ವ್ಯಾಪಿಸಿ ಬಾಧಿಸುತ್ತಿರುವ ಯಾವ ನೋವುಗಳ ಕುರಿತ ಮಾತಲ್ಲ. ಅವರು ನುಡಿದದ್ದೆಲ್ಲ ತಾವು ತಮ್ಮ ಜೀವನದಲ್ಲಿ ಕಂಡ ಧೀಮಂತ ವ್ಯಕ್ತಿಗಳ ಬಗ್ಗೆ; ಅವರ ಆದರ್ಶಗಳಿಂದ ತಾವು ಪ್ರಭಾವಿತರಾದ ರೀತಿ. ಎಲ್ಲಕ್ಕಿಂತ ಹೆಚ್ಚಾಗಿ ಅವರ ಮಾತುಗಳಲ್ಲಿ ಎದ್ದುಕಂಡದ್ದು ತಾವು ಅಪೇಕ್ಷಿಸಿದ್ದ ಕೆಲವು ವ್ಯಕ್ತಿಚಿತ್ರಣಗಳ ಯೋಜನೆಗಳು ಮುಕ್ತಾಯದ ನೆಲೆಯನ್ನು ತಲುಪಲಿಲ್ಲವಲ್ಲ ಅನ್ನುವ ತೀವ್ರ ದುಃಖ.

ಹೊಳೆವ ಬಿಳಿಕೆನ್ನೆಗಳ ಮೇಲೆ ಧಾರೆಧಾರೆಯಾಗಿ ಅದು ಸುರಿದುಹೋಗುತ್ತಿತ್ತು. ಎಷ್ಟೋ ಮಹನೀಯರ ವಿಷಯವಾಗಿ ಸಂಶೋಧನೆ ಮಾಡಿಬಿಡಬಹುದಾದಷ್ಟು ಸಾಮಗ್ರಿ ತನ್ನಲ್ಲಿತ್ತು. ಆದರೆ ಒಂದು ಲೇಖನ ಕೂಡ ಬರೆಯಲಾಗಲಿಲ್ಲ ಎಂದು ಚಿಕ್ಕದರು. ನಾನು ಹುಶಾರಾದ ಮೇಲೆ ಖಂಡಿತ ಮನೆಗೆ ಬಾ ಸಾಧ್ಯವಾದಷ್ಟು ವಿವರ ಹೇಳ್ತೀನಿ, ನೀನಾದರೂ ಲೇಖನಗಳನ್ನು ಬರಿ ಅಂದರು.

ಸಂಜುವಿಗಂತೂ ಮಾತು ಮೂಕವಾಗಿ ಹೋಗಿತ್ತು. ಈ ಹಿರಿಯ ವ್ಯಕ್ತಿ, ಇಂಥ ವಿಚಿತ್ರ ಸನ್ನಿವೇಶದಲ್ಲಿ ತನ್ನ ವಿಷಯವಾಗಿ ತೋರುತ್ತಿರುವ ಈ ಅತಿಶಯ ಆತ್ಮೀಯತೆ ಎಲ್ಲಿಂದ ಬಂತು? ಇಷ್ಟು ದಿನ ಯಾಕೆ ಅಡಗಿ ಕೂತುಬಿಟ್ಟಿತ್ತು?

ಭಾರವಾದ ಮನಸ್ಸಿನಿಂದ ಶಾಮಣ್ಣನವರಿಗೆ ನಮಸ್ಕರಿಸಿ ಸಂಜು ಮೇಲೆದ್ದ. ಅವನು ಬಾಗಿಲ ಬಳಿ ಹೊರಡುವಾಗ ''ನಾಳೆ ನಾಡಿದ್ದರಲ್ಲಿ ಡಿಸ್ಚಾರ್ಜ್ ಮಾಡಿಬಿಡ್ತಾರೆ ನನ್ನ... ತಪ್ಪದೆ ಮನೆಗೆ ಬಾ!'' ಅಂದರು ಮತ್ತೆ!

ಭಾನುವಾರ ಬೆಳಿಗ್ಗೆ ಮೂರ್ತಿಗಳ ಫೋನ್ ಬಂತು. ''ನಿನ್ನೆ ರಾತ್ರಿ ಒಂಬತ್ತು ಗಂಟೆಗೆ ಶಾಮಣ್ಣ

ಹೋಗಿಬಿಟ್ಟರಪ್ಪ!... ಬರ್ತೀ ತಾನೇ?... ಬಾಡಿ ಹನ್ನೊಂದು ಗಂಟೆ ತನಕ ಇರುತ್ತೆ'' ಒಂದು ಹೊಳೆಹೊಳೆವ ಸ್ವರೂಪ, ಒಂದು ಸತ್ವಶಾಲೀ ಹಿರಿಯ ಚೇತನ, ಬಾಡಿಯಾಗಿಬಿಟ್ಟಿತು.

ಸಂಜು ಮೆಲ್ಲಗೆ ಮೇಲೆದ್ದು, ಮೊದಲು ಚಿಕ್ಕಮ್ಮನಲ್ಲಿಗೆ ಹೋಗಿ, ಅವರನ್ನು ಕರೆದುಕೊಂಡು ಶಾಮಣ್ಣನವರ ಮನೆಗೆ ಹೋದ. ದೊಡ್ಡದೊಂದು ಗುಲಾಬಿ ಹಾರದ ನಡುವೆ ಶಾಮಣ್ಣ ಕಿರುನಗು ಸೂಸುತ್ತಾ ಕಣ್ಮುಚ್ಚಿ ಮಲಗಿಬಿಟ್ಟಿದ್ದರು. ಕಿಟಕಿಯೆಡೆಯಿಂದ ಧಾಳಾಗಿ ತೂರಿಬರುತ್ತಿದ್ದ ಸೂರ್ಯನ ಎಳೆಕಿರಣಗಳು ಅವರ ಮುಖವನ್ನು ಮತ್ತಷ್ಟು ಬೆಳಗಿಸಿಟ್ಟಿದ್ದವು. ನೆರೆದವರ ನಿಟ್ಟುಸಿರು ಕೂಡ ಸ್ಪಷ್ಟವಾಗಿ ಕೇಳಿಸುವಷ್ಟು ಗಂಭೀರ ನೀರವ ವಾತಾವರಣ. ವ್ಯಸನದ ಪರಿಮಳವನ್ನು ಎಲ್ಲೆಡೆ ಹರಡುತ್ತಿರುವ ಊದುಬತ್ತಿಯ ಸುರುಳಿ ಸುರುಳಿ ಹೊಗೆ... ತಲೆಯ ಹತ್ತಿರ ಮಂದವಾಗಿ ಉರಿಯುತ್ತಿರುವ ನಂದಾದೀಪ... ಮೈತುಂಬ ಆವರಿಸಿದ್ದ ಬಣ್ಣಬಣ್ಣದ ಪುಷ್ಪಗುಚ್ಛ....

ಸುಮ್ಮನೆ ನಿಂತುಕೊಂಡಿರುವುದು ಕಷ್ಟವಾಗಿ ತೋರಿ, ನಿಧಾನವಾಗಿ ಮನೆಯನ್ನೆಲ್ಲ ಒಂದು ಪ್ರದಕ್ಷಿಣೆ ಹೊಡೆದ. ವೆರಾಂಡದಲ್ಲಿ, ಹಜಾರದಲ್ಲಿ, ಕಡೆಗೆ ಊಟದ ಮನೆಯ ಮೇಜುಕುರ್ಚಿಗಳ ಮೇಲೆ ಕೂಡ ರಾಶಿರಾಶಿ ಪುಸ್ತಕಗಳು, ಪತ್ರಿಕೆಗಳು. ''ಶಾಮಣ್ಣನ ಲೈಬ್ರೆರಿ ನಿಂಗೆ ತೋರಿಸ್ತೀನಿ ಬಾ'', ಮೂರ್ತಿ ಅವನನ್ನು ಒಂದು ದೊಡ್ಡ ಕೋಣೆಗೆ ಕರೆದುಕೊಂಡು ಹೋದರು. ಆಳೆತ್ತರದ ಗಾಜಿನ ಕಪಾಟುಗಳಲ್ಲಿ ಶಿಸ್ತಾಗಿ ಜೋಡಿಸಿಟ್ಟ ಸಾವಿರಾರು ಪುಸ್ತಕಗಳು. ಕುತೂಹಲದಿಂದ ಕೆಲವನ್ನು ತೆಗೆದು ಪುಟ ತಿರುಗಿಸಿದ. ಇಷ್ಟವಾಗುವ ವಿಷಯಗಳು; ಪ್ರಿಯರಾಗುವ ಲೇಖಕರು. ಯಾಕೋ ಕಾರಣ ತಿಳಿಯದೆ ಸಂಕಟವಾಯಿತು. ಅಷ್ಟರಲ್ಲಿ ''ನೀನು ಪುಸ್ತಕ ನೋಡ್ತಾ ಇರು... ಇನ್ನೂ ವ್ಯಾನು ಯಾಕೆ ಬರಲಿಲ್ವೋ ಒಂದು ಫೋನು ಮಾಡಿ ನೋಡ್ತೀನಿ'' ಎಂದು ಮೂರ್ತಿ ಹೊರಗೆಹೋದರು. ಕಡೆಗೆ ಅವನಿಗೂ ಬಹಳ ಹೊತ್ತು ಆ ನಿಗೂಢ ಅಪರಿಚಿತ ವಾತಾವರಣದಲ್ಲಿ ಒಂಟಿಯಾಗಿ ನಿಂತುಕೊಳ್ಳುವುದು ಸಾಕೆನಿಸಿ, ಮತ್ತೆ ಹಜಾರಕ್ಕೆ ಹಿಂತಿರುಗಿ ಬಂದು ಶವದ ಮುಂದೆ ಮೌನವಾಗಿ ನಿಂತುಕೊಂಡ.

ಕಡೆಗೆ ಶವವನ್ನು ಕೊಂಡೊಯ್ಯಲು ವ್ಯಾನು ಬರುವುದು ಇನ್ನೂ ಸಾಕಷ್ಟು ತಡವಾಗಬಹುದೆಂದು ಸಮಾಚಾರ ಬಂದದ್ದರಿಂದ, ''ಪಾಪ ತುಂಬ ಹೊತ್ತು ಕಾಯಿಸೋದು ಬೇಡಪ್ಪ ಶಾಮಣ್ಣನ್ನ'' ಅಂತ ಯಾರೋ ಹೋಗಿ ಒಂದು ಕಾರನ್ನು ತಂದರು. ಆ ಬಿಳಿಯ ದೊಡ್ಡಕಾರಿನಲ್ಲಿ ಸ್ವಸ್ಥವಾಗಿ ಮಲಗಿ ಬಿಳಿಬಿಳಿ ಮುಖದ ಶಾಮಣ್ಣ ಚಿಂತೆಗಳ ಕಂತೆಗಳನ್ನೆಲ್ಲ ಒಂದೇ ಸಾರಿಗೆ ಕೊಡವಿಕೊಂಡವರ ಹಾಗೆ ಹೊರಟುಬಿಟ್ಟರು. ಮತ್ತಿನ್ನು ಅವರ ಹಿಂದೆ ಉಳಿದುಕೊಂಡದ್ದಾದರೂ ಏನು? ■

ಪುಸ್ತಕ ಬಿಡುಗಡೆ ಸಮಾರಂಭದ ದಿವಸ ಸಭಾಂಗಣದ ಮೊದಲ ಸಾಲಿನ ಒಂದು ಕುರ್ಚಿಯಲ್ಲಿ ಶಾಮಣ್ಣ ನಿಶ್ಶಕ್ತರಾಗಿ ಕುತ್ತಿಗೆ ಬಗ್ಗಿಸಿ ಕುಳಿತುಕೊಂಡಿದ್ದರು. ಕತೆಗೂಡಲು ಮೊದಲಾಗಿದ್ದು ಅಲ್ಲಿಂದಾಗಿತ್ತು.



ಭಾರತೀ ಕಾಸರಗೋಡು.





# 'ಮನಸ್ಸಿಲ್ಲದ ಮಾರ್ಗ'ದ ಮಾರ್ಗದರ್ಶಿ ಮೀನಗುಂಡಿ ಸುಬ್ರಹ್ಮಣ್ಯಂ

■ ಎ.ಎನ್. ವೆಂಕಟಲಕ್ಷ್ಮಿ

'ಮನುಷ್ಯನಿಗೆ ಬರದೆ (ಮಾನಸಿಕ) ಕಾಯಿಲೆ ಮರಕ್ಕೆ ಬರುತ್ತದೆಯೇ?'... ಸಂಘಜೀವಿ ಮನುಷ್ಯನ ಮಾನಸಿಕ ಅಸ್ವಸ್ಥತೆ ಹಿಂದೆಂದಿನಿಂದ ಇರುವ ಸಮಸ್ಯೆ. ಮಾನಸಿಕ ಕ್ಲೇಶಗಳನ್ನು ಬಗೆಹರಿಸಿಕೊಳ್ಳಲು ಸುಲಭೋಪಾಯವಾಗಿ, ಶೀಘ್ರ ಪರಿಹಾರದ ಚಿಕಿತ್ಸಾಕ್ರಮವಾಗಿ ಬೆಳೆದುಬಂದಿರುವ 'ಸಂವಾದ ತಂತ್ರ'-ಟ್ರ್ಯಾನ್ಸಾಕ್ಷನಲ್ ಅನಾಲಿಸಿಸ್ (ಟಿ.ಎ.) ಇತ್ತೀಚೆಗೆ ಮನುಷ್ಯನನ್ನು ಅರ್ಥಮಾಡಿಕೊಳ್ಳಲು ವ್ಯಾಪಕವಾಗಿ ಬಳಸಲ್ಪಡುತ್ತಿರುವ ಸಿದ್ಧಾಂತ-ಚಿಕಿತ್ಸಾ ಮಾರ್ಗ. ಇದನ್ನು ಶಿಬಿರಗಳ ಮೂಲಕ ಅಸಂಖ್ಯ ನೊಂದವರಿಗೆ-ಆಸಕ್ತರಿಗೆ, ತಳಸ್ಪರ್ಶಿ ಬರವಣಿಗೆಯ ಮೂಲಕ ಕನ್ನಡಿಗರಿಗೆ ನೀಡಿದ ಡಾ॥ ಮೀನಗುಂಡಿ ಸುಬ್ರಹ್ಮಣ್ಯಂ ದೇಶದ 'ಶುದ್ಧ ಟಿ.ಎ. ಥೆರಪಿಸ್ಟ್'ರಲ್ಲಿ ಒಬ್ಬರು. ಈ ಬಾರಿ ಅವರೊಂದಿಗೆ ನಮ್ಮ 'ಸಹವಾಸ'.

'A healthy mind in a healthy body' ಎನ್ನುವ ನಾಣ್ಣುಡಿಯೊಂದಿದೆ. ಸದೃಢ ದೇಹದಲ್ಲಿ ಆರೋಗ್ಯಪೂರ್ಣ 'ಮನಸ್ಸು' ಎಂದು ಇದರರ್ಥ. 'ಶಾರೀರಿಕ'ದಂತೆ 'ಮಾನಸಿಕ' ಬೆಳವಣಿಗೆ, ರೋಗ, ಸ್ವಾಸ್ಥ್ಯಗಳೂ ಇವೆ. ಆದರೆ ದೇಹದ ಆರೋಗ್ಯ ಸ್ಥಿತಿಯನ್ನು ಅಳೆದು ನಿರ್ಧರಿಸಲು ಉಷ್ಣತೆ, ಉಸಿರಾಟ, ನಾಡಿಬಡಿತ, ರಕ್ತದೊತ್ತಡ ಮುಂತಾದ ಅಳತೆಗೋಲುಗಳಿದ್ದರೆ, ಮಾನಸಿಕ ಆರೋಗ್ಯವನ್ನು ಅಳೆದು ನಿರ್ಧರಿಸಲು ಯಾವುದೇ ನಿರ್ದಿಷ್ಟ ಪ್ರಮಾಣಗಳಿಲ್ಲ.

ತನ್ನ ಬಗ್ಗೆ ಮತ್ತು ಪರಿಸರದ ಬಗ್ಗೆ ಅರಿವು ಚೆನ್ನಾಗಿಯೇ ಇದ್ದು, ಶಾರೀರಿಕವಾಗಿಯೂ ಸದೃಢನಾಗಿದ್ದರೂ ಪರಿಸರಕ್ಕೆ ಮತ್ತು ತನಗೆ ಸಂಬಂಧಪಟ್ಟಂತೆ ಭಾವನೆ ಮತ್ತು ಯೋಚನೆಗಳ ಹಂತದಲ್ಲಿ ಹೊಂದಾಣಿಕೆ ಸಾಧ್ಯವಾಗದೇ ತೊಳಲಾಡುವ ಮನುಷ್ಯ 'ನ್ಯೂರೋಸಿಸ್'ನಿಂದ ಬಳಲುತ್ತಿದ್ದಾನೆ ಎಂದು ಸ್ಥೂಲವಾಗಿ ಹೇಳಬಹುದು.

ಚಿಕಿತ್ಸೆಯ ಅವಶ್ಯಕತೆ ಇರುವ, ಚಿಕಿತ್ಸೆಯಿಂದ ತನ್ನ ಸಮಸ್ಯೆಗಳನ್ನು ವಾಸಿ ಮಾಡಿಕೊಂಡು ಆರೋಗ್ಯಕರ, ನೆಮ್ಮದಿಯ ಜೀವನವನ್ನು ಅನುಭವಿಸಲು ಸಾಧ್ಯವಿರುವ ಆದರೆ ಚಿಕಿತ್ಸೆಯನ್ನೇ ಒಲ್ಲದ ವ್ಯಕ್ತಿಗಳು



ಡಾ॥ ಮೀನಗುಂಡಿ ಸುಬ್ರಹ್ಮಣ್ಯಂ

ಪ್ರಪಂಚದೆಲ್ಲೆಡೆ ಸಮಾಜದ ಎಲ್ಲ ಸ್ತರಗಳಲ್ಲಿ ಕಾಣಸಿಗುತ್ತಾರೆ. ಹೀಗಾಗಿ, ಪ್ರಸಿದ್ಧ ಸಾಹಿತಿಯೊಬ್ಬ ಗಮನಿಸಿದಂತೆ 'ನಾವೆಲ್ಲಾ ಒಂದಲ್ಲ ಒಂದು ಬಗೆಯಲ್ಲಿ ನ್ಯೂರಾಟಿಕ್'ಗಳೇ.

ಅಂದುಕೊಂಡ ಕೆಲಸ ಮಾಡಲಾರದೆ ಅಸಹಾಯಕತೆ ಅನುಭವಿಸುವುದು. ಮೇಲಧಿಕಾರಿ, ಹಿರಿಯರು ಮತ್ತಿತರ ಜೊತೆ ಮಾತನಾಡಲು ಸಂಕೋಚ, ಮುಜುಗರ ಅನುಭವಿಸುವುದು ಪರಿಸ್ಥಿತಿಯನ್ನು ಖಂಡಿತ ನಿಭಾಯಿಸುತ್ತೇನೆ ಎಂದು ಪ್ರತಿಸಲ ಗಟ್ಟಿಮನಸ್ಸು ಮಾಡಿಕೊಂಡರೂ ಪುನ: ಸೋಲುವುದು, 'ಇದು ನನಗೆ ಸರಿಯಲ್ಲ, ಬಿಡಬೇಕು' ಎಂದು ಎಷ್ಟೇ ಹೇಳಿಕೊಂಡರೂ ಕೋಪ, ಭಯ ಅಥವಾ ದು:ಖಪಡುತ್ತಾ. 'ಹಣೆ ಬರಹ'ದ ಬಗ್ಗೆ ಪರಿತಪಿಸುವುದು; 'ಗೊತ್ತಿಲ್ಲ', 'ಆಗುವುದಿಲ್ಲ' ಅಥವಾ ಇಲ್ಲ ಅನ್ನಲಾಗದೆ ಬೇಡದ ಹೊರೆ ವಹಿಸಿಕೊಂಡು ತೊಂದರೆ ಅನುಭವಿಸುವುದು, 'ಇತರರೆಲ್ಲ ಚೆನ್ನಾಗಿದ್ದಾರೆ, ಆದರೆ ನಾನು ಸರಿಯಿಲ್ಲ' ಎಂಬಂಥ ಸಂಘರ್ಷಗಳನ್ನು ಅನುಭವಿಸುವುದು... ಇವೆಲ್ಲ ನ್ಯೂರಾಸಿಸ್‌ನ ಲಕ್ಷಣಗಳು.

ಮಾನಸಿಕ ಸಮಸ್ಯೆಗಳನ್ನು ಗುಣಪಡಿಸಲೆಂದು ಸಿಗ್ಮಂಡ್ ಫ್ರ್ಯಾಯ್ಡ್, ಯೂಂಗ್ ಮತ್ತು ಅಡ್ಲರ್‌ರಂತಹ ದಿಗ್ಗಜರು ರೂಪಿಸಿದ 'ಮನೋವಿಶ್ಲೇಷಣೆ' (Psycho analysis)ಯ ನ್ಯೂನತೆಗಳನ್ನು ಸರಿಪಡಿಸಿಕೊಳ್ಳಲು ಸಾಧ್ಯವಾಗುವಂತೆ ಬೆಳೆದುಬಂದ ಇತ್ತೀಚೆಗಿನ ಕೆಲವು ಮಹತ್ವದ ಚಿಕಿತ್ಸಾ ಸಿದ್ಧಾಂತ ಮತ್ತು ಕ್ರಮಗಳಲ್ಲಿ ಟ್ರ್ಯಾನ್ಸಾಕ್ಷನಲ್ ಅನಾಲಿಸಿಸ್ (ಟಿ.ಎ.)- 'ಸಂವಾದತಂತ್ರ' ಸಹ ಒಂದು.

ಈ ಚಿಕಿತ್ಸಾ ತಂತ್ರದಿಂದ ಸಮಸ್ಯಾಪರಿಹಾರ ಮಾಡುತ್ತಿರುವ ಡಾ॥ ಮೀನಗುಂಡಿ ಸುಬ್ರಹ್ಮಣ್ಯಂ, ಟಿ.ಎ. ಥೆರಪಿಸ್ಟರಲ್ಲಿ ಮೊದಲಿಗರು. (ಅವರು ತಮ್ಮನ್ನು ತಾವೇ ತಮಾಷಯಾಗಿ ಕರದುಕೊಂಡಂತೆ) 'ಕರ್ನಾಟ ಆದಿ ಟಿಎಶ್ವರ!'

ಮನೋರೋಗ ಚಿಕಿತ್ಸೆಯ ಬಗ್ಗೆ ಸಾರ್ವಜನಿಕರು, ಆಸಕ್ತರು ಕೇಳುವ ಅದದೇ ಪ್ರಶ್ನೆಗಳನ್ನು (ನಿಯತಕಾಲಿಕಗಳ ಆರೋಗ್ಯ-ಅಂಕಣಗಳಲ್ಲಿ ಕಾಣಿಸಿಕೊಳ್ಳುವ ಅವವೇ ಹಸ್ತ ಮೈಥುನ, ಸ್ವಪ್ನ ಸ್ಖಲನದ ಪ್ರಶ್ನೆಗಳಂತೆ!) ಉತ್ತರಿಸಲು ತಮ್ಮ ಕಲ್ಪನೆಗೆ ತೋಚಿದ್ದನ್ನೇ ಸತ್ಯ ಎಂದು ನಂಬಿ, ಈ ನಂಬಿಕೆಗಳನ್ನೇ ಬಲವಂತವಾಗಿ ಹೇರಿ, ಕಮ್ಮಟ, ಶಿಬಿರಗಳನ್ನು ನಡೆಸುವ 'ಸ್ವಯಂ ಭೂ'ಗಳು, ಅಪ-ವೈದ್ಯರು ಎಲ್ಲ ಕಡೆಯೂ ಇದ್ದಾರೆ.


ಎಸ್. ಶ್ರೀಧರಮೂರ್ತಿ

ಈ ದಿಸೆಯಲ್ಲಿ ಸಾಹಿತ್ಯ, ಸಿನಿಮಾಗಳ ಕಾಣಿಕೆಯೂ ಅಪಾರ! ''ಸಾಹಿತ್ಯ ಕೃತಿಗಳಲ್ಲಿ ಚಿತ್ರಿತವಾಗಿರುವ 'ಸೈಕಾಲಜಿ ಡಾಕ್ಟರರ' ಸೌಭಾಗ್ಯವನ್ನು ಕಂಡು ಕರುಬವ ಥೆರಪಿಸ್ಟರಲ್ಲಿ ನಾನೂ ಒಬ್ಬ' ಎನ್ನುವ ಡಾ॥ ಸುಬ್ರಹ್ಮಣ್ಯಂ, ವೈಜ್ಞಾನಿಕವಾಗಿ ಅಂಗೀಕೃತವಾದ ಸಿದ್ಧಾಂತಗಳನ್ನು ಆಧರಿಸಿ ಅಸ್ತವ್ಯಸ್ತವಾಗಿರುವ ಮಾನಸಿಕ ಕ್ರಿಯೆಯನ್ನು ಗುಣಪಡಿಸುವ 'ಸೈಕೊಥೆರಪಿ'ಯಲ್ಲಿ ಗಣನೀಯ ಸಾಧನೆ ಮಾಡಿದ್ದಾರೆ.

ಟ್ರ್ಯಾನ್ಸಾಕ್ಷನಲ್ ಅನಾಲಿಸಿಸ್ (ಸಂವಾದ ತಂತ್ರ) ಮನುಷ್ಯನ ವರ್ತನೆಯನ್ನು ವಿವರಿಸುವ ಶಾಸ್ತ್ರವಷ್ಟೇ ಅಲ್ಲ, ಮನುಷ್ಯರ ಜೀವನಶೈಲಿಯ ಬಗ್ಗೆ ಒಂದು ದೃಷ್ಟಿಕೋನವೆಂದೂ ಗುರುತಿಸಲ್ಪಟ್ಟಿದೆ. ಹೀಗಾಗಿ 'ಅಮೆರಿಕನ್ ಪರಮಾತ್ಮ' ಎರಿಕ್ ಬರ್ನ್‌ನ 'ಟಿ.ಎ. ದಾಸೋಹ' ಎಂದು ಆಗೀಗ ತಮಾಷೆಯ ಹೆಸರಿಟ್ಟು ಮೀನಗುಂಡಿಯವರು ನಡೆಸುವ ಕಮ್ಮಟಗಳಲ್ಲಿ ಮಾನಸಿಕ ಸಮಸ್ಯೆ ಇಲ್ಲದವರೂ ಕೂಡ ಜ್ಞಾನಾರ್ಜನೆಯ ಖುಷಿಗಾಗಿ ಪಾಲ್ಗೊಳ್ಳುತ್ತಿದ್ದಾರೆ.

ದಿನೇ ದಿನೇ ಒತ್ತಡದ ಬದುಕಿನ ಕಬಂಧ ಬಾಹುಗಳೊಳಗೆ ಇಂಚಿಂಚಾಗಿ ಸರಿಯುತ್ತಾ, ಜೀವನದ ಮೂಲಭೂತ ಸಂತೋಷ, ಆತ್ಮೀಯತೆ, ನೆಮ್ಮದಿಗಳಿಂದ ವಂಚಿತರಾಗುತ್ತಿರುವ ಜನತೆಗೆ ಟಿ.ಎ. ಜ್ಞಾನ ಹೊಸ ಚೈತನ್ಯ ಸೆಲೆ ಉಕ್ಕಿಸಬಲ್ಲದೇ ಎಂಬುದು ನಮ್ಮೆಲ್ಲರಿಗೆ ಸಂಬಂಧಿಸಿದ ಪ್ರಶ್ನೆ. ಅದಕ್ಕೆ ಡಾ॥ ಸುಬ್ರಹ್ಮಣ್ಯಂ ಹೀಗೆ ಉತ್ತರಿಸುತ್ತಾರೆ:

''1970ರಿಂದ 1982ರವರೆಗೆ ವೃತ್ತಿ ಜೀವನದಲ್ಲಿ ನಾನೊಬ್ಬ ಯಶಸ್ವಿ ವೈದ್ಯನಾಗಿದ್ದೆ. ಹಣ ಸಂಪಾದನೆ, ಸಮಾಜದಲ್ಲಿ ಗೌರವ ಎಲ್ಲ ಸಿಕ್ಕಿತ್ತು. ಆದರೆ ನನ್ನ ಬಗ್ಗೆ ತಾನು ಅತೃಪ್ತನಾಗಿದ್ದೆ. ಶೀಘ್ರಕೋಪ, ಖಿನ್ನತೆ ಈ ಎರಡರಿಂದಾಗಿ ಜೀವನ ಪ್ರೀತಿ ಇಲ್ಲವಾಗಿತ್ತು. ಕೋಪ, ಖಿನ್ನತೆ ಕಳೆದುಕೊಳ್ಳಲು ಸೈಕ್ರಿಯಾಟ್ರಿಸ್ಟ್, ಸೈಕಾಲಜಿಸ್ಟರ ಭೇಟಿಯಿಂದ ಸಮಸ್ಯೆಗಳು ಹೆಚ್ಚಾಗಲಿಲ್ಲ ಎಂಬುದೊಂದೇ ಸಮಾಧಾನ! ಕೊನೆಗೆ ಕೊಚ್ಚಿನ್ ನಗರದಲ್ಲಿ, ಎರಿಕ್ ಬರ್ನ್ ಶಿಷ್ಯ ಫಾದರ್ ಕಂಡತಿಲ್ ಪ್ರಾರಂಭಿಸಿರುವ ಇನ್‌ಸ್ಟಿಟ್ಯೂಟ್ ಫಾರ್ ಕೌನ್ಸೆಲಿಂಗ್ ಆ್ಯಂಡ್ ಟ್ರ್ಯಾನ್ಸಾಕ್ಷನಲ್ ಅನಾಲಿಸಿಸ್-ಐಸಿಟಿಎ ಎಂಬ ತರಬೇತಿ ಸಂಸ್ಥೆಯಲ್ಲಿ ತಂಗಿದ್ದು, ಅಲ್ಲಿ ಟಿ.ಎ., ಗೆಸ್ಟಾಲ್ಟ್ ಥೆರಪಿಯಲ್ಲಿ ತರಬೇತಿ ಹೊಂದಿದೆ. ಈಗ ನನ್ನ ಜನರಲ್ ಪ್ರಾಕ್ಟೀಷನರ್ ಹುದ್ದೆಗಿಂತ ಈ ಉಪವೃತ್ತಿ-ಸೈಕೋಥೆರಪಿಸ್ಟ್-ನನಗೆ ಅಂಗೀಕಾರ, ಆತ್ಮೀಯತೆಗಳ ಸುಂದರ ಅನುಭವ ನೀಡಿದೆ. ಬದುಕಿಗೆ ಹೊಸ ಅರ್ಥ ಪಡೆದುಕೊಂಡಿದ್ದೇನೆ.

ಸಾಂಪ್ರದಾಯಿಕ ಥೆರಪಿಗಳಲ್ಲಿನ ಪ್ರಮುಖ ವಿಧಾನವೆಂದರೆ, 'ಸುಪ್ತಪ್ರಜ್ಞೆ'ಯಲ್ಲಿರುವ ಕಾರಣ ಹೊರಗೆಳೆದು, ಅದಕ್ಕೆ ಪರಿಹಾರ ಕಂಡುಹಿಡಿದು, 'ರೋಗ' ವಾಸಿ ಮಾಡುವುದು. ಹೊಸ ಸಾಧ್ಯತೆಯೆನಿಸಿರುವ ಟಿ.ಎ.ನಲ್ಲಿ, ಇದಕ್ಕೆ ತದ್ವಿರುದ್ಧವಾಗಿ, ರೋಗಿಯ ಇಲ್ಲಿಯ, ಈಗಿನ ಸಮಸ್ಯಾ ವರ್ತನೆ ಕಾರಣವನ್ನು ಈಗ, ಇಲ್ಲೇ ಹುಡುಕುವುದು. 'ವಾಸಿ ಆದಾಗ ಹೇಗೆ ಇರುತ್ತೀ ಎಂಬುದನ್ನು ಮೊದಲು ಅಭ್ಯಾಸಮಾಡಿಕೋ' ಎಂದು ಆತನನ್ನು 'ಕ್ರಿಯಾಶೀಲನನ್ನಾಗಿಸಿ', 'ರೋಗಿ'ಯನ್ನು ಗುಣಪಡಿಸುವುದು 'ಸುಪ್ತಪ್ರಜ್ಞೆ' ಎಂದರೇನು, ಅದು ಎಲ್ಲಿದೆ ಎಂಬ ಪ್ರಶ್ನೆಗಳಿಗೆ ಖಚಿತ ಉತ್ತರವಿಲ್ಲವೆಂದು ಟಿ.ಎ. ಅದರ ಇರುವಿಕೆಯನ್ನು ಅಲ್ಲಗಳೆಯುತ್ತದೆ.

ಟಿ.ಎ.ಯ ಮೂಲ ಮಂತ್ರವೆಂದರೆ ಪೇರೆಂಟ್, ಅಡಲ್ಟ್, ಚೈಲ್ಡ್ ಎಂಬ ಮೂರು ಬಗೆಯ 'ಈಗೋ ಸ್ಟೇಟ್'ಗಳಿಂದ ನಮ್ಮ ವ್ಯಕ್ತಿತ್ವ ರೂಪಿತವಾಗಿದೆ ಎನ್ನುವ ಅಂಶ. ಒಂದು ಪರಿಸ್ಥಿತಿಗೆ ನಾವು ಪ್ರತಿಸ್ಪಂದಿಸುವಾಗ ಬಳಸುವ ನಿರ್ದಿಷ್ಟ ಭಾವನೆ, ಯೋಚನೆ ಮತ್ತು ಇವುಗಳ ಜೊತೆಗಿನ ನಿರ್ದಿಷ್ಟ ವರ್ತನೆ-ಈ ಮೂರನ್ನು ಸೇರಿಸಿ ಈಗೋ ಸ್ಟೇಟ್ ಎನ್ನುತ್ತೇವೆ. ಹುಟ್ಟಿದಂದಿನಿಂದ ಇಲ್ಲಿಯವರೆಗೆ ನಾವು ನೋಡಿದ, ಕೇಳಿದ

ಅನುಭವಿಸಿದ ಮತ್ತು ಕಲಿತ ವಿವರಗಳನ್ನು ದಾಖಲೆ ಮಾಡಿಕೊಳ್ಳುತ್ತ ಈಗೋ ಸ್ಟೇಟ್‌ಗಳನ್ನು ರೂಪಿಸಿಕೊಳ್ಳುತ್ತೇವೆ.

ಒಂದು ಪರಿಸ್ಥಿತಿಯಲ್ಲಿ ನಮ್ಮ ತಂದೆ ತಾಯಿ, ಹಿರಿಯರು ಇತ್ಯಾದಿ ಬಾಲ್ಯದಲ್ಲಿ ನಮ್ಮನ್ನು ಸಾಕಿ, ತಿದ್ದಿದವರಂತೆ ನಾವು ವರ್ತಿಸುತ್ತಿದ್ದೇವೆ ಎಂದಾದರೆ ನಾವು ಪೇರೆಂಟ್ ಈಗೋ ಸ್ಟೇಟ್‌ನಲ್ಲಿ ಇದ್ದೇವೆ; ಮಕ್ಕಳಂತೆ ವರ್ತಿಸುತ್ತಿದ್ದೇವೆ ಎಂದರೆ ಚೈಲ್ಡ್ ಈಗೋ ಸ್ಟೇಟ್'ನಲ್ಲಿ ಇದ್ದೇವೆ ಮತ್ತು ಈ ಎರಡರಿಂದ ಭಿನ್ನವಾಗಿ, ಪರಿಸ್ಥಿತಿಯನ್ನು ಪರೀಕ್ಷಿಸಿ, ಇಲ್ಲಿ, ಈ ಕ್ಷಣದ ಅವಶ್ಯಕತೆಗನುಸಾರವಾಗಿ ವರ್ತಿಸುತ್ತಿದ್ದೇವೆ ಎಂದಾದರೆ ನಾವು ಅಡಲ್ಟ್ ಈಗೋ ಸ್ಟೇಟ್‌ನಲ್ಲಿದ್ದೇವೆ ಎಂದರ್ಥ. ಉದಾಹರಣೆಗೆ ಕೊನೆಯ ಚೆಂಡಿಗೆ ರನ್‌ಗಳಿಸಲಾರದೆ ಭಾರತ ಒಂದು ದಿನದ ಅಂತಾರಾಷ್ಟ್ರೀಯ ಟೂರ್ನಿಯಲ್ಲಿ ಸೋತಾಗ, ಕೋಪದಿಂದ, 'ಈ ತರಹ ಸೋಲುವ ಟೀಮ್ ಕಳಿಸುವ ನಮ್ಮ ಕ್ರಿಕೆಟ್ ಕಂಟ್ರೋಲ್ ಬೋರ್ಡ್‌ನವರಿಗೆ ಗುಂಡು ಹಾಕಬೇಕು' ಎನ್ನುವ ಪ್ರತಿಕ್ರಿಯೆ ಪೇರೆಂಟ್ ಈಗೋ ಸ್ಟೇಟ್‌ನಿಂದ ಬಂದಿದ್ದಾದರೆ, ಯಾವುದೋ ಭಾವನೆಗಳಿಲ್ಲದೆ, 'ಮ್ಯಾಚ್ ಮುಗಿಯಿತು. ನಾವು ಸೋತಿದ್ದೇವೆ' ಎನ್ನುವುದು ಅಡಲ್ಟ್ ಈಗೋ ಸ್ಟೇಟ್‌ಗೆ ಒಪ್ಪುವ ಪ್ರತಿಕ್ರಿಯೆ. ತುಂಬ ದು:ಖದಿಂದ, 'ನಾವು ಸೋತೆವು, ಸೋಲಬಾರದಾಗಿತ್ತು, ಆ ಕೊನೆಯ ಬಾಲ್ ಲೂಸ್ ಆಗಿ ಬಂದಿದ್ದರೆ' ಎನ್ನುವ ಯೋಚನೆ ಚೈಲ್ಡ್ ಈಗೋ ಸ್ಟೇಟ್‌ನಿಂದ ಬರುವಂಥದ್ದು.

ಪೇರೆಂಟ್, ಅಡಲ್ಟ್, ಚೈಲ್ಡ್ ಈಗೋ ಸ್ಟೇಟ್‌ಗಳಿಗೂ ಮನಷ್ಯನ ವಯಸ್ಸಿಗೂ ಸಂಬಂಧವಿಲ್ಲ. ಆರೋಗ್ಯವಂತರಲ್ಲಿ, ಮೂರು ವರ್ಷದ ಮಗುವಿನಿಂದ ಹಿಡಿದು ಹಣ್ಣು ಹಣ್ಣು ಮುದುಕನವರೆಗೆ ಎಲ್ಲ ಮನಸ್ಸಿನವರಲ್ಲಿ ಈ ಮೂರು ಈಗೋ ಸ್ಟೇಟ್‌ಗಳನ್ನು ಸ್ಪಷ್ಟವಾಗಿ ಕಾಣಬಹುದು, ಹಾಗೆಯೇ ಈ ಮೂರು ಈಗೋ ಸ್ಟೇಟ್‌ಗಳಲ್ಲಿ ಇದು ಶ್ರೇಷ್ಠ, ಇದು ಕನಿಷ್ಠ ಎಂದು ಹಣೆಪಟ್ಟಿ ಹಚ್ಚಲಾಗದು. ಪರಿಸ್ಥಿತಿ ಮತ್ತು ಪರಿಣಾಮ ಅನುಸರಿಸಿ ಅವು ಸರಿ ಅಥವಾ ತಪ್ಪಾಗಿರಬಹುದು.

ಮನುಷ್ಯ ವರ್ತನೆಯನ್ನು ವಿವರಿಸಲು ಬಾಲ್ಯದ ಅನುಭವಕ್ಕೆ-ಇತರ ತಂತ್ರಗಳು ಕೊಡುವಂತೆ- ಟಿ.ಎ. ಕೂಡ ಒತ್ತು ಕೊಡುತ್ತದೆ. ''ತಾನು ಹೇಗೆ ಬಾಳಬೇಕು ಎಂಬುದನ್ನು ಮನುಷ್ಯ ತನ್ನ ಬಾಲ್ಯದಲ್ಲಿಯೇ ನಿರ್ಧಾರ ಮಾಡುತ್ತಾನೆ ಮತ್ತು ಈ ಬಾಲ್ಯದ ನಿರ್ಧಾರಗಳಂತೆಯೇ ಜೀವನವಿಡೀ ಬಾಳುತ್ತಾನೆ'' ಎನ್ನುವುದು ಟಿ.ಎ.ಯ ಮೂಲ ಸಿದ್ಧಾಂತ. ಆದರೆ ಈ ಬಾಲ್ಯದ ಅನುಭವಗಳನ್ನು ಎಲ್ಲಿ ಹುಡುಕ್ತೀವಿ, ಹೇಗೆ ಬದಲಾಯಿಸಿಕೊಳ್ಳುತ್ತೀವಿ ಎನ್ನುವುದೂ ಅಷ್ಟೇ ಮುಖ್ಯ. ಹೊಸ ನಿರ್ಧಾರಗಳನ್ನು ಮಾಡಿ ಹೊಸ ರೀತಿಯಲ್ಲಿ ಬಾಳುವ ಸಾಮರ್ಥ್ಯ ಪ್ರತಿಯೊಬ್ಬನಲ್ಲೂ ಇದೆ ಎನ್ನುವ ಅಂಶವೇ ಟಿ.ಎ. ಅನ್ನು ಯಶಸ್ವಿ ಥೆರಪಿಯನ್ನಾಗಿಸಿದೆ. ಸ್ವತ: ತಾನು 150 ಗಂಟೆಗಳ ಥೆರಪಿಗೆ ಕಡ್ಡಾಯವಾಗಿ ಒಳಗಾದ ನಂತರವೇ ಒಬ್ಬಾತ ಟಿ.ಎ. ಥೆರಪಿಸ್ಟ್ ಆಗುವ ಅರ್ಹತೆ ಹೊಂದುತ್ತಾನೆ.

'ಸಂವಾದ ತಂತ್ರ'ದಲ್ಲಿ ಮಾತೇ ಪ್ರಧಾನ ಅಸ್ತ್ರ. ತಳಮಳದಲ್ಲಿರುವ ವ್ಯಕ್ತಿ ವಾಸ್ತವ ಸಂಗತಿಗಳನ್ನು ಯಾವ ರೀತಿ ತಿರುಚಿ ನೋಡುತ್ತಿದ್ದಾನೆ? ಮುಂತಾದ ಪ್ರಶ್ನೆಗಳಿಗೆ 'ಸಂವಾದ'ದ ಮೂಲಕ ಉತ್ತರ ಪಡೆಯುವುದು ಟಿ.ಎ.ಯ ಮೊದಲ ಹಂತ.

ನಂತರ ಈ ವ್ಯಕ್ತಿ ಅಸಂಗತ ಭಾವನೆಗಳು, ಯೋಚನೆಗಳು,ಕಲ್ಪನೆಗಳು ಮತ್ತು ಸ್ವವಿನಾಶದ ಮಾರ್ಗ ಬಿಟ್ಟು ಪರಿಸರಕ್ಕೆ ಸರಿಯಾಗಿ ಪ್ರತಿಸ್ಪಂದಿಸಿ, ತಾನೂ ಸುಖಪಡೆದು, ಇತರರಿಗೂ ಹಿತಕಾರಿಯಾಗಿ ನಡೆದುಕೊಳ್ಳಲು ಇವನು ಬೇರೆ ಯಾವ ತರಹ ಇರಬೇಕು ಎಂದು ನಿರ್ಧರಿಸುವುದು ಎರಡನೇ ಹಂತ.



ಈ ನಿರ್ಧಾರವನ್ನು ಸಮಸ್ಯೆಯಿಂದ ಬಳಲುತ್ತಿರುವ ವ್ಯಕ್ತಿಯಿಂದ ಕಾರ್ಯಗತ ಮಾಡಿಸಲು ಥೆರಪಿಸ್ಟ್ ಅನೇಕ ಚಿಕಿತ್ಸಾ ತಂತ್ರಗಳನ್ನು ರೂಪಿಸಿಕೊಳ್ಳುತ್ತಾನೆ.



ತನ್ನ 'ಗುರಿ' ಸಾಧಿಸಲು 'ಸಂವಾದ' ಹಳಿತಪ್ಪದಂತೆ ನೋಡಿಕೊಳ್ಳುವುದು; ಸ್ವಲ್ಪ ಹಿಡಿತ ತಪ್ಪಿದಾಗ (ಮಾನಸಿಕ ಸಮಸ್ಯೆ ಇರುವ ವ್ಯಕ್ತಿಯ ನಕಾರಾತ್ಮಕ ಸಂವಾದ ಹಾಗೂ 'ಚಿತಾವಣೆ'ಯಿಂದ) ಅದನ್ನು 'ಮರಳಿ ಜಾಡಿಗೆ' ತರುವುದು ಸಹ ಥೆರಪಿಸ್ಟ್‌ನ ಕಾರ್ಯಕ್ಷಮತೆಯಡಿ ಬರುತ್ತದೆ.

'ಸಂವಾದ ತಂತ್ರ'ದಲ್ಲಿ ಸಮಸ್ಯೆ ಇರುವ ವ್ಯಕ್ತಿ ಯಾವ ಈಗೋ ಸ್ಟೇಟ್ ಬಳಸುತ್ತಿದ್ದ, ಅದಕ್ಕೆ ಉತ್ತರವಾಗಿ ಥೆರಪಿಸ್ಟ್ ಯಾವ ಈಗೋ ಸ್ಟೇಟ್ ಬಳಸುತ್ತಾನೆ. ಎನ್ನುವುದು ಕೂಡ ಮಹತ್ತ್ವದ ಅಂಶ. ಒಂದು ನಿರ್ದಿಷ್ಟ ಸಮಸ್ಯೆಯನ್ನು ಟಿ.ಎ. ಮೂಲಕ ಪರಿಹಾರ ಮಾಡಿಕೊಳ್ಳಬೇಕಾದರೆ ಸುಮಾರು 30-52 ಗಂಟೆಗಳ 'ಸಂವಾದ' ಥೆರಪಿ ಬೇಕಾಗುತ್ತದೆ.

ನಮ್ಮಲ್ಲಿ ನಿರಾಕಾರ 'ಮನಸ್ಸೆಂದು', ಯಾವುದೂ ಇಲ್ಲ. ಅಂದರೆ 'ಮನಸ್ಸಿಗೆ' ಎನ್ನುವುದರ ಬದಲು 'ನಾನು... (ಉದಾ: ನನ್ನ ಮನಸ್ಸಿಗೆ ನೋವಾಯಿತು, ಬದಲಾಗಿ ನಾನು ನೋವು ಪಟ್ಟೆ.) ಎಂದು ಮಾನಸಿಕ ಸಮಸ್ಯೆ ಇರುವಾತ ಹೇಳಲು ಪ್ರಾರಂಭಿಸಿದಾಗ ನಿರ್ದಿಷ್ಟ ಭಾವನೆ, ಯೋಚನೆ, ವರ್ತನೆಗಳನ್ನು ಗುರುತಿಸಿಕೊಳ್ಳಬಹುದು. ಮತ್ತು ಪ್ರತಿಯೊಂದನ್ನೂ ಹೇಗೆ ಮತ್ತು ಎಷ್ಟರವರೆಗೆ ಬದಲಾಯಿಸಬೇಕು ಎಂದು ನಿರ್ಧರಿಸಬಹುದು. ಶತಮಾನಗಳಿಂದ ಚಾಲ್ತಿಯಿರುವ 'ಮನಸ್ಸಿದ್ದರೆ ಮಾರ್ಗ'ಕ್ಕೆ ಬದಲಾಗಿ ಸಮಸ್ಯಾ ಪರಿಹಾರಕ್ಕಾಗಿ 'ಮನಸಿಲ್ಲದ ಮಾರ್ಗ' ತಂದದ್ದು ಟಿ.ಎ.ಯ ವೈಶಿಷ್ಟ್ಯ, ಬುಡ ಅಲುಗಾಡಿಸಿದ ಸಿದ್ಧಾಂತ. ಸಮಸ್ಯೆಯುಳ್ಳ ವ್ಯಕ್ತಿ, ಬದಲಾಗಲು ತಯಾರಿರಬೇಕು ಎಂಬುದು ಟಿ.ಎ.ಯ ಪ್ರಥಮ ಅವಶ್ಯಕತೆ.

ಮನುಷ್ಯನ ಜಿಜ್ಞಾಸೆಯ ವಸ್ತು, ಸಲಕರಣೆ ಎರಡೂ ಆಗಿರುವ 'ವರ್ತನಾ ವಿಜ್ಞಾನ' ಹೀಗೇ ವಿಸ್ಮಯಗಳನ್ನು ಒಂದೊಂದಾಗಿ ಅನಾವರಣ ಮಾಡುತ್ತಿದೆ. ನಾವ್ಯಾರೂ ಪ್ರಪಂಚವನ್ನು ಅದರ 'ಮೂಲ ಯಥಾವತ್ ಸ್ಥಿತಿ' (Territory)ಯಲ್ಲಿ ನೋಡೇ ಇಲ್ಲ, ನಮ್ಮ ಇಂದ್ರಿಯಗಳು ಗ್ರಹಿಸುವುದೇನಿದ್ದರೂ 'Map', ಹೊರ ಜಗತ್ತಿನ (Territory) ಗುರುತಷ್ಟೆ. 'Map' ಬದಲಾಯಿಸಿಕೊಳ್ಳಲು ಸಾಧ್ಯವಾದಲ್ಲಿ ಪ್ರಪಂಚವನ್ನು ಅದರ 'ಮೂಲ ಯಥಾವತ್' ಸ್ಥಿತಿಯಲ್ಲಿ ನೋಡಬಲ್ಲೆವು!

'ಅಪರಿಚಿತ ವಿಷಯದ ಮೇಲೆ ಅನಾಮಧೇಯ ಬರೆದ ಪುಸ್ತಕ' ಎಂದು ಬಣ್ಣಿಸಿಕೊಂಡೇ ಟಿ.ಎ. ಅನ್ನು 'ಮನಸ್ಸು ಇಲ್ಲದ ಮಾರ್ಗ' ಪುಸ್ತಕದ ಮೂಲಕ ಕನ್ನಡಿಗರಿಗೆ ಪರಿಚಯಿಸಿದ ಡಾ|| ಸುಬ್ರಹ್ಮಣ್ಯಂರ ಬರವಣಿಗೆಯ ತಾಜಾತನ, ಕೀಟಲೆ, ಲಘು ವೈನೋದಿಕ ಶೈಲಿ ಇಂದು ಈ ಅಪ್ಪಟ ಶಾಸ್ತ್ರೀಯ ಪುಸ್ತಕವನ್ನು ನಾಲ್ಕನೆ ಮುದ್ರಣ ಕಾಣುವಂತೆ ಮಾಡಿದೆ. ದೃಶ್ಯಮಾಧ್ಯಮದಲ್ಲಿ ಟಿ.ಎ. ಸಿದ್ಧಾಂತವನ್ನು ಜನರ ಮನಸ್ಸಿಗೆ ನಾಟುವಂತೆ ಕತೆಗಳಲ್ಲಿ ಹೆಣೆದು ಸಿದ್ಧಪಡಿಸಿದ್ದಾರೆ.

## ಆ್ಯಂಟಿ ಕ್ಲೈಮಾಕ್ಸ್

ಟಿ.ಎ. ಥೆರಪಿಸ್ಟರೆಲ್ಲ ಯಾವಾಗಲೂ, ಎಲ್ಲ ವರ್ತನೆಯನ್ನೂ ಪೇರೆಂಟ್, ಅಡಲ್ಟ್, ಚೈಲ್ಡ್ ಈಗೋ ಸ್ಟೇಟ್‌ಗಳೆಂದು ವರ್ಗೀಕರಿಸುತ್ತಾ ಅದರ ಗುಂಗಿನಲ್ಲಿಯೇ ಇರುತ್ತಾರೇನು?

ಡಾ|| ಸುಬ್ರಹ್ಮಣ್ಯಂ ಹೇಳುವಂತೆ, 'ಖಂಡಿತಾ ಇಲ್ಲ; ಸಮಸ್ಯೆ ತಲೆದೋರಿದಾಗ ಮಾತ್ರ ಈ ಎಲ್ಲ ಕಸರತ್ತು. ಉಳಿದಂತೆ, ನಾವೂ ಮಾಮೂಲಿ ಮನುಷ್ಯರೇ'. ಎರಿಕ್ ಬರ್ನ್ ಹೇಳುತ್ತಿದ್ದ: ಎಲ್ಲರ ತಲೆಯಲ್ಲಿ ಟಿ.ಎ. ತುಂಬಿದರೆ ಸಮುದ್ರದಂಡೆಯಲ್ಲಿ ಜನದಟ್ಟಣೆ ಹೆಚ್ಚಾಗುತ್ತೆ! (ಬಹುಶ: ಹುಚ್ಚರಾಗಿ, ಬಹುಶ: ಸಾಯಲು) ■





# ಸಾಲ್‌ಮಿಂಚು

ಸ್ಕೂಲು ಪುಸ್ತಕದೊಳಗಿಂದ ಹಾರಿಬಂದ ಬಣ್ಣದ ಗರಿ ಇಲ್ಲಿ ರಸ್ತೆಯಲ್ಲೀಗ ಬಿಕರಿಗಿವೆ. **ಶಶಿ ಸಂಪಳ್ಳಿ**

ಮಗು ಮುಗಿಯಿತೆ ನಿದ್ದೆ? ಸಣ್ಣ ಕಾಲ್ಗೆಜ್ಜೆಯಿಂಪಿಗೆ ಇನ್ನು ಸೊಂಪಾಗಿ ಚಲಿಸುತ್ತದೆ ಕಾಲ.
**ಎಚ್.ಆರ್. ಸುಜಾತ**

'ಎರಡು ನದಿಗಳು ಒಂದೆಡೆ ಕೂಡಿಯೇ ಕೂಡುತ್ತವೆ' ಎಂಬ ಜಂಬವಿತ್ತು. ಆದರೆ, ಕಡಲಿನ ಮುಂದಿದ್ದೆ.
**ಲತಾ ಮೈಸೂರು**

ಹಗಲಿನಲ್ಲಿ ಚಂದಿರನನ್ನು ಹುಡುಕಿ ಕಳೆಂಗುಂದಿದ ನನ್ನಕ್ಕ ಮತ್ತು ಅವಳ ಗೆಳತಿಯರು, ರಾತ್ರಿ ಚಂದಿರ ಮೂಡಿ ಬಂದರೂ, ಪಾಪ ಹೊರ ಬರಲಾರರು. **ಗಣೇಶ ಪಿ. ನಾಡೋರ**

ನಿನಗೆ ಗೊತ್ತೆ ಬಾಪೂ, ಮೊನ್ನೆ ಮೊನ್ನೆ ವೃತ್ತದ ಸುತ್ತ ಗಸ್ತು ಹಾಕುತ್ತಿದ್ದ
ಬಿಡಾಡಿ ಹುಡುಗನೊಬ್ಬ ನಿನ್ನ ಕನ್ನಡಕ ಕದ್ದಿದ್ದಾನೆ. **ಸುನೀತಾ ಶೆಟ್ಟಿ**

ನಮ್ಮ ಕಪಿಲೆ ತನ್ನ ಮುದ್ದಿನ ಕರು ಸತ್ತದ್ದರಿಂದ ಹುಲ್ಲು, ನೀರು ಬಿಟ್ಟಿತ್ತು. ಆವತ್ತು ಇದ್ದ ಆರ್ಕೆಸ್ಟ್ರಾದಲ್ಲಿ ಗೋವಿನ ಹಾಡು ಹಾಡಿದೆ ಕೆಲವರ ಕಣ್ಣಲ್ಲಿ ನೀರಾಡಿತು. ಚಂದ್ರಮುಖಿ ಪ್ರಾಣಸಖಿ ಹಾಡುವ ಹೊತ್ತಿಗೆ ಸಭೆ ಖಾಲಿಯಾಯಿತು. **ಡಿ.ಆರ್ ಚಂದ್ರ ಮಾಗಡಿ**

ದೇವರೆ ಒಂದೇ ಒಂದು ಸಾರಿ ಬಸಿರಾಗು ಆಮೇಲೆ ಹೇಳು ಹೆತ್ತ ನೋವು. ಪ್ಲೀಸ್ ದೇವಾ,
ಒಮ್ಮೆ ಬಸಿರಾಗು **ಸುನೀಲಕುಮಾರ ಸುಧಾಕರ**

ಇದೇ ಇದೇ ರಸ್ತೆಯ ಮೇಲೆ ಬಣ್ಣ ಬಣ್ಣದ ಪಾತರಗಿತ್ತಿ ವಾಹನಗಳ ಹೊಡೆತಕ್ಕೆ ಹೊಸೆದು ಹೋದದ್ದು.
**ಗಣೇಶ ಪಿ. ನಾಡೋರ**

ಎಚ್ಚರವೇ, ನಿನ್ನ ವಿಳಾಸಕ್ಕೆ ಸ್ವಪ್ನಗಳು ಬರುವುದಿಲ್ಲ.
**ವೆಂಕಟ್ರಮಣ ಗೌಡ**



# “ಮುಯ್ಯಿಗಿ ಮುಯ್ಯಿ”

ಪದ್ದಕ್ಕ ಮತ್ತು ತಿಮ್ಮರಾಯಿ ಅಂತ ಇಬ್ರು ಗಂಡ ಹೆಣ್ತಿ ಇರ್‍ತಾರ. ಒಂದು ಸಲ ತಿಮ್ಮರಾಯಿಗೆ ಹೋಳಿಗ ಉಣ್ಣೋ ಆಸೆಯಾಗ್ತದೆ. ಅದಕ್ಕಾಗಿ ಹೆಣ್ತನ ಕರೆದು, ‘ಎನೆ, ಎನೆ ನನಗೆ ಹೋಳಿಗಿ ಉಣ್ಣಾಂಗಾಗೇತಿ. ಹ್ಯಾಂಗರ ಮಾಡಿ ನೀನು ಇವತ್ತು ಹೋಳಿಗಿ ಮಾಡ್ಬೇಕು ಅಂತಾನೆ.’ ಅಲ್ಲಾ, ಮನ್ಯಾಗ ನೋಡಿದ್ರ, ಒಂದು ಸೆರಿ ಬ್ಯಾಳಿಲ್ಲ ಒಂದ್ ಪಾವು ಬೆಲ್ಲಿಲ್ಲ, ಬ್ಯಾಳಿ, ಬೆಲ್ಲ, ಮೈದಾಹಿಟ್ಟು, ಎಣ್ಣೆ, ಎಲ್ಲಾ ತಂದಿಡು, ಹೋಳಿಗಿ ಮಾಡೋದೆಷ್ಟು ಅಂತಾಳೆ ಪದ್ದಕ್ಕ.

ತಿಮ್ಮರಾಯಿ ಮನೆನೆಲ್ಲಾ ಶೋಧಿಸ್ತಾನ, ಏನೂ ಸಿಗೋದಿಲ್ಲ. ತನ್ನ ಒಕಣ (ಜೇಬು)ದಾಕ ಕೈಯಾಕಿ ನೋಡ್ತಾನ, ಒಂದು ಪೈಸೆ ರೊಕ್ಕ (ದುಡ್ಡು) ಇರಲ್ಲ. ಹೆಂಗಪ್ಪ ಮಾಡೋದು ಅಂತ ಸ್ವಲ್ಪತ್ತು ಯೋಚಿಸಿ, ಒಂದು ಯೋಜನೆ ಹುಡುಕ್ತಾನ. ತಿಮ್ಮರಾಯಿ, ತನ್ನ ಮುಕುಳಿಗೆ ಡಾಂಬರು ಹಚ್ಚಿಗೊಂಡು, ಕೊಟ್ರ ಶೆಟ್ಟಿ ಕಿರಾಣಿ ಅಂಗಡಿಗೆ ಹೋಗ್ತಾನ. ಶೆಟ್ರು, ಬ್ಯಾಳಿ ಚೀಲ, ಬೆಲ್ಲದ ಚೀಲ, ಮೈದಾಹಿಟ್ಟಿನ ಚೀಲಗಳನ್ನು ತೆರೆದಿಟ್ಟಿರುತ್ತಾರೆ. ತಿಮ್ಮರಾಯಿ, ಬ್ಯಾಳಿ ಚೀಲದತ್ತ ಹೋಗಿ, ಶೆಟ್ರೆ ಬ್ಯಾಳಿ ಹೆಂಗ ಕೇಜಿ ಅಂತಾನೇ ಬ್ಯಾಳಿ ಚೀಲದ ಮ್ಯಾಲೆ ಕೂಡ್ರುತಾನೆ. ಮನೆಗ ಬಂದು, ಹೆಣ್ತನ ಕರೆದು, ಹಸನಮಾಡೋ ಮೊರ ತರಿಸಿ, ಡಾಂಬರಿಗತ್ತಿದ ಬ್ಯಾಳಿ ಕೊಡವುತಾನೆ. ಬೆಲ್ಲ, ಮೈದಾಹಿಟ್ಟು ಇದೇ ತರ ಮಾಡಿ ತರ್‍ತಾನೆ. ಎಣ್ಣೆ ತರಬೇಕಲ್ಲ, ಮತ್ತೆ ಶೆಟ್ರಂಗಡಿಗ ಹೋಗಿ ಎಣ್ಣೆ ಡಬ್ಬದತ್ರ ನಿಂತುಕೊಂಡು, ಶೆಟ್ರೆ ಎಣ್ಣೆ ಹ್ಯಾಂಗ ಕೇಜಿ ಅಂದು ಟವಲ್ಲನ್ನು ಎಣ್ಣೆ ಡಬ್ಬದಾಕ ಕೆಡವುತಾನ. ಶೆಟ್ರು, ಮೊದ್ಲು ಟವಲ್ಲು ಹಿಂಡು ಅಂತಾರೆ. ತಿಮ್ಮರಾಯಿ ಟವಲ್ಲನ್ನು ಹಿಂಡಿದಂಗ ಮಾಡಿ ಮನೆಗೆ ಬರ್‍ತಾನೆ. ‘ಎನೆ, ಎನೆ ಎಣ್ಣೆ ಡಬ್ಬ ತಗಂಬಾ’ ಅಂತಾನೆ. ಟವಲ್ಲಿನಲ್ಲಿರೋ ಎಣ್ಣೆನೆಲ್ಲಾ ಹಿಂಡಿ, ಹೋಳಿಗಿ ಮಾಡು, ನಾನು ಸ್ವಲ್ಪ ಹೊಲದ ಕಡೆಗೆ ಹೋಗಿ ಬರ್‍ತೀನಿ ‘ಅಂತೇಳಿ, ತಿಮ್ಮರಾಯಿ ಹೊಲಕ್ಕೆ ಹೋಗ್ತಾನೆ.

ಪದ್ದಕ್ಕ ಖುಷಿಯಿಂದ ಹೋಳಿಗಿ ಕರಿಯೋ ಹೆಂಚನ್ನು, ಹೋಳಿಗಿ ತೀಡೋ ಲತ್ತುಡಿಯನ್ನು ತೊಳೆದು, ಒಣೆಲ್ಲಾ ಘಮ್ಮನ್ನಂಗ ಹೋಳಿಗಿ ಮಾಡ್ತಾಳ. ಅವು ಮೂರೇ ಮೂರು ಹೋಳಿಗಾಗ್ತಾವು. ಪದ್ದಕ್ಕನ ಬಾಯಾಗ ನೀರು ಒಂದೇ ಸಲಕ್ಕೆ ಸುರಿತಿರ್‍ತಾವು. ಬೆಂದೈತೋ, ಬೆಂದಿಲ್ಲೋ ಅಂತ ಒಂದು ಹೋಳಿಗಿ ತಿಂತಾಳ. ಅಷ್ಟಕ್ಕ ಸಾಕಾಗಲ್ಲ, ಸಿಹಿ ಐತೋ, ಸಿಹಿ ಇಲ್ಲೋ ಅಂತ ಎರಡು ಹೋಳಿಗಿ ತಿಂತಾಳ. ನನ್ನ ಪಾಲಿನ ಹೋಳಿಗಿ ನಾಯಾಕ ಬಿಡಬೇಕು ಅಂತೇಳಿ ಮೂರೂ ಹೋಳಿಗಿ ತಿಂದು ಮುಗುಸ್ತಾಳ.

ಗಂಡ ತಿಮ್ಮರಾಯಿ ಬಾಯಾಗ ಜೊಲ್ಲು ಸುರಿಸ್ಕೊಂತ ಮನೆಗೆ ಬರ್‍ತಾನೆ. ಹೋಳಿಗಿ ವಾಸನೆ ಘಂ

ಎಂದು ಮೂಗಿಗೆ ತಾಗಿದಾಗಂತೂ, ಬಾಯಲ್ಲಿನ ನೀರು ಇನ್ನೂ ಜಾಸ್ತಿಯಾಗುತ್ತದೆ. ಹೆಣ್ತಿ, ಒಳಗೆ, ಹೋಳಿಗೆನೆಲ್ಲಾ ತಿಂದು ಗೊರಕೆ ಹೊಡೆಯುತ್ತಾ ಮಲಗಿರುತ್ತಾಳೆ. ತಿಮ್ಮರಾಯಿ, 'ಎನೆ ಎನೆ ನೀರು ಕೊಡು' ಅಂತಾನೆ. ಪದ್ದಕ್ಕ ಏಳುವುದಿಲ್ಲ. ತಿಮ್ಮರಾಯಿಗೆ ತಡಕ್ಕೊಳ್ಳೋದಾಗುವಲ್ದು. ಹೋಳಿಗಿ ಉಣ್ಣಬೇಕು ಅಂತ ಬಾಯಿ ಚಪ್ಪರಸ್ತಾ ಇದ್ದಾನೆ. ಜೋರಾಗಿ ಕೂಗ್ತಾನೆ. ಪದ್ದಕ್ಕ ದಡಗ್, ಬಡಗ್ ಎದ್ದು, ನಡುಗಿಕೊಂತ ನೀರು ಕೊಡ್ತಾಳೆ. ತಿಮ್ಮರಾಯಿ ಕೈಕಾಲು ಮಕ ತೊಳಕೊಂಡ ಬಂದು ಊಟಕ್ಕೆ ಕೂಡ್ರುತಾನೆ. ಎಲ್ಲೆ ಹೋಳಿಗಿ, ಗಡಗಡ ತಗಂಬಾ, ಹೊಟ್ಟೆ ಬಾಳ ಹಸದೈತಿ ಅಂತಾನೆ. ಎಲ್ಲಿಂದ ತರ್ತಾಳೆ? ಪದ್ದಕ್ಕ ನಡುಗುತ್ತಾ, ಮೂರೇ ಮೂರು ಹೋಳಿಗಿ ಆಗಿದ್ವು, ತಿಂದುಬಿಟ್ಟೆ ಅಂತ ಅಂದ ಕೂಡ್ಲೆ, ತಿಮ್ಮರಾಯಿಗೆ ಕೋಪ ನೆತ್ತಿಗೇರಿ ದೆಬದೆಬ ಅಂತ ಪದ್ದಕ್ಕನ ಬೆನ್ನಿಗೆ ಬಾರಸ್ತಾನೆ. ಪದ್ದಕ್ಕ ಅತ್ತಗೊಂತ ಸಕ್ರಗೌಡ್ರತ್ರ ಹೋಗ್ತಾಳ. ತಿಮ್ಮರಾಯೀನೂ ಹೆಣ್ತಿ ಹಿಂದೇನೆ ಹೋಗ್ತಾನೆ, ಏನವ್ವ ಪದ್ದಕ್ಕ, ಯಾಕ ಅಳಾಕಚ್ಚಿ ಅಂತಾರೆ ಗೌಡ್ರು. ಏನು ನಡೀತು ಹೇಳವ್ವ ಅಂದಿದ್ದಕ್ಕೆ,

'ಗೌಡ್ರೇ ಹೋಳಿಗಿ ಮಾಡು ಅಂತ ಹೇಳಿ, ಎಲ್ಲಾ ಸಾಮಾನಾನು ತಂದಿಟ್ಟು ಹೊಲಕ್ಕೋಗಿದ್ದ. ನಾನು ಹೋಳಿಗಿ ಮಾಡ್ದೇ, ಅವು ಮೂರೇ ಮೂರು ಆದ್ವು. ಬೆಂದೈತೋ ಬೆಂದಿಲ್ಲೋ ಅಂತ ಒಂದು ಹೋಳಿಗಿ ತಿಂದೆ. ಸಿಹಿ ಐತೋ ಸಿಹಿ ಇಲ್ಲೋ ಅಂತ ಎರಡೋಳಿಗಿ ತಿಂದೆ. ನನ್ನ ಪಾಲಿನ ಹೋಳಿಗಿ ನಾಯಾಕ ಬಿಡಬೇಕು ಅಂತ ಮೂರೂ ಹೋಳಿಗಿ ತಿಂದು ಮುಗಿಸಿದೆ' ಅಂತಾಳೆ.

ಗೌಡ್ರು ತಿಮ್ಮರಾಯಿಗೆ ಕೇಳ್ತಾರೆ, ಅಲ್ಲಲೇ ಇಷ್ಟಕೆ ಹೆಣ್ತನ ಹೊಡದರ್‍ಯಾಂಗಲೇ ಅಂತ. ಅದಕ್ಕೆ ತಿಮ್ಮರಾಯಿ, 'ಗೌಡ್ರೇ, ಅಳ್ತಾಳೋ ಅಳೋದಿಲ್ಲೋ ಅಂತ ಒಂದೇಟು ಹೊಡೆದೆ. ಗಟ್ಟಿ ಅದಾಳೋ ಇಲ್ಲ ಟೊಳ್ಳು ಅದಾಳೋ ಅಂತ ಎರಡೇಟು ಹೊಡೆದೆ. ನನ್ನ ಹೆಣ್ತಿ, ನಾಯಾಕ ಹೊಡಿಬಾರ್ದು? ಅಂತ ಮೂರೇಮೂರು ಏಟು ಹೊಡಿದೀನಿ. ಇಷ್ಟಕೆ ಅತ್ತಗೊಂತ ನಿಮ್ಮತ್ರ ಬಂದಾಳ,' ಅಂತಾನೆ. ಗೌಡ್ರು ನಗುತ್ತಾ, ಇಬ್ರುದು ಸರಿ ಐತಿ ಮುಯ್ಯಿಗಿ ಮುಯ್ಯಿ, ಸರಿಯಾಗೈತಿ ಮನೆಗೆ ನಡ್ರಿ ಅಂತ ಕಳಸ್ತಾರೆ. ಪದ್ದಕ್ಕ ಮತ್ತು ತಿಮ್ಮರಾಯಿ ಒಬ್ಬರಿನ್ನೊಬ್ಬರ ಮಕ ನೋಡಿಕೊಂತ ಮನಿಗೆ ಬರ್ತಾರ.



□ **ಎಚ್.ಆರ್. ಗೋಣಿಬಸವರಾಜ್ ಬಳ್ಳಾರಿ**

(ಪ್ರೈಮರಿಸ್ಕೂಲ್ ಓದುತ್ತಿದ್ದಾಗ ಮಾಸ್ತರು ಹೇಳಿದ ಕತೆ.)



# ಅಭಿವ್ಯಕ್ತಿ

ನಗುನಗುತ್ತಾ ಬಾಗಿಲು ತೆರೆದ ನಾಯಕಿಯ ನಗೆ, ಪತಿಯ ಉರಿಗೋಪ ನೋಡುತ್ತಿದ್ದಂ ಮಾಸುತ್ತದೆ. ನಾಯಕನಿಂದ ಎಡೆಬಿಡದೇ ಹರಿಯುವ ನಿಂದಾವಾಕ್ಯಗಳಿಂದ, ನಾಯಕಿಯ ಬಾಳಿ ಪ್ರತಿಕ್ಷಣವೂ ನರಕವಾಗುತ್ತದೆ. ಬಾಯ್ಮುಚ್ಚಿ, ಕಣ್ಣೀರು ತುಂಬಿಕೊಂಡೇ ಪತಿ ಸೇವೆ ಮಾಡುತ್ತಾ ನಾಯಕಿ.

ನಾಯಕನ ತಮ್ಮ ಊರಿಗೆ ಬರುತ್ತಾನೆ. ಅತ್ತಿಗೆಯ ಸ್ಥಿತಿಗೆ ಮರುಗುತ್ತಾನೆ. ಮದುವೆಯಾದ ನಾಲ ತಿಂಗಳಿಗೇ ಈ ವೈಪರೀತ್ಯ!

ಮನಶ್ಶಾಸ್ತ್ರ ಓದುತ್ತಿರುವ ನಾಯಕನ ತಮ್ಮ, ತನ್ನಣ್ಣನ ಈ ವರ್ತನೆಯ ಮೂಲ ಹುಡುಕು ಕುತೂಹಲದಿಂದ ಅಣ್ಣನನ್ನು ಹಿಂಬಾಲಿಸುತ್ತಾನೆ. ಅದೊಂದು ಸಣ್ಣ ಅಂಗಡಿ. ಅಲ್ಲಿ ಕೆಲಸಕ್ಕಿದ್ದಾ ನಾಯಕ. ಅಂಗಡಿಯ ಮಾಲೀಕ ಬಾಯ್ತೆರೆದರೆ ಬರೀ ಕೆಟ್ಟ ಮಾತುಗಳೇ. ಬೆಳಗ್ಗೆ ಒಂಬತ್ತಕ್ಕೆ ಅಂಗ ಬಾಗಿಲು ತೆರೆದಾಗ ಮಾಲೀಕನ ಬಾಯಿಂದ ಉದುರಲಾರಂಭಿಸುವ ಮುಕ್ತಾಫಲಗಳು, ರಾತ್ರಿ ಏಳ ಅಂಗಡಿ ಮುಚ್ಚುವವರೆಗೂ ಉದುರುತ್ತಲೇ ಇರುತ್ತವೆ. ಅಂಗಡಿಯ ಬಾಗಿಲು ಭದ್ರ ಪಡಿಸಿ, ಬೀ ಹಾಕಿ, ಮಾಲೀಕನ ಕೈಗೆ ಬೀಗದ ಕೈ ಇತ್ತು ಮನೆಗೆ ಬರುತ್ತಾನೆ ನಾಯಕ.

ನಗುನಗುತ್ತಾ ಬಾಗಿಲು ತೆರೆದ ನಾಯಕಿಯ ನಗೆ, ಪತಿಯ ಉರಿಗೋಪ ನೋಡುತ್ತಿದ್ದ ಹಾಗೆ ಮಾಯವಾಗುತ್ತದೆ. ಅಣ್ಣನ ವೃತ್ತಿಯಲ್ಲಿನ ಕಷ್ಟ, ಅತ್ತಿಗೆಯ ಮೇಲೆ ಈ ರೀತಿಯ ಕೆಟ್ಟ ಪರಿಣಾ ಬೀರುತ್ತಿದೆಯೆಂದರಿತು ತಮ್ಮ ನೊಂದುಕೊಳ್ಳುತ್ತಾನೆ. ಒಂದು ವಾರದ ನಂತರ ಅಲ್ಲಿಂ ಹೊರಟುಹೋಗುತ್ತಾನೆ ತಮ್ಮ.

ನಾಲ್ಕು ತಿಂಗಳ ನಂತರ ಅಣ್ಣನ ಮನೆಗೆ ತಮ್ಮ ಬರುತ್ತಾನೆ. ನಗುನಗುತ್ತಾ ಸ್ವಾಗತಿಸುತ್ತಾಳೆ ಅವ ಅತ್ತಿಗೆ. ಸಂಜೆಯಾಗಿರುತ್ತದೆ. ಅಣ್ಣ ಮನೆಗೆ ಬರುವ ಸಮಯವಾಗಿರುತ್ತದೆ. ಇನ್ನು ಅತ್ತಿಗೆಯ ಗೋ ನೋಡಲು ಮಾನಸಿಕವಾಗಿ ಸಿದ್ಧನಾಗುತ್ತಾನೆ ನಾಯಕನ ತಮ್ಮ.



ಬಾಗಿಲ ಸದ್ದಾಗುತ್ತದೆ. ನಗುನಗುತ್ತಾ ಬಾಗಿಲು ತೆರೆಯುತ್ತಾಳೆ ನಾಯಕಿ. ತನ್ನಣ್ಣ ನಗುತ್ತಾ ಒಳಬಂದಿದ್ದು ತಮ್ಮನಿಗೆ ಅಚ್ಚರಿ ತರುತ್ತದೆ. ಅಣ್ಣ, ಅತ್ತಿಗೆಯ ಕೈಗೆ ಹೂವಿನ ಪೊಟ್ಟಣ, ಸಿಹಿಡಬ್ಬಾ ನೀಡಿದಾಗ ತಮ್ಮನ ಆಶ್ಚರ್ಯ ದ್ವಿಗುಣಗೊಳ್ಳುತ್ತದೆ.

'ಓಹೋ, ಅಣ್ಣ ಬದಲಾಗಿದ್ದಾನೆ, ಎಂದರೆ ಕೆಲಸ ಬದಲಿಸಿರಬೇಕು. ಇಷ್ಟು ಬೇಗ ಅಣ್ಣ ಅಷ್ಟೊಂದು ಬದಲಾಗುವುದು ಸಾಧ್ಯವಿಲ್ಲ' ಎಂದುಕೊಳ್ಳುತ್ತಾನೆ. ಕುತೂಹಲ ಹತ್ತಿಕ್ಕಲಾರದೇ ಮರುದಿನ ಅಣ್ಣನನ್ನು ಹಿಂಬಾಲಿಸುತ್ತಾನೆ. ಅಣ್ಣ ಅಂದೇ ಅಂಗಡಿಗೆ ಹೋಗುತ್ತಾನೆ. ಮಾಲೀಕ ಬದಲಾಗಿರಬೇಕೆಂದುಕೊಳ್ಳುತ್ತಾನೆ. ಆದರೆ ಅದೇ ಮಾಲೀಕ! ಅದೇ ಬೈಗುಳಗಳ ಸರಮಾಲೆ! ಸಂಜೆಯವರೆಗೂ ಅಣ್ಣ ಬೈಯಿಸಿಕೊಳ್ಳುವುದು ತಮ್ಮನಿಗೆ ವ್ಯಥೆ ತರುತ್ತದೆ. ಸಂಜೆ ಬೀಗ ಹಾಕಿ, ಮಾಲೀಕನಿಗೆ ಬೀಗದ ಕೈ ನೀಡಿ ಹೊರಡುತ್ತಾನೆ ಅಣ್ಣ. ತಮ್ಮ ಅಣ್ಣನನ್ನು ಹಿಂಬಾಲಿಸುತ್ತಾನೆ.

ವಿಚಿತ್ರವೆಂದರೆ, ಅಣ್ಣ ಮನೆದಾರಿ ಹಿಡಿಯದೇ, ಊರ ಹೊರಗಿನ ಗುಡ್ಡದತ್ತ ಹೋಗುತ್ತಾನೆ. ಅತ್ತಿತ್ತ ಕದ್ದು ನೋಡಿ, ಗುಡ್ಡದ ಹಿಂಭಾಗ ತಲುಪುತ್ತಾನೆ. ತಮ್ಮ ಮರೆಯಲ್ಲಿ ನಿಂತು, ಅಣ್ಣ ಏನು ಮಾಡುವನೆಂದು ನೋಡುತ್ತಾನೆ.

ಅಣ್ಣ ತನ್ನ ಹೆಗಲ ಮೇಲಿದ್ದ ಚೀಲದಿಂದ ಒಂದು ಭಾವಚಿತ್ರ ತೆಗೆಯುತ್ತಾನೆ. ಅದನ್ನು ಗುಡ್ಡದ ಚಪ್ಪಟೆ ಕಲ್ಲಿನ ಮೇಲೆ ಇಡುತ್ತಾನೆ. ಚೀಲದಿಂದಲೇ ಹಳೆಯ ಚಪ್ಪಲಿಗಳ ಹಾರ ತೆಗೆದು, ಆ ಚಿತ್ರಕ್ಕೆ ಹಾಕುತ್ತಾನೆ.

ತಮ್ಮನಿಗೆ ಆ ಚಿತ್ರ, ಅಣ್ಣನ ಅಂಗಡಿಯ ಮಾಲೀಕನದೆಂದು ತಿಳಿಯುತ್ತದೆ. ಅಣ್ಣ ಆ ಚಿತ್ರವನ್ನೇ ದಿಟ್ಟಿಸುತ್ತಾ ಬೈಯತೊಡಗುತ್ತಾನೆ. ಆ ಬೈಗುಳಗಳೆಲ್ಲಾ ಆ ದಿನ ತನ್ನಣ್ಣ ಪಡೆದ ಮೂದಲಿಕೆಗಳೆಂದು ಅರ್ಥವಾಗುತ್ತದೆ ತಮ್ಮನಿಗೆ. ಹದಿನೈದು ನಿಮಿಷಗಳ ನಂತರ ಮಾತು ನಿಲ್ಲಿಸಿ, ಸುಸ್ತಾಗಿ ನಿಲ್ಲುತ್ತಾನೆ ಅಣ್ಣ. ಒಮ್ಮೆ ನಿಡಿದಾದ ನಿಟ್ಟುಸಿರಿಟ್ಟು ಚಪ್ಪಲಿ ಹಾರವನ್ನೂ, ಮಾಲೀಕನ ಚಿತ್ರವನ್ನೂ ಚೀಲದಲ್ಲಿರಿಸಿಕೊಂಡು ಅಲ್ಲಿಂದ ಹೊರಡುತ್ತಾನೆ.

ದಾರಿಯಲ್ಲಿ ಹೂವು, ಸಿಹಿ ಕೊಂಡು ಮನೆಗೆ ಬರುತ್ತಾನೆ.



☐ **ಯತಿರಾಜ್ ವೀರಾಂಬುಧಿ**

(ಹಲವಾರು ವರ್ಷಗಳ ಹಿಂದೆ ದೂರದರ್ಶನದಲ್ಲಿ ನೋಡಿದ 'ಏಕ್ ಕಹಾನಿ' ಸರಣಿಯ ಗುಜರಾತಿ ಕಥೆ.)

ಶಬ್ದ ತೀರ



# ಚಪ್ಪಾಳೆ ಚಪ್ಪಾಳೆ ಚಪ್ಪಾಳೆ

ಹತ್ತಾರು ವರ್ಷಗಳ ಹಿಂದಿನ ಮಾತು. ಖಾಲಿಸ್ತಾನ್ ಚಳವಳಿಯ ಬಿಸಿಯ ದಿನಗಳು. ಮುಂಬಯಿಯಲ್ಲಿ ನಾನು ಕೆಲಸ ಮಾಡುತ್ತಿದ್ದ ಕಾರ್ಖಾನೆಯ ಹಿಂಬದಿಗೆ ಗರಾಜು, ವಾಹನಗಳ ಬಿಡಿಭಾಗಗಳ ಅಂಗಡಿಗಳೆಲ್ಲ ಇದ್ದ ಜನವಸತಿ ಇತ್ತು. ಅಲ್ಲಿ ಸಿಖ್ ಜನಗಳದ್ದೇ ವಾಸ್ತವ್ಯ ಹೆಚ್ಚಿಗಿತ್ತು. ಊಟದ ಬಿಡುವಿನಲ್ಲಿ ಒಂದು ದಿನ, ಹಠಾತ್ತನೆ ನಮ್ಮ ಕಾರ್ಖಾನೆಯ ಜನರೆಲ್ಲ ಕಾಂಪೌಂಡಿನ ಹಿಂಭಾಗದ ಬಾಗಿಲ ಕಡೆ ಓಡುತ್ತಿರುವುದು ಕಂಡಿತು. ಅವರೆಲ್ಲ ಗೋಡೆಯ ಒಳಗಿನಿಂದಲೇ ನಿಶ್ಶಬ್ದವಾಗಿ ನಿಂತು, ಹೊರಗೆ ನಡೆಯುತ್ತಿರುವುದೇನನ್ನೋ ನೋಡುತ್ತಿರುವಂತೆ ತೋರಿತು. ನಾವು ಒಂದಿಬ್ಬರು ಗೆಳೆಯರೂ ಕುತೂಹಲ ತಾಳಲಾರದೆ ಓಡಿ ಅವರನ್ನು ಸೇರಿಕೊಂಡೆವು.

ಹೊರಗೆ ರಸ್ತೆಯಲ್ಲಿಯೂ ಜನಗಳು ನಿಂತು ಗರಾಜುಗಳ ಹಿಂದೆ ಇರುವ ದಿಬ್ಬದ ಮೇಲಿದ್ದ ತಗಡಿನ ಶೆಡ್ಡಿನೆಡೆಗೆ ನೋಡುತ್ತಿದ್ದರು. ರಸ್ತೆಯಲ್ಲಿ ಈ ಕಡೆಯಿಂದ ನಾಲ್ಕಾರು ಪೊಲೀಸರು ಬಂದೂಕನ್ನು ಕಣ್ಣಿಗೊತ್ತಿಕೊಂಡು ಆ ಶೆಡ್ಡಿನತ್ತಲೇ ಗುರಿಹಿಡಿದು ನಿಂತಿದ್ದರು. ''ಖಾಲಿಸ್ತಾನೀ ಪರ ಕರಪತ್ರ ಹಂಚುವ ನಾಲ್ಕಾರು ಜನ ಉಗ್ರಗಾಮಿಗಳು ಇಲ್ಲಿಯೇ ತಳ ಊರಿದ್ದಾರಂತೆ. ಇಬ್ಬರು ಈಗ ಆ ಶೆಡ್ಡಿನಲ್ಲಿ ಇದ್ದಾರೆ. ಕಳೆದ ಒಂದು ಗಂಟೆಯಿಂದ ಪೊಲೀಸರು ಮೈಕಿನಲ್ಲಿ ಅವರನ್ನು ಹೊರಬರುವಂತೆ ಎಚ್ಚರಿಸುತ್ತಿದ್ದಾರೆ. ಇನ್ನೆರಡು ನಿಮಿಷಗಳಲ್ಲಿ ಬರದಿದ್ದರೆ, ಶೂಟಿಂಗ್ ಶುರುಮಾಡುತ್ತಾರೆ'' ಎಂದು ಪಕ್ಕದಲ್ಲಿದ್ದವ ಸನ್ನಿವೇಶವನ್ನು ತಿಳಿಸಿದ.

ಅವನು 'ಶೂಟಿಂಗ್' ಅಂದಿದ್ದು 'ಗುಂಡಿಕ್ಕುವುದು' ಎಂಬುದು ತಕ್ಷಣಕ್ಕೆ ಹೊಳೆಯಲಿಲ್ಲ. ಪಕ್ಕಾ ಹಿಂದೀ ಸಿನೆಮಾದ ಹದಿನೈದನೇ ರೀಲಿನಂತಿದ್ದ ಈ ಸನ್ನಿವೇಶದ 'ಶೂಟಿಂಗ್' ನಡೆಯುತ್ತಿರಬಹುದೇ ಎಂಬ ಭಾಸವನ್ನು ಸುಳ್ಳಾಗಿಸುವಂತೆ, ಮತ್ತೊಮ್ಮೆ ಪೊಲೀಸರು ತಮ್ಮ ಕೈ ಮೈಕಿನಲ್ಲಿ ಕೂಗಿದರು, ''ಹತ್ತರ ತನಕ ಎಣಿಸುತ್ತೇವೆ. ಬರದಿದ್ದರೆ, ಫೈರಿಂಗ್ ಶುರುಮಾಡುತ್ತೇವೆ'' ಮತ್ತು ಎಣಿಸಲು ಆರಂಭಿಸಿದರು.. ಏಕ್.. ದೋ.. ತೀನ್..

ಜನ ಇದ್ದಲ್ಲೇ ಹುರಿಗೊಳ್ಳತೊಡಗಿದರು. ಈಗಾಗಲೇ ಅಲ್ಲಿ ನೆಲೆಸಿದ್ದ ನಿಶ್ಶಬ್ದ ಈಗ ಇನ್ನೂ ಕರ್ಕಶವಾಗತೊಡಗಿತು. ಚಾರ್.. ಪಾಂಚ್.. ಛೇ.. ದನಿಗಳು ಎಲ್ಲಿಂದಲೋ ಗುಡ್ಡದಾಚೆಯಿಂದ ಬಂದಂತೆ ಅನಿಸುತ್ತಿತ್ತು. ಸಂದಣಿಯ ತಲ್ಲಣ ಯಾವ ಥರದ್ದು? ಹತ್ತರ ಎಣಿಕೆ ಮುಗಿದು ಫೈರಿಂಗ್ ಶುರುವಾಗಲಿ ಎಂದೆ? ಅಥವಾ ಎಣಿಕೆ ಮುಗಿಯುವುದರೊಳಗೇ ಅಲ್ಲಿನ ಆ ನತದೃಷ್ಟ ಅಪರಿಚಿತ ಎರಡೂ ಕೈ ಮೇಲೆತ್ತಿ ಮರೆಯಿಂದ ಹೊರಬರಲಿ ಎಂದೆ?.. ದಸ್..

ಕನಸಿನಂತೆ ಢಂ ಎಂದವು ಎರಡು ಕೋವಿ. ತಗಡಿನ ಆ ಶೆಡ್ಡಿನಲ್ಲಿ ಧೂಳು ಹಾರಿತು. ಶಬ್ದ ಬರೇ ದೀಪಾವಳಿಯ ಬಿಡಿ ಪಟಾಕಿಯಂತಿತ್ತು! ಅದರಲ್ಲಿ ಪ್ರತಿಧ್ವನಿಯ ರಿಂಗಣಗಳಿರಲಿಲ್ಲ. ಅಷ್ಟರಲ್ಲಿ, ''ಓ ದೇಖೋ'' ಎಂದೊಬ್ಬ ಕೂಗಿದ ಮತ್ತು ಕೈಯೆತ್ತಿ ತೋರಿಸಿದ. ದೂರದ ಶೆಡ್ಡಿನ ಹಿಂದಿನಿಂದ ಗೇಣುದ್ದ ಮನುಜಾಕೃತಿಯೊಂದು ಅದರಿಂದ ತುಸುವೇ ದೂರದಲ್ಲಿದ್ದ ಡಾಂಬರಿನ ಖಾಲಿ ಡ್ರಂಗಳತ್ತ ಬಚಾವು ಮಾಡಿಕೊಳ್ಳಲು ಓಡುತ್ತಿತ್ತು. ಢಂ.. ಢಂ.. ಎಂದು ಕೋವಿ ಮತ್ತೆ ಗರ್ಜಿಸಿತು. ಆ ಡ್ರಮ್ಮಿನ ಮರೆಯನ್ನು ಸಮೀಪಿಸುತ್ತಿರುವಂತೆಯೇ ಆ ಮನುಜಾಕೃತಿ ಮುಗ್ಗರಿಸಿ, ಮೊಣಕಾಲ ಮೇಲೆ ಅಡ್ಡಾಗಿ ಡ್ರಮ್ಮಿನ ಹಿಂದೆ ಬಿತ್ತು. ಒಂದೇ ಕ್ಷಣ.

ನೆರೆದ ಜನರೆಲ್ಲ ಕಿವಿಗಡಚಿಕ್ಕುವಂತೆ ಚಪ್ಪಾಳೆ ತಟ್ಟಿದರು. ಹೌದು. ನಂಬಿ. ಅವರೆಲ್ಲ ಚಪ್ಪಾಳೆ ತಟ್ಟಿದರು. ಈಗಷ್ಟೇ ಊಟ ಮುಗಿಸಿ ಬಂದವರು, ಮನೆಯಲ್ಲಿ ಹೆಂಡತಿ-ಮಕ್ಕಳನ್ನು ಹೊಂದಿರುವವರು, ತಂದೆ ತಾಯಿಯರನ್ನು ಡಾಕ್ಟರರ ಬಳಿ ತಪಾಸಣೆಗೆ ಒಯ್ಯುವವರು, ಚಾಕಲೇಟು ಬಿಸ್ಕತ್ತು ಹಣ್ಣು ಮಾರುವವರು, ಭಾರತೀಯರು, ಕನ್ನಡಿಗರು, ಮರಾಠಿಗರು, ಗುಜರಾತಿಗಳು, ನವವಿವಾಹಿತರು.. ಹೀಗೆ ಅಲ್ಲಿದ್ದ ನಾಗರಿಕರೆಲ್ಲರೂ ಚಪ್ಪಾಳೆ ತಟ್ಟಿದರು.

ಇನ್ನೊಂದು ಘಟನೆ: 'ಕರ್ನಾಟಕ ಸಂಘ'ದಲ್ಲಿ, 'ಮುಂಬಯಿಯ ಜನಜೀವನದಲ್ಲಿ ಕನ್ನಡಿಗರ ಪಾತ್ರ'ದ ಮೇಲೊಂದು ವಿಚಾರ ಸಂಕಿರಣ ನಡೆದಿತ್ತು. ಹೋಟೆಲ್ ಉದ್ಯಮದಲ್ಲಿ ಕನ್ನಡಿಗರ ಮೇಲುಗೈ, ರಾತ್ರಿ ಶಾಲೆಗಳಲ್ಲಿ ಕನ್ನಡಿಗರ ಮೇಲುಗೈ.. ಹೀಗೆ.. ಹೇಳುತ್ತಾ ಮಹನೀಯರೊಬ್ಬರು ತುಂಬಾ ನೋವಿನ ವ್ಯಂಗದಿಂದ, ''ಇಲ್ಲಿಯ ಕಾಮಾಟಿಪುರದ ಲೈಂಗಿಕ ಕಾರ್ಮಿಕ (Sex worker) ರಲ್ಲೂ ನೇಪಾಳಿ ಹುಡುಗಿಯರ ನಂತರ ಕನ್ನಡಿಗರದೇ ಮೇಲುಗೈ'' ಎಂದಾಗ-ನಂಬಿ, ಸಭಾಭವನದಲ್ಲಿ ಜನ ಚಪ್ಪಾಳೆ ಹೊಡೆದರು!

ಈ ಚಪ್ಪಾಳೆಗಳು ನನ್ನ ಕಿವಿಯಿಂದ ಎಂದಿಗೂ ಮಾಸುವಂಥವಲ್ಲ. ಆನಂತರ ಎಲ್ಲೇ ಕೇಳಿಬರುವ ಎಂಥದೇ ಚಪ್ಪಾಳೆಯಲ್ಲೂ ಇದರದ್ದೇ ಪ್ರತಿಧ್ವನಿಯ ಭಾಸವಾಗುತ್ತದೆ.

ಚಪ್ಪಾಳೆ ಯಾಕೆ ಹೊಡೆಯುತ್ತೇವೆ? ಮತ್ತು ಮುಖಕ್ಕೆ ಬಾರಿಸಿದಂತೆ ಚಪ್ಪಾಳೆ ಹೊಡೆಯುವ ಹಿಜಡಾಗಳನ್ನು ಕಂಡು ಯಾಕೆ ಹೆದರಿ ಕಣ್ಣು ತಪ್ಪಿಸುತ್ತೇವೆ?

**ಜಯಂತ ಕಾಯ್ಕಿಣಿ**

jayant kaikini@vsnl.net





## ಅರ್ಧ ಸಾಯುತ್ತ, ಅರ್ಧ ಬದುಕುತ್ತ...

ರಾಧಾಕೃಷ್ಣ ಕೆಳದಿ

ಪಿ. ಲಂಕೇಶರ, 'ಟಿ. ಪ್ರಸನ್ನನ ಗೃಹಸ್ಥಾಶ್ರಮ' ನಾಟಕದಲ್ಲಿ ತನ್ನ ಗಂಡ ಮತ್ತೊಬ್ಬ ಹೆಂಗಸನ್ನು ಪ್ರೇಮಿಸುತ್ತಿದ್ದಾನೆಂಬ ವಿಷಯ ತಿಳಿದು ಛಿದ್ರಗೊಂಡ ಮನಸ್ಸಿನ ಸುಲೋಚನ, 'ನನಗಿನ್ನು ಸಂಸಾರ ಬೇಡ' ಎನ್ನುತ್ತಾಳೆ. ಆದರೆ ಅವರಿಗೆ ಬುದ್ಧಿವಾದ ಹೇಳುವಾಗ ಪ್ರಸನ್ನ, ''So ಇನ್ನು ಹೊರಡಿ. ಸಾಧ್ಯವಾದಷ್ಟೂ ದಿನ ಸುಖವಾಗಿ ಸಂಸಾರ ಮಾಡಿ...'' ಎನ್ನುತ್ತಾನೆ. ಈ ವಾಕ್ಯವೇ ನನ್ನ ಗಮನ ಸೆಳೆಯಿತು. ನನ್ನ ಪ್ರಕಾರ ಪೂರ್ಣವಾಗಿ ಹೊಂದಿಕೊಂಡು ಬದುಕುವವನು ಅರ್ಧ ಸತ್ತಿರುತ್ತಾನೆ! ಸಾಧ್ಯವಾದಷ್ಟೂ ದಿನ ಹೊಂದಿಕೊಳ್ಳುವವನು ತನಗೆ ಬೇಕಾದಂತೆ ಬದುಕಲು ಹೆಣಗುತ್ತಿರುವವನು. ಹೀಗೆ ಯೋಚಿಸುವಾಗ-ಲೋಕದ ಗಂಡ ಹೆಂಡಿರು ನಿಜವಾಗಿಯೂ ಪ್ರೀತಿಸುತ್ತಾರಾ? ನನ್ನ ಹೆಂಡತಿಯನ್ನು ನಿಜಕ್ಕೂ ಪ್ರೀತಿಸುತ್ತೇನಾ? ಇನ್ನೊಬ್ಬ ಹೆಂಗಸಿನ ವಿಷಯ ನನ್ನ ತಲೆಯಲ್ಲೇಕೆ ಸುಳಿಯುತ್ತದೆ? ಹೆಣ್ಣು ಅಂದೊಡನೆ ನನ್ನಲ್ಲುಂಟಾಗುವುದು ಲೈಂಗಿಕ ಜಾಗೃತಿ ಮಾತ್ರವೇ? ಹಾಗಾದರೆ ಪ್ರೀತಿ ಅಂದರೇನು? 'ರಸವೇ ಜನನ, ವಿರಸ ಮರಣ, ಸಮರಸವೇ ಜೀವನ' ಎಂಬ ಕವಿವಾಣಿಯನ್ನು ನಂಬಿ ತೆಪ್ಪಗೆ ಬದುಕೋಣವೇ? ಪ್ರಶ್ನೆಗಳ ಸರಮಾಲೆಯೇ ಎದುರು ನಿಲ್ಲುತ್ತದೆ.

25 ವರ್ಷದ ದಾಂಪತ್ಯ ಜೀವನದಲ್ಲಿ ಒಟ್ಟಿಗೇ ಇರುತ್ತ, 8-10 ವರ್ಷಗಳಿಂದ ಹೆಂಡತಿ ಕೊಟ್ಟ ನೀರೂ ಕುಡಿಯದ ವ್ಯಕ್ತಿಯನ್ನು ಕಂಡಿದ್ದೇನೆ. ಆ ಹೆಂಗಸೂ ಕೂಡಾ ಸಂಸಾರದ ಚೌಕಟ್ಟಿಗಂಜಿ ತಣ್ಣಗಿದ್ದಾಳೆ. ಈ ಗಂಡಿನ ಅಹಂಕಾರಕ್ಕೆ ಅವಳೇಕೆ ಸಿಡಿಯಲಿಲ್ಲ? ಸಿಡಿದು ಬೇರೆಯಾದವರು ಗಂಡನನ್ನೂ, ಹೆಂಡತಿಯನ್ನೂ ಒಳಗೊಳಗೇ ಪ್ರೀತಿಸುವುದನ್ನೂ, ಬೇರೆಯಾಗಿದ್ದಕ್ಕೆ ದುಃಖಿಸುವುದನ್ನೂ ಕಂಡಿದ್ದೇನೆ. ಇದೆಂಥ ವಿಚಿತ್ರ! ಜೀವನ, ಬರೆದಿಟ್ಟ ಚಿತ್ರವಲ್ಲ. ದೆಹಲಿಯ ದಾರಿಯನ್ನು ಮ್ಯಾಪ್‌ನಲ್ಲಿ ತೋರಿಸಿದಂತಲ್ಲ.

ಅಹಂಕಾರವನ್ನು ಬಿಡುವುದು ಅತ್ಯಂತ ಕಷ್ಟದ ಕೆಲಸವಾದ್ದರಿಂದ ಸಂಸಾರ ಸುಖ, ಇನ್ನಿತರ ಅನೇಕ ಸುಖಗಳನ್ನು ಬಿಡುವುದು ಅನಿವಾರ್ಯವಾಗುತ್ತದೆ.



## ಅನಿಷ್ಠೆಯ ಸಂಭವವೇ ಹೆಚ್ಚು

ಎಸ್. ಪಿ. ಶ್ಯಾನಭಾಗ, ಬೆಂಗಳೂರು

ಮೂಲತಃ 'ದಾಂಪತ್ಯ ನಿಷ್ಠೆ' ಎನ್ನುವದು ಕೇವಲ ಒಂದು ಕಲ್ಪನೆ; ಶಾಸ್ತ್ರ. ವ್ಯಕ್ತಿ ತನ್ನ ಖಯಾಲಿ, 'ಅಭಿರುಚಿ'ಗೆ ತಕ್ಕಂತೆ ವರ್ತಿಸುವದು ವ್ಯಾವಹಾರಿಕ. ಆದುದರಿಂದ, ಇಲ್ಲಿ 'ನಿಷ್ಠೆ'ಯ



ಪ್ರಶ್ನೆಯೇ ಇಲ್ಲ. ಯಾಕೆಂದರೆ 'ಸೂಕ್ತ ಅವಕಾಶ' ಸಿಕ್ಕರೆ 'ಅ-ನಿಷ್ಠೆ'ಯಾಗುವ ಸಂಭವವೇ ಹೆಚ್ಚು. ಮತ್ತೆ ಇಲ್ಲಿ ಸ್ತ್ರೀ-ಪುರುಷರೆಂಬ ಭೇದವಿಲ್ಲ. ಇದು ವಾಸ್ತವ.

## ಬಂಧನ ಯಾ ಬದ್ಧತೆ?

ಎಂ.ಆರ್. ಗಣೇಶ್‌ಕುಮಾರ್, ತುಮಕೂರು

ದಾಂಪತ್ಯ ನಿಷ್ಠೆಯ ಪ್ರಶ್ನೆ ದಾಂಪತ್ಯವೆಂಬುದು ವ್ಯಕ್ತಿಯ ಪಾಲಿಗೆ ಬದ್ಧತೆಯೋ ಯಾ ಬಂಧನವೋ ಎಂಬ ಪ್ರಶ್ನೆಗೆ ಎಡೆಮಾಡಿಕೊಡುತ್ತದೆ. (ಸಮೀಕ್ಷೆಯಲ್ಲಿ ಭಾಗವಹಿಸಿರುವ ಅನೇಕರು ಮುಕ್ತತೆ, ಕಟ್ಟು ಹರಿವ ಮಾತು ಬಳಸಿರುವುದು ಗಮನಾರ್ಹ.) 'ಎಂತಹ ಅನಿವಾರ್ಯತೆಗಳಾದರೂ ಸರಿಯೇ, ಎದುರಿಸಿ ನಿರ್ವಹಿಸಲೇಬೇಕಾದ ಬದ್ಧತೆ ದಾಂಪತ್ಯ' ಎಂಬ ನಂಬಿಕೆಯಿದ್ದಾಗ-ಮತ್ತೊಬ್ಬನ ಹೆಂಡತಿ ಪರಮ ಸುಂದರಿ ಎಂದು ಗಂಡಿಗನಿಸಿದರೂ, ಮತ್ತೊಬ್ಬಳ ಗಂಡ ಸರ್ವಗುಣ ಸಂಪನ್ನ ಎಂದು ಹೆಣ್ಣಿಗನಿಸಿದರೂ, ದಾಂಪತ್ಯ ನಿಷ್ಠೆ ಬದಲಾಗುವುದಿಲ್ಲ.

ತಾಯಿ-ಮಗುವಿನ ಸಂಬಂಧದ ನಂತರ ಅತಿ ಹೆಚ್ಚು ಆತ್ಮೀಯವಾಗುವ ಸಾಧ್ಯತೆಯುಳ್ಳ ಸಂಬಂಧ ಗಂಡ-ಹೆಂಡತಿಯದೇ. ಸಹ-ವಾಸದ ಸಮಯದಲ್ಲಿ ಅನಿವಾರ್ಯವಾಗಿ ಅರಿವಿಗೆ ಬರುವ ವ್ಯಕ್ತಿ ಸ್ವಭಾವದ ಓರೆ-ಕೋರೆ, ಅಂಕು-ಡೊಂಕು, ವಕ್ರತೆಗಳನ್ನು ಸಹಿಸಿ ಒಪ್ಪುವ ಮನೋಭಾವ ದಾಂಪತ್ಯ ನಿಷ್ಠೆಯ ಬುನಾದಿ.

ಮಧ್ಯಮ ವರ್ಗದ ಬಹುಪಾಲು ಗಂಡ-ಹೆಂಡತಿಯರು ದೀರ್ಘಕಾಲ ವಿಶ್ರಮಿಸುವ ದಾಂಪತ್ಯದ ಒಂದು ಮಜಲು- ''ನಾನಾಗುವ ಹೊತ್ತಿಗೆ ಈ ರಾಕ್ಷಸನೊಂದಿಗೆ/ರಾಕ್ಷಸಿಯೊಂದಿಗೆ ಬಾಳುತ್ತಿದ್ದೇನೆ (ಅಲ್ಲಲ್ಲ, ಏಗುತ್ತಿದ್ದೇನೆ!)'' ಎಂಬುದು. ಈ ಮಜಲನ್ನೇ ಮುಟ್ಟದವರ, ಮುಟ್ಟಿದರೂ ಬಹುಬೇಗ ಅದರಿಂದ ಪಾರಾಗುವವರ ಸಂಖ್ಯೆ ಮಾತ್ರ ತುಂಬಾ ಕಮ್ಮಿ. ಇಷ್ಟಾದರೂ ದಾಂಪತ್ಯ ನಿಷ್ಠೆಯ ಪ್ರಶ್ನೆ ಎದುರಾದರೆ ಇವರೆಲ್ಲರೂ ಯಾತಕ್ಕೂ ಜಗ್ಗದ ಕಲ್ಲುಬಂಡೆಗಳೇ ಸರಿ! ಹೆಚ್ಚೆಂದರೆ ವಿಚ್ಛೇದನ, ಒಂದು ಹೆಜ್ಜೆ ಮುಂದೆ ಹೋದರೆ ಮರುಮದುವೆ, ಆ ಮೂಲಕ ಸುರಕ್ಷಿತ ಜೀವನ ಎಂದು ಒಪ್ಪಿಯಾರು. ಎಲ್ಲರೂ ವಿವಾಹವೊಂದು ಬಂಧನ ಎಂದು ಎಗರಾಡಿದರೂ, ಆಳದಲ್ಲಿ ಅದೊಂದು ಬದ್ಧತೆಯೆಂಬ ಭಾವನೆಯುಳ್ಳವರು ಎಂದು ನನ್ನ ನಂಬಿಕೆ. ಬದ್ಧತೆಯೆಂಬ ಅರಿವು ಮೂಡಿಸಿಕೊಂಡರೆ ನಿರಾಳತೆ; ಬಂಧನವೆಂದು ಭ್ರಮಿಸಿದರೆ ನರಳಾಟ ಅಲ್ಲವೇ?

## ಬೇಲಿ ಇರುವುದೇ ಹಾರಲಿಕ್ಕೆ!

ಎಚ್.ಎಸ್. ಸತ್ಯನಾರಾಯಣ, ಮಾಲೂರು

ನಾಗೇಶ್ ಹೆಗಡೆಯವರು ಅಧೈರ್ಯದಿಂದಲೇ ಹೇಳಹೊರಟಿರುವ ಸಂಗತಿ, ಪ್ರಸನ್ನ ಅವರ ನೈತಿಕ ಜವಾಬ್ದಾರಿಯ ಪ್ರಶ್ನೆ ಮತ್ತು ಉಮಾರಾವ್ ಅವರ ಸಂವೇದನೆ ಬಹುಶಃ ಇಂದಿನ ಪ್ರಾತಿನಿಧಿಕ ಆಲೋಚನೆಗಳನ್ನು ಪ್ರತಿಬಿಂಬಿಸುತ್ತಿದೆಯೇನೋ! ಮಮತಾ ಜಿ. ಸಾಗರ 'ದಾಂಪತ್ಯ ನಿಷ್ಠೆ= ಹೆಣ್ಣಿನ ನಿಷ್ಠೆ' ಎಂದಿರುವುದು ಸ್ತ್ರೀವಾದದ ಸವಕಲು ವಾದಸರಣಿಯ ಜಾಡಿನಲ್ಲಿದೆ. 'ನಿಷ್ಠೆ' ಎಂಬ ಕಲ್ಪನೆ ಇಂದು ಹಾಸ್ಯಾಸ್ಪದ ಎನಿಸುತ್ತದೆ. ಅದೊಂದು ಸಮಾಧಾನ, ನೆಮ್ಮದಿ ಮತ್ತು ಹಪಹಪಿಕೆ. 'ನಂಬಿಕೆ'ಯ ಪ್ರಶ್ನೆ ತೀರ ಅಮುಖ್ಯ. ಆದರೆ ಸಾವು ಅರಸುವ ನೆಮ್ಮದಿಯಲ್ಲಿ ಪ್ರಸನ್ನ ಅವರು ಹೇಳುವ ನೈತಿಕ ಜವಾಬ್ದಾರಿಯ ಪ್ರಶ್ನೆ ನಮ್ಮ ಜೊತೆಗಿರಬೇಕಷ್ಟೇ. 'ಹೆಣ್ಣಿನ ನಿಷ್ಠೆ' ನೈತಿಕತೆಯನ್ನು ಅನುಮಾನಿಸಿದಂತೆ. ಬಹಳ ಮುಖ್ಯವೆಂದರೆ ಇದು ಮೇಲುನೋಟಕ್ಕೆ ಕಾಣುವ 'ದೈಹಿಕ ನಿಷ್ಠೆ'ಯಷ್ಟೇ ಅಲ್ಲ. ಮನುಷ್ಯನ

ಮೂಲಭೂತ ತುಡಿತವೊಂದರ ಬೇಲಿ: ಬೇಲಿ ಇರುವುದೇ ಹಾರಲಿಕ್ಕೆ, ನಾವಿರುವುದೇ ಎಲ್ಲವನ್ನೂ ಉಲ್ಲಂಘಿಸಲಿಕ್ಕೆ ಎಂಬುದೆಲ್ಲ ಪ್ರಗತಿಪರ ನಡೆವಳಿಕೆಯಲ್ಲ. ಅದರ ಸೋಗಲಾಡಿತನ.

## ವೈಯಕ್ತಿಕ ಸಮೀಕರಣ

ಆನಂದ್ ಋಗ್ವೇದಿ, ದಾವಣಗೆರೆ

ದಾಂಪತ್ಯ ನಿಷ್ಠೆಯ ಪರಿಕಲ್ಪನೆ ಬದಲಾಗುತ್ತಿದೆಯೇ. 'ಇರಬಹುದು ಬಿಡಿ' ಎಂಬ ನಿರ್ಲಿಪ್ತ ಧೋರಣೆ, 'ಹಾಗೇನೂ ಇಲ್ಲ' ಎನ್ನುವ ಸಾಂಪ್ರದಾಯಿಕ ಮನಸ್ಸುಗಳು ನಮ್ಮ ಸಮಾಜಿಕ ಸಂದರ್ಭದ ಅತ್ಯಂತ ಸೂಕ್ಷ್ಮ ಪ್ರಶ್ನೆಯನ್ನು ಸಾರಾಸಗಟಾಗಿ ಬದಿಗಿರಿಸಿಬಿಡುತ್ತವೆ. ಆದರೆ ನನ್ನಂತಹ ಇನ್ನೂ ಅವಿವಾಹಿತ, ಸಂವೇದನಾಶಾಲಿ ಹುಡುಗ/ಗಿಯರಿಗೆ ಈ ಪ್ರಶ್ನೆ ಬೃಹತ್ತಾಗಿ, ಗೀಳಾಗಿ, ಬದುಕಿನ ಮಹಾನ್ ಅರ್ಥಗಳನ್ನೊಳಗೊಂಡ ನಿಗೂಢ ಚಿಪ್ಪಿನಂತೆ ಕಾಡತೊಡಗಿದೆ ಎಂಬುದು ಪ್ರಾಮಾಣಿಕ ಸತ್ಯ.

ಈಗ್ಗೆ 5-6 ವರ್ಷಗಳ ಹಿಂದೆ, ನಾವಿನ್ನೂ ಆಗ ಡಿಗ್ರಿ ಓದುವ ಹುಡುಗರು. ಅಲ್ಲಿಯ ಮುಕ್ತತೆ, ಶಹರದ ಸ್ವಚ್ಛಂಧತೆ ನಮ್ಮಂತಹ ಪುಟ್ಟ ಊರುಗಳಿಂದ ಬಂದ ಮುಗ್ಧರಿಗೆ ಬೆರಗು. ಅದೇ ಆಗ ಹುಡುಗಿಯರು ಕೌತುಕವಾಗದೇ ಗೆಳತಿಯರಾಗಿ ಆಪ್ತರಾದ ಹೊತ್ತು, ಲೈಂಗಿಕ ಗ್ರಹಿಕೆಗಳು ಮಾತುಗಳಲ್ಲಿ ಸ್ಫುಟವಾಗುತ್ತಿದ್ದ ಹೊತ್ತು, ಆ ಹೊತ್ತಿಗಾಗಲೇ ಲೈಂಗಿಕ ಅನುಭವಗಳನ್ನು ಪಡೆದಿದ್ದ ನನ್ನ ಕೆಲ ಗೆಳೆಯ/ಗೆಳತಿಯರ ಬಗ್ಗೆ ಗಾಬರಿ, ಅಚ್ಚರಿ ಪಟ್ಟಿದ್ದೆವು. ಅಲ್ಲಿಂದ ಹೊರಬಂದನಂತರ ನಾವೆಲ್ಲ ನಮ್ಮ ಉದ್ವೇಗಗಳಲ್ಲಿ ವ್ಯಸ್ತರಾದಂತೆ, ಆ ಹುಡುಗ/ಗಿಯರಿಗೂ ಮದುವೆಗಳಾದವು. ನನ್ನ ಅನುಭವ ಲೋಕ ವಿಸ್ತಾರವಾದಂತೆ, ಆರೋಗ್ಯ ಇಲಾಖೆಯ ಓರ್ವ ನೌಕರನಾದ ನನ್ನೆದುರು, ಮಾನವ ಸಹಜ ವಾಂಛೆ ವಿಕೃತಿಯಾಗಿ ಬಿಟ್ಟಿರುವ ಸ್ಥಿತಿ ಸ್ಫುಟವಾಗಿ ಗೋಚರಿಸಿತು. ಅದು ಬಿತ್ತಿದ್ದು ವಿಸ್ಮಯವಲ್ಲ, ಭೀತಿ.

ಇದೆಲ್ಲಾ ಈ ಒಳ ಮರೆಯ ಸಮಾಜದಲ್ಲಿ ಎಂದಿನಿಂದಲೂ ಇತ್ತು. ಮುಕ್ತತೆ, ಬಹುಮುಖ ಲೈಂಗಿಕತೆ ಖಾಸಗಿ ತೃಪ್ತ ಸ್ಥಿತಿ. ಅದೇನೋ ಮಡಿವಂತಿಕೆ ಹೊದ್ದು ಕುಳಿತ ನಮ್ಮ ಅಪ್ಪಟ ಸಾಂಪ್ರದಾಯಿಕ ಮಧ್ಯಮವರ್ಗ ಬೆಳಗ್ಗೆ ಎದ್ದು, 'ಕಮಲಾಕುಚ ಚೂಚುಕ' ಸುಪ್ರಭಾತದೊಂದಿಗೆ ದಿನ ಆರಂಭಿಸಿ, ಸಂಜೆ 'ಗೋಪಿಲೋಲ'ನ ಭಜನೆಯೊಂದಿಗೆ ಮುಗಿಸುವಂತಹದ್ದು! ಅಂತಹ ಮಧ್ಯಮವರ್ಗಕ್ಕೆ ಮಾತ್ರ ಈ ಹೊತ್ತು 'ಫಿಡೆಲಿಟಿ' ದಿಗ್ಭ್ರಮೆಗೊಳಿಸಿರುವುದು ಕೆಲವೊಮ್ಮೆ ತಮಾಶೆಯೂ ಅನ್ನಿಸುತ್ತದೆ. ಕಟ್ಟಿಕೊಂಡ ಮನೆಗೂ ಹಿಂಬಾಗಿಲು, ಹಿತ್ತಿಲು, ಭದ್ರಗೋಡೆಗೆ ತೆರೆದುಕೊಂಡ ಸಣ್ಣ ಕಿಟಕಿ, ಒಡ್ಡು ಗಟ್ಟಿಯಾದಷ್ಟು ಕೆ ಕೋಡಿಯಲ್ಲಿ ಸೋರುವ ಕೆರೆಯ ನೀರು, ಇವೆಲ್ಲ ಸಹಜ ಪರ್ಯಾಯವೆಂದು ಮಧ್ಯಮವರ್ಗ ನಂಬಬೇಕಿದೆ.

ವಿವಾಹವನ್ನು ಸಂಸ್ಥೆಯಾಗಿಸದೇ ವೈಯಕ್ತಿಕ ಸಮೀಕರಣವಾಗಿಸಿದಾಗ ಮಾತ್ರವೇ ಅದರ ಪ್ರತ್ಯುತ್ತ ಪಾರದರ್ಶಕವಾಗಿ, ಪ್ರಾಮಾಣಿಕವಾಗಿ, ಗೋಚರಿಸಲು ಸಾಧ್ಯ. ಪರಸ್ಪರ ನಂಬಿಕೆ, ವಿಶ್ವಾಸ, ನಿಷ್ಠೆಯ ಪ್ರಾಮಾಣಿಕ ಇಟ್ಟಿಗೆಗಳೊಡನೆ ಕಟ್ಟಿಕೊಳ್ಳುವ ದಾಂಪತ್ಯದ ಮನೆ ಮಾತ್ರ ಬಿರುಕುಬಿಡದು.

## ಮತ್ತೆ ಅಪೂರ್ಣತೆಯತ್ತ

ಶಿವಲಿಂಗು ಬಳಿಗಾರ್, ಗದ

ನಮ್ಮೂರ ಆ ಕಡೆ ಓಣಿಯ ಮಹಾರುದ್ರಯ್ಯ ಈ ಕಡೆ ಓಣಿಯ ಓಂಕಾರೆಪ್ಪನ ಹೆಂಡತಿಯನ್ನು ಈ ಇಪ್ಪತ್ತು ವರ್ಷಗಳಿಂದ ಖಾಯಂ ಇಟ್ಟುಕೊಂಡಿದ್ದಾನೆ. ಮಹಾರುದ್ರಯ್ಯ ಓಂಕಾರೆಪ್ಪ ಹೆಂಡತಿಯೊಂದಿಗೆ ನಿಷ್ಠೆಯಿಂದ ದಾಂಪತ್ಯ ನಡೆಸುವ ವಿಚಾರ ಇಡೀ ಊರಿಗೇ ತಿಳಿದಿರುವ

ಮಹಾರುದ್ರಯ್ಯನ ಹೆಂಡತಿ ಮಕ್ಕಳಿಗೂ ಸಹ ತಿಳಿದಿರುತ್ತದೆ. ಆದಾಗ್ಯೂ ಮಹಾರುದ್ರಯ್ಯನ ಹೆಂಡತಿ ಗಂಡನೊಂದಿಗೆ ನಿಷ್ಠೆಯಿಂದಲೇ ದಾಂಪತ್ಯ ನಡೆಸುತ್ತ ಬಂದಿದ್ದಾಳೆ.

ನಮ್ಮೆಲ್ಲರೆದುರಿಗಿರುವ ಇಂಥ ನೂರೆಂಟು ಜೀವಂತ ಉದಾಹರಣೆಗಳೊಂದಿಗೆ 'ವಿಚಾರ ಸಂಗಮ'ವೂ ಭೋರ್ಗರೆದು, ಮತ್ತೆ ಅಪೂರ್ಣತೆಯತ್ತ ನಡೆದಂತೆನಿಸಿತು. ಇದೇ ಸಂಚಿಕೆಯ 'ಅಂಚು' ಕಥೆಯಲ್ಲಿ ವಿವೇಕ ಶಾನಭಾಗರು ಹೇಳುವಂತೆ, ಒಳ್ಳೆಯ ಗಂಡ, ಒಳ್ಳೆಯ ಅಪ್ಪ, ಒಳ್ಳೆಯ ವ್ಯಕ್ತಿ ಆಗತೊಡಗಿದೊಡನೆ ಸತ್ಯ ನೋಡುವ ಸಾಧ್ಯತೆ ಕಡಿಮೆಯಾಗುತ್ತಾ ಹೋಗುತ್ತದೆ ಅಂದರೆ ಅದನ್ನು ಒಪ್ಪಬಹುದೆ? ಸಂಸಾರದ ಪಾತ್ರಧಾರಣೆಯನ್ನು ಮೀರಿಯೇ ಡೊಂಕನ್ನು ಬಳಸಿಕೊಂಡು ನಿಜದ ಹತ್ತಿರ ಸರಿಯಬೇಕೆ? ಹಾಗೆ ನೋಡಿದರೆ ಉಮಾ ರಾವ್ ಹೇಳುವ ಪ್ರಕಾರ, ಪ್ರತಿ ದಾಂಪತ್ಯಕ್ಕೂ ತನ್ನದೇ ಲಯ, ವ್ಯಾಕರಣ ಮತ್ತು ಮೌನ ಇರುವುದಿಲ್ಲವೆ? ಖುಶವಂತ್ ಸಿಂಗ್‌ರಂತಹವರ ಕ್ರಾಂತಿ ಲೇಖನಗಳು ಬೀದಿ ಬದಿ ಸಿಗುವ ಸೆಕ್ಸ್ ಪುಸ್ತಕಗಳಿಗಿಂತ ಭಿನ್ನ ಎನಿಸಿಯಾವೆ?

## ಗಂಡನ ಬಗೆಗೆ ಅನಾದರ! ಹೆಂಡತಿಯ ಬಗ್ಗೆ ಜಿಗುಪ್ಸೆ!!

**ವಿನೋದ ಜಿ. ಭಟ್ಟ ಯಲ್ಲಾಪುರ**

'ದಾಂಪತ್ಯ ನಿಷ್ಠೆ' ಇದು ಎರಡು ಮನಸ್ಸುಗಳು ತಮ್ಮ ನಡುವಿನ ಎಲ್ಲ ಗೋಡೆಗಳನ್ನು ಕಳಚಿಕೊಂಡು, ಸಹಜವಾಗಿ ಪರಸ್ಪರ ಸ್ಪಂದಿಸುವ ಕ್ರಿಯೆ. ಅದು ಓದಿಯೋ, ಹೇಳಿಸಿಕೊಂಡೋ ಮೈಗೂಡಿಸಿಕೊಳ್ಳುವ ಪಾಠವಲ್ಲ. ದಾಂಪತ್ಯ ನಿಷ್ಠೆ ಎಲ್ಲರೂ ಬಯಸುವಂತಹದ್ದು. ಆದರೆ ಅದು ಕೆಲವರಲ್ಲಿ ಮಾತ್ರ ತುಂಬ ಪ್ರಖರವಾಗಿ ಸಾಕಾರಗೊಳ್ಳಬಲ್ಲದು. ಹಾಗೆ ನೋಡಿದರೆ ದಾಂಪತ್ಯ ನಿಷ್ಠೆ ಗ್ರಹಿಕೆಗೆ ಸಿಗಲಾರದಷ್ಟು ಗಹನ ವಿಚಾರವಲ್ಲ. ತುಂಬಾ ಸೂಕ್ಷ್ಮವಾದ ಸಂವೇದನಾಶೀಲ ಮನಸ್ಸುಗಳ ಪಕ್ವ ಹೊಂದಾಣಿಕೆ.

ಇನ್ನು ಇಂದಿನ ಮಾಧ್ಯಮಗಳು ಸರಕು ಸಂಸ್ಕೃತಿಯ ಹರಿಕಾರರಂತೆ ಕಾರ್ಯನಿರ್ವಹಿಸುತ್ತಿವೆ. ಈ ಮಾಧ್ಯಮಗಳು ಸೃಷ್ಟಿಸುತ್ತಿರುವ ಪ್ರಭಾವಕ್ಕೊಳಗಾದ ಯುವಕ-ಯುವತಿಯರು ವಾಸ್ತವಿಕ ನೆಲೆಯಲ್ಲಿ ನಿಂತು ಬದುಕನ್ನು ನೋಡುವ ದೃಷ್ಟಿಯನ್ನೇ ಕಳೆದುಕೊಂಡಿದ್ದಾರೆ. ಸಿನಿಮಾ-ಧಾರಾವಾಹಿಗಳಲ್ಲಿನ ರಮ್ಯ ಬದುಕು ವಾಸ್ತವದಲ್ಲಿ ಮರೀಚಿಕೆಯಾದಾಗ ಗಂಡನ ಬಗೆಗೆ ಅನಾದರ ಹೆಂಡತಿಗಾದರೆ, ಹೆಂಡತಿಯ ಬಗ್ಗೆ ಜಿಗುಪ್ಸೆಯ ಭಾವ ಗಂಡನದು. ಇದೇ 'ಅನಿಷ್ಠೆ'ಯ ಮೊದಲ ಮೆಟ್ಟಿಲು. (ಅನಿಷ್ಠೆ ಎಂದರೆ ಗಂಡ ಅಥವಾ ಹೆಂಡತಿ ಬೇರೆಯವರೊಂದಿಗೆ ಅನೈತಿಕ ಸಂಬಂಧ ಹೊಂದುವುದು ಎಂಬ ಅರ್ಥಕ್ಕೆ ಸೀಮಿತವಲ್ಲ!) ವಿಚಿತ್ರವೆಂದರೆ, ಇಂತಹ ಅನಿಷ್ಠೆಯ ನಡುವೆಯೂ, ಜೀವನದುದ್ದಕ್ಕೂ ಪರಸ್ಪರ ನಿಷ್ಠರಂತೆ ಸಮಾಜದೆದುರಿಗೆ ಸೋಗಿನಲ್ಲೇ ಬದುಕಿ, ಅಂತರ್ಯದಲ್ಲಿ ಜ್ವಾಲಾಮುಖಿಯನ್ನೇ ಹುದುಗಿಸಿಟ್ಟುಕೊಳ್ಳುವವರ ಸಂಖ್ಯೆ ಆತಂಕ ಮೂಡಿಸುತ್ತದೆ.

■



■ ರಾಧಾಕೃಷ್ಣ



ಹೆಗ್ಗೋಡಿನಲ್ಲಿ ಗೌರಮ್ಮ ಹೆಸರಿನ ಅನೇ
ಪ್ರಸಿದ್ಧರಿದ್ದಾರೆ. ಹಸೆ ಕಲಾವಿದೆ ಗೌರಮ್ಮನ
ಹುಡುಕಬೇಕಾದರೆ, ಹಸೇ ಗೌರಮ್ಮ ಎಂದೆ
ಕೇಳಬೇಕು. ಹಸೆ ಎಂದರೇನು? ಗೌರಮ
ನವರಿಗೇಕೆ ಈ ಹೆಸರು?

ಮಲೆನಾಡಿನ ಹಳ್ಳಿಗಳಲ್ಲಿ, ಜನರು ತವ
ಮನೆಯ ಗೋಡೆಗಳಲ್ಲಿ, ಬಾಗಿಲು ಚೌಕಟ್ಟ
ಮತ್ತು ಹೊಸಿಲಲ್ಲಿ ಸುಂದರವಾದ ಚಿತ್ರ ರ
ಸುವುದನ್ನು ರೂಢಿಸಿಕೊಂಡಿದ್ದಾರೆ. ಕೆಮ್ಮಣ್ಣು, ಅ
ಹಿಟ್ಟು, ತಾರೇಕಾಯಿ ದ್ರವ ಮುಂತಾಗಿ ಸ್ಥಳೀಯ
ವಾಗಿ ಸಿಗುವ ನೈಸರ್ಗಿಕ ವಸ್ತುಗಳಿಂದಲೇ ಬಣ್ಣ

# ಮಣ್ಣಿನಲ್ಲಿ ಚಿಗಿತ ಚಿತ್ತಾರದ ಬಳ್ಳಿ-ಹಸೆ ಗೌರಮ್ಮ





ತಯಾರಿಸಿ, ಹುಲ್ಲು ಕಡ್ಡಿಗಳಿಂದಲೇ ಕುಂಚ ಮಾಡಿ ಚಿತ್ರ ರಚಿಸುತ್ತಾರೆ. ಹೆಚ್ಚಾಗಿ ಮಹಿಳೆಯರೇ ಈ ಕಲೆಯಲ್ಲಿ ಪರಿಣತರು.

ಗೊಂಬೆ ಸಾಲು, ಸೀತೆ ಮುಡಿ, ಭತ್ತದ ಸಾಲು, ಕುಚ್ಚು ಸಾಲು, ಗೊಣಬೆ, ತ್ರಿಕೋನಾಕೃತಿಯ ಮನುಷ್ಯ ಮತ್ತು ಪ್ರಾಣಿ ಚಿತ್ರಗಳು, ಮದುವೆ, ಪಲ್ಲಕ್ಕಿ, ದಿಬ್ಬಣ, ಹಕ್ಕಿಗಳು, ಎತ್ತುಗಳು ಮುಂತಾಗಿ ತಮ್ಮ ಬದುಕಿನಲ್ಲಿ ದಿನ ನಿತ್ಯ ಕಾಣುವ ದೃಶ್ಯಗಳೇ ಹಸೆಚಿತ್ರ ಕಲಾವಿದರಿಗೆ ವಸ್ತು. ಇದಕ್ಕೊಂದು ಕಲಾತ್ಮಕ ಚೌಕಟ್ಟು ರೂಪಿಸುರುವುದು ಅವರ ಕಲಾ ಜಾಣ್ಮೆ.



ಬಿದಿರು ಬುಟ್ಟಿಗಳಿಗೆ ಕೆಮ್ಮಣ್ಣು ತೊಡೆದು, ಅಕ್ಕಿ ಹಿಟ್ಟಿನಿಂದ ಹಸೆ ಚಿತ್ರ ಬರೆದು ಭೂಮಿ ಹುಣ್ಣಿಮೆ ಪೂಜೆಗೆ ತಿನಿಸು ಒಯ್ಯುವ ಬುಟ್ಟಿಗಳನ್ನು ಶೃಂಗರಿಸುತ್ತಾರೆ. ಮನೆಯ ಇಡಕಲು-ದೇವರೆಂದು ಭಾವಿಸುವ ನೀರು ಇಡುವ ಜಾಗ-ಮೇಲಿನ ಗೋಡೆಯಲ್ಲಿ ಹಸೆ ಚಿತ್ರ ರಚಿಸುತ್ತಾರೆ. ಮದುವೆಗಳಾದಾಗ ಮನೆಯ ಗೋಡೆಗಳಲ್ಲಿ, ಮದುಮಕ್ಕಳನ್ನು ಪಲ್ಲಕ್ಕಿಯಲ್ಲಿ ಕೂರಿಸಿ, ವಾದ್ಯಗಳೊಂದಿಗೆ ದಿಬ್ಬಣ ಸಾಗುವ ಚಿತ್ರ ರಚಿಸುತ್ತಾರೆ. ಪ್ರದೇಶದಿಂದ ಪ್ರದೇಶಕ್ಕೆ ಇವುಗಳ ಮಾದರಿಯಲ್ಲಿ ಬದಲಾವಣೆಗಳಿರುತ್ತವೆ. ಹೀಗೆ ಈ ಚಿತ್ರಗಳು ಮಲೆನಾಡಿನ ಹಳ್ಳಿಗರಲ್ಲಿ ಹಾಸುಹೊಕ್ಕಾ



ಗ್ರೀಟಿಂಗ್ ಕಾರ್ಡ್‌ಗೆ ಬಳಸಿದ ಹಸೆ ಚಿತ್ರಗಳು

ಬೆರೆತುಕೊಂಡಿದೆ. ದೀವರು, ಹರಿಜನರು, ಮಡಿವಾಳರಲ್ಲಿ ಚೌಕ ಮತ್ತು ಗೆರೆಗಳಿಂ ಕೂಡಿದ ಚಿತ್ರಗಳು ಕಂಡುಬಂದರೆ, ಹವ್ಯಕರಲ್ಲಿ ರಂಗೋಲಿಯನ್ನು ಹೋಲು ಬಳ್ಳಿಗಳು ಕಂಡುಬರುತ್ತವೆ.



**ಅಜ್ಜಿಯ ಕನಸು**

ಗೌರಮ್ಮ ಹದಿಹರಯಕ್ಕೆ ಕಾಲಿರಿಸುತ್ತಿದ್ದ ವೇಳೆಗೆ, ಅವರ ಅಜ್ಜಿ ತನ್ನ ಕನಸಿಗಾ ಗೊಣಗಾಟ ಪ್ರಾರಂಭಿಸಿದರು. "ನಂಗೆ ಕಣ್ಣು ಕಾಣಾಕಲ್ಲ. ಇನ್ನು ಹಸೆಚಿತ್ರ ಬರಿಯಾ ಆಗಾಕಲ್ಲ. ನೀವು ಕಲ್ತಗಳಿ ಮಕ್ಕಾ" ಅನ್ನತೊಡಗಿದರು. ನಾಲ್ಕೈದು ಜನ ಮೊಮ್ಮಕ್ಕಳ ಗೌರಮ್ಮ ಹಸೆ ಚಿತ್ರ ಬರೆಯುವುದನ್ನು ಅಭ್ಯಾಸ ಮಾಡಿದರು. ಹೆಗ್ಗೋಡು ಸುತ್ತ ಮು ಎಲ್ಲಿ ಮದುವೆ ಆದರೂ, ಗೌರಮ್ಮನವರೇ ಹಸೆ ಚಿತ್ರ ಬರೆಯಬೇಕು. ಅವರ ಗೆರೆಗಳು ಚಿತ್ರ ರಚನೆ ಅಷ್ಟು ಸೊಗಸು! ಚಿತ್ರ ಬರೆದಿದ್ದಕ್ಕೆ ಗೌರಮ್ಮನಿಗೆ ಹಣವೂ ಸಿಗುತ್ತದ ಈಗೀಗ ಕೆಲಸಗಳ ಒತ್ತಡದಿಂದಾಗಿ ಮದುವೆ ಮನೆಗೇ ಹೋಗಿ ಚಿತ್ರ ರಚ ಮಾಡುವುದು ಅಸಾಧ್ಯವಾಯಿತು. ಮನೆಯಲ್ಲೇ ಬಿಡುವಿನ ವೇಳೆಯಲ್ಲಿ ಕಾಗದಗಳ ಆಧುನಿಕ ಬಣ್ಣಗಳಿಂದ ಚಿತ್ರ ರಚನೆ ಮಾಡುತ್ತಾರೆ. ಇವನ್ನೇ ಹಣ ನೀಡಿ ಜನ ತ ಮನೆಗಳ ಗೋಡೆಗಳಿಗೆ ಅಂಟಿಸುತ್ತಾರೆ. ಸಂಪ್ರದಾಯ ಬಿಡದ ಸಮಾಧಾನ ಹೊಂದುತ್ತಾರೆ

**ನುರಿತ ಕಲಾವಿದರೊಂದಿಗೆ**

ಪ್ರಸಿದ್ಧ ಕನ್ನಡ ನಾಟಕಕಾರ, ನಿರ್ದೇಶಕ ಪ್ರಸನ್ನ, ಹೆಗ್ಗೋಡಿನಲ್ಲಿ ಕವಿ ಕಾ ಸಾಂಸ್ಕೃತಿಕ ಸಂಘಟನೆ ಪ್ರಾರಂಭಿಸಿದರು. ಶಿವಮೊಗ್ಗ ಜಿಲ್ಲಾ ಅಂಗನವಾ ಕಾರ್ಯಕರ್ತೆಯರಿಗೆ ಯೂನಿಸೆಫ್ ನೆರವಿನೊಂದಿಗೆ ಹೆಚ್ಚಿನ ತರಬೇತಿ ಶಿ ನಡೆಸುವುದು ಈ ಸಂಘಟನೆಯ ಒಂದು ಯೋಜನೆಯಾಗಿತ್ತು. 1995ರಲ್ಲಿ ಯೋಜನೆ ಪ್ರಾರಂಭವಾಯಿತು. ಸ್ಥಳೀಯ ವಸ್ತುಗಳಿಂದ ಆಟಿಕೆಗಳು, ಸ್ಥಳೀ ಆಹಾರ ಉತ್ಪನ್ನಗಳಿಂದ ಪೌಷ್ಟಿಕ ಆಹಾರ ಒದಗಿಸುವುದು, ಜನಪದ ಹಾ





ಹಸೆಗಳನ್ನು ಬಳಸುವುದು ಮುಂತಾದ ದೇಸೀ ಚಿಂತನೆಗಳಿದ್ದವು. ಈ ತರಬೇತಿ ಶಿಬಿರಗಳಲ್ಲಿ ಗೌರಮ್ಮ ಅವರನ್ನು, ಹಸೆ ಚಿತ್ರ ರಚನೆಗೆ ತರಬೇತುದಾರರಾಗಿ ಪ್ರಸನ್ನ ಬಳಸಿದರು. ಇದರಿಂದ ತಾನು ಹೆಚ್ಚು ಕಲಿಯಲು ಅನುಕೂಲವಾಯಿತೆಂದು ಗೌರಮ್ಮ, ಪ್ರಸನ್ನ ಅವರನ್ನು ಕೃತಜ್ಞತೆಯಿಂದ ನೆನೆಯುತ್ತಾರೆ. ಈ ಶಿಬಿರದಲ್ಲಿ ಭಾಗವಹಿಸಿದ ಶಾಂತಿನಿಕೇತನದ ಕಲಾ ಪದವೀಧರೆ ಎಲ್.ಕೆ. ಪೂರ್ಣಿಮಾ, ಗೌರಮ್ಮನವರಿಗೆ ನೆರವಾದರು. ಓದಿದ ಜನರೆದುರು ತನ್ನದೇನು ಚಿತ್ರ ಅಂದುಕೊಳ್ಳುತ್ತಿದ್ದ ತನಗೆ, 'ನಿಮಗೆ ಬಂದಂಗೇ ಬರೀರಿ ಗೌರಮ್ಮಾ, ಫೆವಿಕಾಲ್ ಬಳಸಿ, ಬ್ರಷ್ ಬಳಸಿ, ಗ್ಲಾಸ್ ಮೇಲೂ ಬರೀರಿ ಅಂತ ಪೂರ್ಣಿಮಾ ಧೈರ್ಯಕೊಟ್ರು' ಎಂದು ಗೌರಮ್ಮ ಹೇಳುತ್ತಾರೆ.

## ಜೀವನದಲ್ಲಿ ತಿರುವು

ಇದರದ್ದೇ ಗ್ರಾಮೋದ್ಯೋಗ ಘಟಕವಾಗಿದ್ದ 'ಚರಕ'ದಲ್ಲಿ, ಮರುಬಳಕೆ ಕೈಕಾಗದಗಳ ಫೈಲುಗಳು, ಬಟ್ಟೆಯ ಲೆಟರ್ ಪೋಚ್‌ಗಳು, ಗ್ರೀಟಿಂಗ್ ಮುಂತಾದವುಗಳಲ್ಲಿ ಹಸೆಚಿತ್ರ ರಚನೆಗಳ ಕಲಾವಿದರಾಗಿ ಗೌರಮ್ಮ ಪಾಲ್ಗೊಂಡರು. ಇದು ಅವರ ಜೀವನದಲ್ಲಿ ಒಂದು ತಿರುವು. ಹಳ್ಳಿಯಲ್ಲಿ ಅಂಗಿ, ಜುಬ್ಬ, ಚೂಡಿದಾರ, ಕೋಟು, ಚೀಲ, ಫೈಲು, ಗ್ರೀಟಿಂಗುಗಳು, ಗಾಜಿನ ಮೇಲೆ ಬರೆದ ಚಿತ್ರಗಳು ಮುಂತಾಗಿ ಮಾರಾಟದ ವಸ್ತುಗಳು ತಯಾರಾದವು. ಇಲ್ಲೀಗ ಸುಮಾರು 20 ಜನ ಮಹಿಳೆಯರು ಕೆಲಸ ಮಾಡುತ್ತಿದ್ದಾರೆ. ಆದರೆ ಮಾರಾಟ? ದೇಸೀ ಕ್ರಮದಂತೆ ಮೊದಲು ಸಂತೆಗಳಲ್ಲಿ, ಜಾತ್ರೆಗಳಲ್ಲಿ, ಸಭೆ ಸಮಾರಂಭಗಳಲ್ಲಿ ಮಾರಾಟ ಮಾಡಿದರು. ಆದರೆ ಚರಕ ನಡೆಸಲು ಈ ಕ್ರಮ ಸಾಕಾಗಲಿಲ್ಲ. ಮಾರಾಟಕ್ಕಾಗಿ ಪ್ರಸನ್ನ ಬೆಂಗಳೂರಲ್ಲಿ 'ದೇಸಿ' ಅಂಗಡಿ ಪ್ರಾರಂಭಿಸಿದರು. ಹೆಗ್ಗೋಡಿನ ಮಹಿಳೆಯರಿಗೆ ಘಟಕದ ಜವಾಬ್ದಾರಿ ಕೊಡಬೇಕಿತ್ತು. ಹೆಚ್ಚಿನ ಜವಾಬ್ದಾರಿಯನ್ನು ಗೌರಮ್ಮ ವಹಿಸಿಕೊಂಡರು.

'96ರ ಅಕ್ಟೋಬರ್‌ನಲ್ಲಿ ಚರಕ ನೊಂದಾವಣೆಯಾಯಿತು. ಗೌರಮ್ಮ ಅಧ್ಯಕ್ಷೆಯಾದರು. ವಯಸ್ಕರ ಶಿಕ್ಷಣ, ಅಕ್ಷರ ತುಂಗಾ ಮುಂತಾಗಿ ಸಾಮಾಜಿಕ ಕೆಲಸಗಳಲ್ಲಿ ಅನುಭವ ಇದ್ದ ಭೀಮನಕೋಣೆ ಭಾಗೀರಥಿ, ಚರಕದ ಕಾರ್ಯದರ್ಶಿಯಾಗಿ ಕೆಲಸ ವಹಿಸಿಕೊಂಡು ಗೌರಮ್ಮನವರಿಗೆ ನೆರವು ನೀಡಿದರು.

ಮಹಿಳೆಯರು ಸಂಘಟನೆ ಮಾಡಿದಾಗ 'ಸಮಾಜದವರು' ಎಂದು ಜನ ವಕ್ರದೃಷ್ಟಿ ಬೀರು ವುದನ್ನು ಕಾಣುತ್ತೇವೆ. ಅದರಲ್ಲೂ ಶೋಷಣೆಗೆ ಒಳಗಾದ ಹಿಂದುಳಿದ ಸಮಾಜದಿಂದ ಬಂದ ತಮಗೆ ಟೀಕೆ



ಗಾಜಿನ ಮೇಲೆ ಬರೆದ ಚಿತ್ರಗಳು





ಬಟ್ಟೆಯ ಮೇಲೆ ಬಿಡಿಸಿದ ಚಿತ್ರ

ಟಿಪ್ಪಣಿಗಳು ಕೇಳಿಬರಲಿಲ್ಲವೇ ಎಂದು ಕೇಳಿದಾಗ, "ಫೈಲ್ ಮೇಲೆ ಹಸೆಚಿತ್ರ ಮಾಡಿದಾಗ, ಹಳ್ಳೀ ಜನ ಇದೆಂತಕ್ ಮಾಡ ಬೇಕು? ಇದೇನು ಚೆಂದ ಅಂತ ಬರೀತಾರೆ?" -ಹೀಗೆಲ್ಲಾ ಟೀಕೆ ಮಾಡಿದರು. ಹಸೇ ಚಿತ್ರಾನ ಬೇರೆ ತರಾ ಬರೆದರೆ ಹಳ್ಳೀ ಜನರ ಮನ್ಸು ಒಪ್ಪಲ್ಲ."

"ಒಳ್ಳೇ ಸೀರೆ ಉಟ್ಕೊಂಡು, ವಾಚ್ ಕಟ್ಕೊಂಡು ಓಡಾಡಿದಾಗಲೂ ಟೀಕೆ ಮಾಡಿದರು. ಸರ್ಕಾರದಿಂದ ದುಡ್ಡು ಬಂದ್ಯೆತೆ ಯಾರ‍್ಯಾರದ್ದೋ ಪರಿಚಯ ಐತೆ ಮುಂತಾಗಿ ಗಂಡ-ಹೆಣ್ಣು ಸಂಬಂಧ ಕಟ್ಟಿ ಅಂದ್ರು. ನಾವು ಇದ್ಯಾವುದಕ್ಕೂ ಜಗ್ಗಲಿಲ್ಲ. ನಮ್ಮ ಜನರ ತಾವ ಚರಕದ ಉದ್ದೇಶ ಹೇಳಿ ಪ್ರಚಾರ ಮಾಡಿದಾಗ ಕೆಲವರು ತಮ್ಮ ಮಕ್ಕಳನ್ನು ಕೆಲಸಕ್ಕೆ ಕಳ್ಸಿದರು ಬಟ್ಟೆ ನೆಯ್ಗೆ ತರಬೇತಿ, ಹಸೆಚಿತ್ರ ತರಬೇತಿ ಕೊಡಿಸಿದ್ವಿ. ಸ್ವಸಹಾಯ ಮಂಡಳೀಲಿ ಉಳಿತಾಯ ಯೋಜನೆ ಮಾಡಿಸಿದ್ವಿ. ಈಗ ನೋಡಿ, ಹೊನ್ನೇಸರದ ಪಾರ್ವತಿ ಭೀಮಕೋಣೇಲಿರೋ ಮಾಸ್ತಿಕಟ್ಟೆ ಹೇಮಾವತಿ ಸುಗುಣ, ಪುರಪ್ಪೆಮನೆ ಗೀತಾ, ಇವರೆಲ್ಲಾ ಒಳ್ಳೆ ಚಿತ್ರ ಬರಿಯಾದು ಕಲ್ತಿದಾರೆ. ಇದೇ ನವ ನೆಮ್ದಿ" ಹೀಗೆ ಹೇಳುವಾಗ (ಗೌರಮ್ಮನವ ಮುಖದಲ್ಲಿ ತೃಪ್ತಿ, ಚರಕದ ಬಗ್ಗೆ ಹೆಮ್ಮೆ ಕಾಣುತ್ತೆ



**ಗೋಡೆ ಮೇಲಿನ ಚಿತ್ರ**



ಗ್ರೀಟಿಂಗ್ ಕಾರ್ಡ್

'ಚರಕ'ದ ಕೆಲಸ ನಿರ್ವಹಿಸುತ್ತಾ, ಒಂದಿಗೇ ಕಿರಿಯ ಕಲಾವಿದರನ್ನು ಪ್ರೋತ್ಸಾಹಿಸುತ್ತಾ ಕೈತುಂಬ ದುಡಿಮೆ ಹೊಂದಿರುವ ಗೌರಮ್ಮ, 'ಇದರಿಂದ ನನ್ನ ಜೀವ್ನಕ್ಕೂ ನೆರವಾಯ್ತು' ಅನ್ನುತ್ತಾರೆ.

ಪ್ರಸನ್ನ, ಪೂರ್ಣಿಮಾ ಇವರೆಲ್ಲಾ ಹೊಸ ರೀತಿ ಚಿತ್ರ ಬರಿಯೋರು. ಅವರ ಜೊತೆ ಕೆಲ್ಸ ಮಾಡಿದ ನಿಮಗೆ, ಆ ರೀತಿ ಚಿತ್ರ ಬರೆಯೋದು ಕಲೀಬೇಕು ಅನಿಸಿಲ್ವೆ?

''ಅವರ ಥರ ಹೊಸ ರೀತಿ ಚಿತ್ರ ಬರೀಬೇಕು ಅನ್ನುತ್ತೆ. ಆದರೆ ನಂಗೆ ತಲೆ ಓಡೋದು ಹಸೆ ಚಿತ್ರದಲ್ಲೇ ಜಾಸ್ತಿ. ಚರಕದ ಕೆಲ್ಸದ ಜೊತೆಗೆ ಹಸೆ ಚಿತ್ರ ಬರೆಯೋದನ್ನೇ ಮುಂದುವರಿಸ್ತೇನೆ.''

## ಗಾಜಿನ ಕಡೆಗೂ ಹಬ್ಬಿದ 'ಬಳ್ಳಿ'

ಹಸೆ ಚಿತ್ರ ಇರುವಲ್ಲಿ ಈಗ ಸಿನೆಮಾ ನಟರು, ಕ್ರಿಕೆಟ್ ಪಟುಗಳ ಪಟಗಳು ತೂಗಾಡುತ್ತಿವೆ. ಹಸೆ ಚಿತ್ರಗಳು ಮರೆಯಾಗುತ್ತಿರುವ ಈ ಹೊತ್ತಿನಲ್ಲಿ, ಗೌರಮ್ಮನವರ ಕೈಯಲ್ಲಿ ಅಜ್ಜಿಯ ಬಳುವಳಿಗಳಾದ ಗೆರೆಗಳಿವೆ! ಅಡ್ಡ ಉದ್ದ ಎಳೆಯುವ ಗೆರೆಗಳೇ ಸುಂದರ ಹಸೆ ಚಿತ್ರವಾಗುವ ರೀತಿ ಅಸಾಧಾರಣವಾದದ್ದು. ಹಿಮಾಲಯದಿಂದ ಕನ್ಯಾಕುಮಾರಿಯವರೆಗೂ ಗುಡ್ಡಗಾಡು, ಆದಿವಾಸಿ ಜನರ ಈ ಚಿತ್ರಗಳಲ್ಲಿ ಹೋಲಿಕೆಯಿದೆ. ಪ್ರದೇಶದಿಂದ ಪ್ರದೇಶಕ್ಕೆ ಸ್ವಲ್ಪ ಭಿನ್ನವೆನಿಸಿದರೂ ಅವುಗಳ ತಿಟ್ಟು ಒಂದೇ ರೀತಿ.



ಹಸೆ ಚಿತ್ರಗಳು ಗೌರಮ್ಮನವರ ಕೈಲಿ ಸಾಂಪ್ರದಾಯಿಕ ಚೌಕಟ್ಟು ಮೀರಿ, ಹೊಸ ಹೊಸ ಮಾರ್ಪಾಡು ಹೊಂದಿವೆ. ಗೋಡೆ, ಬುಟ್ಟಿಯಲ್ಲದೆ, ಪೇಪರ್, ಗ್ಲಾಸು, ಬಟ್ಟೆಗಳ ಮೇಲೆ ಸುಂದರವಾಗಿ ಕಂಗೊಳಿಸತೊಡಗಿವೆ. ಗೌರಮ್ಮನ ಅಜ್ಜಿಯ ಕನಸು, ಕೆಮ್ಮಣ್ಣಿನಲ್ಲಿ ಬೇರು ಬಿಟ್ಟುಕೊಂಡೇ ಚಿತ್ತಾರದ ಬಳ್ಳಿಯಾಗಿ ಚಿಗಿತು ಹಬ್ಬುತ್ತಿದೆ. ■

**ಚಿತ್ರಗಳು: ಎನ್.ಎಂ. ಕುಲಕರ್ಣಿ**
**ಮತ್ತು 'ದೇಸಿ' ಸಂಗ್ರಹ**



# ತೆರೆದ ಅಂಚೆ

ಕನ್ನಡದ ಕತೆಗಳ ಜಗತ್ತಿಗೆ ಇರುವ ಸಂಭ್ರಮವು ನಿಮ್ಮ ಆಯ್ಕೆಗಳ ಮೂಲಕ ಹೊರ ಹೊಮ್ಮುತ್ತಿದೆ. ಹೊಸ ಹುಡುಗರ ಧನಿಯನ್ನು ಕೇಳುವ ತಾಳ್ಮೆ ನಿಮಗಿದೆ.

**ಶಿವಮೊಗ್ಗ** **ಕೇಶವ ಶರ್ಮ ಕೆ.**

ಭಾವನಾದ ಈಗಿನ ಫಾರ್ಮಾಟ್ ಐಡಿಯಲ್. ಸೂಕ್ಷ್ಮ ಅಭಿರುಚಿಯನ್ನು ಕಾಯ್ದುಕೊಂಡು ಜನಪ್ರಿಯವಾಗುವ ನಿಮ್ಮ ಉದ್ದೇಶ ಈವರೆಗಿನ ಸಂಚಿಕೆಗಳಲ್ಲಂತೂ ಫಲಿಸಿದೆ.

**ಉಡುಪಿ** **ಜಿ. ರಾಜಶೇಖರ**

ಸೂ. ರಮಾಕಾಂತರ 'ಅಧೀನ' ಕತೆ ಓದಿ ದಿಗ್ಮೂಢನಾದೆ. ಬರೆಯಬಹುದಾಗಿದ್ದ ಆ ಮೌನಿ ಬರೆಯಲೇ ಇಲ್ಲ.

**ಕೊಟ್ಟೂರು** **ಕುಂವೀ**

ಬೇಂದ್ರೆಯವರ 'ದೀಪದ ಮಲ್ಲಿ' ಟಿಪ್ಪಣಿಯೊಂದಿಗೆ ಪ್ರಕಟಿಸಿರುವ ಚಿತ್ರವನ್ನು ನೋಡುತ್ತಾ ಸ್ವಲ್ಪಹೊತ್ತು ಸುಮ್ಮನೆ ಮೌನವಾಗಿ ಉಳಿದೆ.

**ಗಂಗಾವತಿ** **ತಟ್ಟೆ ಕಾಶೀಮ ಅಲಿ**

ಈಚೆಗೆ ನನ್ನ ಸಹೋದರನ ಅಗಲಿಕೆಯಿಂದ ಸಾಹಿತ್ಯದ ಗೀಳು ಮರೆಯಾಗಿತ್ತು. ಅಚಾನಕ್ ಆಗಿ ಕೈಗೆ ಸಿಕ್ಕ 'ಭಾವನಾ' ನನ್ನಲ್ಲಿ ಚೇತನ ತುಂಬುತ್ತಿದೆ.

**ಮೋಕ** **ಕೆ. ಭುವನೇಶ**

ಸಾಮಾನ್ಯ ಓದುಗನಲ್ಲಿರುವ ಬರೆಯುವ ಪ್ರತಿಭೆಯನ್ನು ವಿಭಿನ್ನ ಅಂಕಣಗಳ ಮೂಲಕ ಬಸಿದುಕೊಳ್ಳುವ ಅದ್ಭುತ ಸಾಧ್ಯತೆಗಳನ 'ಭಾವನಾ' ವಾಸ್ತವಕ್ಕಿಳಿಸಿದೆ.

**ಮಂಗಳೂರು** **ಶ್ರೀನಿವಾಸ ಕಾರ್ಕ**

ಈ ಹಿಂದೆ ಯಾವ ಪತ್ರಿಕೆಯೂ ಇಂ 'ಓದಲೇಬೇಕು, ಇಲ್ಲಾಂದ್ರೆ ನಡೆಯೋ ಇಲ್ಲಾ' ಅನ್ನುವಂಥ ಫೀಲಿಂಗ್ ಕೊಟ್ಟಿರಲಿಲ್ಲ ಕತೆಗಾರರ ಕೈಬರಹ ಪ್ರಕಟಿಸುವ ತಮಗೆ ನಮೋ ನಮಃ. ಯಾಕೆಂದರೆ ನನ್ನಂಥವರಿಗೆ ಅ ಅಕ್ಷರಗಳನ್ನು ನೋಡುವುದೇ ಒಂದು ಹಬ್ಬ.

**ಸವಣೂರ** **ಹಜರೇಸಾಬ ಬಿ. ನದಾ**

'ಭಾವನಾ' ಉದಯೋನ್ಮುಖ ಕತೆಗಾರರಿ text book ತೆರದಲ್ಲಿದೆ.

**ವಡ್ರಳ್ಳಿ** **ದತ್ತಾತ್ರೇಯ ಭಟ**

'ಭಾವನಾ' ಸಂಚಿಕೆಗಳನ್ನು ಪ್ರತಿ ತಿಂಗಳ ಕೊಂಡುತಂದು, ನನ್ನ ಮಗುವಿನಂತೆ, ಖುರಾನ ಗ್ರಂಥದಂತೆ ಜೋಪಾನವಾಗಿರಿಸಿದ್ದೇನೆ.

**ಇರುವೈಲು** **ಫಕ್ರುದ್ದೀನ**

ನವೆಂಬರ್ ಸಂಚಿಕೆ ವಿಶೇಷಾಂಕದ ಕ ಹೊಂದಿದೆ. ಜೀವನದ ಆರಂಭದಂತೆ ಮೊ ಲಿಗೆ 'ಮೊಗ್ಗಿನ ಜಡೆ' ಶುರುವಾಗಿದೆ. ವಿವೇಕ 'ಅಂಚು' ಉತ್ಕೃಷ್ಟ ಕತೆ. 'ಅಮ್ಮನ ಆ ಮನಮಿಡಿಯುವ ಕತೆ. ದಾಂಪತ್ಯ ನಿಷ್ಠೆ ಕು ವಿಚಾರ ಮಂಥನ ಇಷ್ಟವಾಯಿತು. ವಿನ್ಯಾಸದ ಪುಟದಿಂದ ಪುಟಕ್ಕೆ ಹಾರುವ ಗಾಳಿಪಟ ಐಡಿಯಾ ಚೆನ್ನಾಗಿದೆ.

**ಬೆಂಗಳೂರು** **ಪ್ರಚಂ**

ಮಕ್ಕಳಿಗಾಗಿ 'ಮೊಗ್ಗಿನ ಜಡೆ' ಆರಂಭಿಸಿ ಸಂತಸದ ಸಂಗತಿ. ಭಾವನಾ ಘಂಟೆ ಬರೆ

'ನನಗೆ ಬಂದಷ್ಟೇ ಬರೆಯೋದು' ನಿಜವಾಗಿಯೂ ಉತ್ತಮವಾಗಿದೆ.

ಕುಂದರಗಿ — ಗಣಪತಿ ಬಾಳೆಗದ್ದೆ

ಅನಂತಮೂರ್ತಿಯವರ ಕವನದ ಸಾಲುಗಳು ತುಂಬಾ ಹಿಡಿಸಿದವು. ಅಪರೂಪಕ್ಕೆ ಅವರನ್ನು ಓದಿಸಿದ್ದಕ್ಕಾಗಿ ಧನ್ಯವಾದಗಳು.

ಅಜ್ಜಂಪುರ — ಅಪೂರ್ವ

ಸಿಂಧು ಹೆಗಡೆಯವರ ಕವಿತೆಗಳು ಸುಂದರವಾಗಿವೆ. 'ಭಾವನಾ' ನಿಜಕ್ಕೂ ಸುಮಧುರ.

ಲಿಂಗಸೂಗೂರು — ಬಿ. ಎಸ್ . ಕೌಜಲಗಿ

ನಾನು ಹೇಳಿಕೊಳ್ಳಲಾಗದ ಒಳನೋವನ್ನು ಸಿಂಧು ಹೆಗಡೆಯವರ ಕವಿತೆಗಳು ಸರಳವಾಗಿ ಹೊರಗೆಡಹಿವೆ.

ಧಾರವಾಡ — ಸುನಂದಾ ಪ್ರಕಾಶ ಕಡಮೆ

ಸಿಂಧು ಹೆಗಡೆ ಅವರ ಕವನಗಳು ಅರ್ಥಪೂರ್ಣವಾಗಿದ್ದವು.

ಮೂಡಿಗೆರೆ — ಅನುಷಾ ಹೊನ್ನೇಕೂಲು

ನವೆಂಬರ್ 'ಶಬ್ದತೀರ'ದಲ್ಲಿ ಸ್ಪಷ್ಟ ಮಾನವೀಯ ತುಡಿತವಿದೆ. ನಮ್ಮನ್ನು ಸೂಕ್ಷ್ಮಮತಿಗಳೆಂದು ಭ್ರಮಿಸಿಕೊಂಡಿರುವ ನಾವೇ ಅಂತಹ ಚಿತ್ರಗಳನ್ನು ಆಗಾಗ ಕಣ್ತುಂಬ ಚಪ್ಪರಿಸುತ್ತೇವೆ ಎನ್ನುವುದು ಎಂಥ ಅಮಾನವೀಯ ಸಂಗತಿ?

ತಗಡೂರು — ಮಂಜುನಾಥ್ ಗೀತ

ಆವತ್ತು 'ಅಪರಾಧಿಗಳಿಗೆ ಬಹಿರಂಗ ಶಿಕ್ಷೆ' ಯಾಗುತ್ತಿರುವಾಗ ಊಟ ಮಾಡುತ್ತಿದ್ದೆ. ನಂತರ ಯಾಕೋ ಗಂಟಲಲ್ಲಿ ತುತ್ತು ಇಳಿಯಲಿಲ್ಲ. ಏನೋ ವಿಷಾದ, ನೋವು, ಜೊತೆಗೆ ಪಕ್ಕದ ರೂಮಿನಲ್ಲಿರುವ ಮಗನೂ ನೋಡಿಬಿಟ್ಟನಾ ಎಂಬ ಆತಂಕ! ನೀವು ಅದನ್ನೇ ನಿಮ್ಮ 'live'ನಲ್ಲಿ ಎಷ್ಟೊಂದು ಬಿಡಿ ಬಿಡಿಯಾಗಿ ಬಿಡಿಸಿಟ್ಟಿರಲ್ಲ!?

ಹಾಸನ — ಸುಮನ್ ಹೆಗಡೆ

ಕುಂವೀ ಬರೆದ 'ಚಿಲಕಲೂರಿ' ನನ್ನಿಂದ ಎಷ್ಟೋ ಸಲ ಓದಿಸಿಕೊಂಡಿತು.

ಯಮನೂರ — ನವೀನ್ ಕಲಕರ್ಣಿ

ಕುಂವೀ ಅವರ 'ಭಳಾರೇ ವಿಚಿತ್ರಂ' ತುಂಬಾ ಪ್ರಸ್ತುತ, ವಾಸ್ತವ, ರೋಚಕ ಅಂಕಣ.

ಬೆಂಗಳೂರು — ಗುರುಮೂರ್ತಿ ಪೆಂಡಾಕರ್

'ಚಿಲಕಲೂರಿ'ಯ ಚಿತ್ರಣದ ಜೀವಂತಿಕೆ ಆಗೀಗ ಎದುರಾಗುವ ಯಾರೋ ಕೆಲವರಲ್ಲಿ ಆತನನ್ನೇ ಕಾಣಿಸುತ್ತದೆ.

ಬೆಂಗಳೂರು — ಜಯಶ್ರೀ ದೇಶಪಾಂಡೆ

ವಿವೇಕರ 'ಅಂಚು' ಮತ್ತು ಶಶಿಕಲಾ ರಾಜಶೇಖರ್ ಅವರ 'ತೋರು ಬೆರಳು' ಕಥೆಗಳು ತುಂಬಾ ಇಷ್ಟವಾದವು.

ಸುಳ್ಯ — ಶ್ರೀಧರ ಮರುವಂಜ

ವಸುಮತಿ ಉಡುಪರ 'ವಿಕಲ್ಪ' ಇಷ್ಟವಾಯಿತು. ಮಿತ್ರಾವೆಂಕಟ್ರಾಜರ 'ಅಮ್ಮನ ಆಟ' ಓದುತ್ತಾ ಹೋದಂತೆ, ಮಂಡೆ ಮೇಲಿನ ಹೊರಿ ಇಳ್ದಂಗೆ ಆಯ್ತು ಕಾಣಿ.

ಹಿರೆಕೆರೂರು — ಮಂಜುನಾಥ ಮರವಂತೆ

'ಹಲೋ ಹಲೋ'ನ ಒಳ್ಳೆಯ ಅಂಕಲ್, ನೀವು ರಿ-ಡಯಲ್ ಮಾಡಬಹುದಿತ್ತಲ್ಲಾ?

ಕಬಕ — ಪುತ್ತಿ, ಅತ್ತಿ, ಮುನ್ನಿ, ಅನ್ನಿ

ರಾಜಶೇಖರ ಹತಗುಂದಿಯ 'ಬೆಟ್ಟಕ್ಕೆ ಚಳಿ' ಕತೆ, ಪ್ರಗತಿಪರ ಮಾತಿಗೆ ವಾಸ್ತವ ಬದುಕು ತಡೆಗೋಡೆಯಾಗಿ ನಿಲ್ಲುವದರ ಸ್ವಾಭಾವಿಕ ಚಿತ್ರಣವಾಗಿದೆ.

ಶಹಾಪುರ — ಸಿದ್ಧರಾಮ ಉಪ್ಪಿನ

ಅಸ್ವೀಕೃತ ಕತೆಗಳನ್ನು ಹಿಂದಿರುಗಿಸುವಾಗ ಅದರೊಂದಿಗೆ ಮುದ್ರಿತ ಕಾರ್ಡ್ ಬದಲಿಗೆ ಕತೆಯ ಕುರಿತು ಕೈ ಬರಹದಲ್ಲೇ ನಾಕು ಸಾಲು ಬರೆದಿರುವುದು ನನಗೆ ತುಂಬಾ ಖುಷಿಯಾಗಿದೆ.

ಕೆಜಿಎಫ್ — ಐ.ಎಂ. ಪ್ರಭುಕುಮಾರ್

'ಸಹಮತ'ದಲ್ಲಿ ದಾಂಪತ್ಯ ನಿಷ್ಠೆ ಕುರಿತು ವಿಸ್ತಾರ ರೂಪವಾದ ತಜ್ಞ ಲೇಖಕರ ಸ್ಪಂದನ ಒಂದು ರೀತಿಯಲ್ಲಿ ಒಳ್ಳೆಯ ತಿಳಿವಳಿಕೆ ಕೊಟ್ಟಿದೆ.

ಇಳಂತಿಲ — ಲಿಂಗಪ್ಪ .ಎನ್





ಕೊನೇ-ಸಿಪ್

## ಹಣ ಉಳಿಸುವ ವಿಧಾನಗಳು - ಕೈಪಿಡಿ



**ಆಟೋರಿಕ್ಷಾದಲ್ಲಿ ಇತರರೊಂದಿಗೆ ಪ್ರಯಾಣ ಮಾಡುವ ಸಂದರ್ಭದಲ್ಲಿ-**

- ಹತ್ತುವ ಮುನ್ನ ಮೀಟರ್ ಬಗ್ಗೆ ಜೋರು ಚೌಕಾಶಿ ಮಾಡುವುದು. ಇಳಿಯುವಾಗ ಸುತ್ತಮು ಅಂಗಡಿಯಿಲ್ಲದ ಏಕಾಂತ ಸ್ಥಳದಲ್ಲಿ ಆಟೋ ನಿಲ್ಲಿಸುವುದು. ಪರ್ಸ್‌ನಿಂದ 500 ಅಥವಾ 10 ರೂಪಾಯಿ ನೋಟು ತೆಗೆದು ಲೊಚಗುಡುವುದು.
- ಒಂದೇ ದಿಕ್ಕಿನಲ್ಲಿ ಹೋಗುವ ಆಟೋದಲ್ಲಿ ಇತರರೊಂದಿಗೆ ಕೂತಾಗ, ಮೊದಲೇ (ಮನೆಗೆ ಸ್ವ ದೂರವಾದರೂ ಸರಿ) ಇಳಿದು ಬಿಟ್ಟು - ಸಾರಿ, ಸ್ವಲ್ಪ ಕೆಲಸವಿತ್ತು ಥ್ಯಾಂಕ್ಸ್ - ಅಂತ ಕಿಸಿಯುವುದು.

**ಹೋಟೆಲಿನಲ್ಲಿ ಬಿಲ್ ಪಾವತಿ ಮಾಡುವ (ಮಾಡದಿರುವ) ವಿಧಾನ-**

- ಹೋಟೆಲಿಗೆ ಹೋಗೋಣವೆಂಬ ಮಾತು, ಖಂಡಿತವಾಗಿಯೂ ನಿಮ್ಮ ಬಾಯಿಯಿಂದ ಬರಬಾರದು ಯಾರಾದರೂ ಆ ಪ್ರಸ್ತಾಪ ಮಾಡಿದಾಗ ಅವಕಾಶ ಕಳೆದುಕೊಳ್ಳಬಾರದು. ■ ಬಿಲ್ ಬರು ಸಮಯಕ್ಕೆ ಸರಿಯಾಗಿ ಕೈ ತೊಳೆಯಲು ಹೋಗುವುದು. ಕೈಯನ್ನು ಎಷ್ಟು ಶುಭ್ರವಾಗಿ ಸಾಧ್ಯವೋ (ಎಷ್ಟು ಹೊತ್ತು ಸಾಧ್ಯವೋ) ಅಷ್ಟು ತೊಳೆಯುತ್ತಲೇ ಇರುವುದು. ■ ಪರ್ಸ್ ಮರೆತಂತೆ ನಟಿಸುವುದು (ದೊಡ್ಡ ನೋಟಿಗೆ ಚಿಲ್ಲರೆ ಹುಡುಕುವ ಸ್ಟ್ರಾಟಜಿ ಇಲ್ಲಿ ಕೆಲಸ ಮಾಡುವುದಿಲ್ಲವೆಂದು ನೆನಪಿಡುವುದು ■ ಅದೂ ಸಾಧ್ಯವಾಗದಿದ್ದರೆ ನೀವು ತಿಂದ ತಿಂಡಿಯ ದುಡ್ಡು ಮಾತ್ರ ಕೊಟ್ಟು 'lets share (ಹಂಚಿಕೊಳ್ಳೋಣ) ಅನ್ನುವುದು. ■ ಅಕಸ್ಮಾತ್ ತಿಂಡಿಗೆ ನೀವೇ ದುಡ್ಡು ಕೊಡಬೇಕಾದ ಪರಿಸ್ಥಿ ಬರುತ್ತದೆನ್ನಿಸಿದರೆ - ಏನು ಬೇಕು ಅಂತ ಕೇಳದೇ ಬೈಟೂ ದೋಸೆ, ಬೈಟೂ ಕಾಫಿಗೆ ಆರ್ಡರ್ ನೀಡುವುದು. ಇಲ್ಲವಾದರೆ ಎರಡು ದಿನಕ್ಕಾಗುವಷ್ಟು ತಿಂಡಿಯನ್ನ ಗದಕುವುದು. ■ ಒಂದೇ ದಿನದ ಇತರರೊಂದಿಗೆ ಸಿನೇಮಾ/ಕಾಫಿ/ಆಟೋರಿಕ್ಷಾ ಹೀಗೆ ಅನೇಕ ಖರ್ಚುಗಳು ಬರುವುದಿದ್ದರೆ ಎಲ್ಲಕ್ಕಿಂ ಕಡಿಮೆ ಖರ್ಚನ್ನ (ಮುಕ್ಕಾಲುಪಾಲು ಇದು ಆಟೋ ಖರ್ಚಾಗಿರುತ್ತೆ) ಜಬರ್ದಸ್ತಿ ಗಲಾಟೆ ಮಾ ಕೊಟ್ಟುಬಿಡುವುದು! ನಂತರ ಸುಮ್ಮನಿದ್ದುಬಿಡುವುದು.

**ಮದುವೆ ಮುಂಜಿ ಸಮಾರಂಭಗಳಲ್ಲಿ**

- ಇಡೀ ಸಂಸಾರ ಹೋಗಿ ಉಂಡು ಬರುವುದು. ■ ಹಳೇ ಗಿಫ್ಟನ್ನ ಹೊಸ ಕಾಗದದಲ್ಲಿ ಸು ಕೊಡುವುದು. ■ ಏನೂ ಇಲ್ಲವಾದರೆ ಹನ್ನೊಂದು ರೂಪಾಯಿ ಕವರಿಗೆ ಹಾಕಿ ಮೇಲೆ ಹೆಸ ಬರೆಯದೇ ಕೊಟ್ಟುಬಿಡುವುದು. ■ ಅಕಸ್ಮಾತ್ ದುಬಾರಿ ಗಿಫ್ಟ್ ಕೊಟ್ಟರೆ ಅದರ ಬೆಲೆಯ ಚೀಟಿಯ ಖಂಡಿತಾ ಕೀಳಬಾರದು. ನಿಮ್ಮ ಹೆಸರನ್ನು ದೊಡ್ಡದಾಗಿ ಬರೆಯುವುದು.

**ಯಾರನ್ನಾದರೂ ಮನೆಗೆ ಕರೆಯುವಾಗ**

- ಯಾವಾಗಲಾದರೂ ಬನ್ನಿ ಅಂತ ಸಮಯ ಹೇಳದೇ ಆಹ್ವಾನಿಸುವುದು. ■ ಅಕಸ್ಮಾತ್ ಊಟ ಕರೆಯಲೇಬೇಕಾದ ಪರಿಸ್ಥಿತಿ ಬಂದಾಗ ಮೊದಲು ಒಂದು ದೊಡ್ಡ ಲೋಟದಲ್ಲಿ ನಿಂಬೂಪಾ ತುಂಬಿಸಿಕೊಡುವುದು. ■ ಸಾಧಾರಣ ಅಡಿಗೆ ಮಾಡಿ, ಗಂಡ-ಹೆಂಡತಿ ಜಗಳವಾಡಿರುವಂತೆ ನಟಿಸುವುದ

**(ಮುಂದಿನ ತಿಂಗಳು: ಮನೆಗೆ ಅತಿಥಿಗಳು ಬರದಂತೆ ನೋಡಿಕೊಳ್ಳುವ ವಿಧಾನಗಳು.)**

- **ಕಚಗುಳಿ :** ಪೆನ್ನಿಗಾಗಿ ಆಫೀಸಿನಲ್ಲಿರುವವರನ್ನೆಲ್ಲಾ ಕೇಳಿ, 'ಸಾರಿ' ಎನ್ನಿಸಿಕೊಂಡು ಖಿನ್ನನಾದ ಅ 'ಕಂಜೂಸ್ ನನ್ಮಕ್ಳು' ಎಂದು ಬಯ್ದುಕೊಳ್ಳುತ್ತಾ ಜೇಬಿನಿಂದ ತನ್ನ ಪೆನ್ ತೆಗೆದು ಬರೆಯಲಾರಂಭಿಸಿದ

Printed, published and owned by **Vijay Sankeshwar**, Published at 1st Floor, "Giriraj Annexe", P.W.D. Circuit House Road, HUBLI - 580 029 Karnataka Ph: 253656, 253657, 253658. Fax: 0836-253
Printed at Anand Printers & Publishers, 6/127, 5th Cross, KPN Extn., Bangalore - 560 002
Editor: **Jayant Kaikini**

